

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಪಿಎಚ್.ಡಿ. ಅಧ್ಯಯನದ ಮಹಾಪ್ರಬಂಧ

# ಆಧುನಿಕ ಕನ್ನಡ ಮಹಾಕಾವ್ಯಗಳಲ್ಲಿ ರಾಮಾಯಣದ ಕಥಾಂತರಗಳು

ಸಂಶೋಧನ ವಿದ್ಯಾರ್ಥಿ
ಹೆಚ್.ಪಿ. ರವೀಶ್

ಮಾರ್ಗದರ್ಶಕರು
ಡಾ॥ಟಿ.ವಿ.ವೆಂಕಟಾಚಲ ಶಾಸ್ತ್ರೀ





ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ
ಬೆಂಗಳೂರು
೨೦೦೯



ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಪಿಎಚ್.ಡಿ. ಅಧ್ಯಯನದ ಮಹಾಪ್ರಬಂಧ

# ಆಧುನಿಕ ಕನ್ನಡ ಮಹಾಕಾವ್ಯಗಳಲ್ಲಿ ರಾಮಾಯಣದ ಕಥಾಂತರಗಳು

ಸಂಶೋಧನ ವಿದ್ಯಾರ್ಥಿ
ಹೆಚ್.ವಿ.ರವೀಶ್

ಮಾರ್ಗದರ್ಶಕರು
ಡಾ||ಟಿ.ವಿ.ವೆಂಕಟಾಚಲ ಶಾಸ್ತ್ರೀ



ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ
ಬೆಂಗಳೂರು
೨೦೦೯

## ಅಭ್ಯರ್ಥಿಯ ಪ್ರಮಾಣಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ೨೦೦೯-೨೦೧೦ನೇ ಸಾಲಿನ ಪಿಎಚ್.ಡಿ. ಪದವಿಗಾಗಿ **"ಆಧುನಿಕ ಕನ್ನಡ ಮಹಾಕಾವ್ಯಗಳಲ್ಲಿ ರಾಮಾಯಣದ ಕಥಾಂತರಗಳು"** ಎಂಬ ಮಹಾಪ್ರಬಂಧವನ್ನು ಡಾ॥ಟಿ.ವಿ.ವೆಂಕಟಾಚಲ ಶಾಸ್ತ್ರೀ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಹಿ/

ಎಚ್. ವಿ. ರವೀಶ

(ಹೆಚ್.ವಿ.ರವೀಶ್)

ಸಂಶೋಧನ ವಿದ್ಯಾರ್ಥಿ

ದಿನಾಂಕ : 28-08-2009

ಸ್ಥಳ : ಬೆಂಗಳೂರು

# ಮಾರ್ಗದರ್ಶಕರ ದೃಢೀಕರಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ೨೦೦೯-೨೦೧೦ನೇ ಸಾಲಿನ ಪಿಎಚ್.ಡಿ. ಪದವಿಗಾಗಿ **"ಆಧುನಿಕ ಕನ್ನಡ ಮಹಾಕಾವ್ಯಗಳಲ್ಲಿ ರಾಮಾಯಣದ ಕಥಾಂತರಗಳು"** ಎಂಬ ಮಹಾಪ್ರಬಂಧವನ್ನು ಹೆಚ್.ವಿ. ರವೀಶ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಹಿ

(ಡಾ|| ಟಿ.ವಿ. ವೆಂಕಟಾಚಲ ಶಾಸ್ತ್ರೀ)
ಮಾರ್ಗದರ್ಶಕರು

ದಿನಾಂಕ : 28-08-2009
ಸ್ಥಳ : ಬೆಂಗಳೂರು

| ಪರಿವಿಡಿ | ಪುಟಸಂಖ್ಯೆ |
|---|---|

# ಅಧ್ಯಾಯ -೧

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

**ಕಥಾಂತರದ ಪರಿಕಲ್ಪನೆ–ಆ ಪರಿಕಲ್ಪನೆಯ ಸವಿವರ ವಿವೇಚನೆ:–**

ಭಾರತದಲ್ಲಿ ರಾಮಾಯಣದ ಮೂರು ಕಥಾಪರಂಪರೆಗಳು ಪ್ರಧಾನವಾಗಿ ರೂಢಿಯಲ್ಲಿವೆ. ಒಂದು ವೈದಿಕ ರಾಮಾಯಣ ಪರಂಪರೆ, ಎರಡು ಜೈನರಾಮಾಯಣ ಪರಂಪರೆ, ಮೂರು ಜಾನಪದ ರಾಮಾಯಣ ಪರಂಪರೆ. ವೈದಿಕ ರಾಮಾಯಣ ಪರಂಪರೆಗೆ ಮೂಲಪುರುಷ ಆದಿಕವಿ ವಾಲ್ಮೀಕಿ, ಜೈನ ರಾಮಾಯಣ ಪರಂಪರೆಗೆ ವಿಮಲಸೂರಿ ಮತ್ತು ರವಿಷೇಣ ಮೊದಲಾದವರು ಆದ್ಯರು. ಇನ್ನು ಜಾನಪದ ರಾಮಾಯಣ ಪರಂಪರೆಯು ಭಾರತದಾದ್ಯಂತ ಬಹುಪಾಲಿನ ಎಲ್ಲ ಪ್ರಾಂತೀಯ ಭಾಷೆಗಳಲ್ಲೂ ನಾನಾ ಕವಲುಗಳಲ್ಲಿ ಹಬ್ಬಿ ಹರಡಿಕೊಂಡಿದೆ. ಈ ಪರಂಪರೆಗಳ ನಡುವೆ ಕೊಡುಕೊಳೆ ನಡೆದೇ ಇದೆ. ಮೇಲೆ ಹೇಳಿದ ಮೂರು ನೆಲೆಯ ರಾಮಾಯಣದ ವಸ್ತು ಪ್ರಪಂಚವನ್ನು ಸಂಕ್ಷಿಪ್ತವಾಗಿ ಈ ರೀತಿ ಹೇಳಬಹುದು.

### ವೈದಿಕ ಪರಂಪರೆ:–

ವೈದಿಕ ರಾಮಾಯಣ ಪರಂಪರೆಗೆ ಮೊದಲೇ ತಿಳಿಸಿದಂತೆ ಮೂಲಪುರುಷ ಆದಿಕವಿ ವಾಲ್ಮೀಕಿ. ಅವನ ಬಗ್ಗೆಯೂ ಒಂದು ಕಥೆಯಿದೆ. ರಾಮಾಯಣದ ಹುಟ್ಟಿಗೂ ಒಂದು ಕಥೆಯಿದೆ. ಅಧ್ಯಾತ್ಮ ಮತ್ತು ಆನಂದ ರಾಮಾಯಣಗಳಲ್ಲಿ ಹಾಗೂ ಮಹಾಭಾರತದಲ್ಲಿ ವಾಲ್ಮೀಕಿಯ ಕಥೆ ಬರುತ್ತದೆ. ವಾಲ್ಮೀಕಿ ಪ್ರಚೇತಸ ಎಂಬ ಋಷಿಯ ಮಗ. ಈತ ಹುಟ್ಟಿನಿಂದ ಉತ್ತಮನಾಗಿ ಹುಟ್ಟಿದ್ದರೂ ಯೌವನಕ್ಕೆ ಕಾಲಿಟ್ಟಾಗ ಕಳ್ಳರ ಮತ್ತು ದುರ್ಜನರ ಸಹವಾಸಕ್ಕೆ ಬಿದ್ದು ದುಷ್ಟನಾದ. ಕಾಲನಂತರದಲ್ಲಿ ಒಬ್ಬ ಋಷಿ ಈತನಿಗೆ ಮಂತ್ರೋಪದೇಶ ಮಾಡಿದ. ಅದನ್ನು ಧ್ಯಾನಿಸುತ್ತ ಏಕಾಗ್ರಚಿತ್ತನಾಗಿ ಬಹುಕಾಲದವರೆಗೆ ಒಂದೆಡೆ ನಿಶ್ಚಲನಾಗಿ ಕುಳಿತುಬಿಟ್ಟ. ಆಗ ಅವನ ಸುತ್ತಲೂ ಹುತ್ತ ಬೆಳೆಯಿತು. ಕಡೆಗೊಂದು ದಿನ ವರುಣನು ಮಳೆಗರೆಯಲಾಗಿ ಆ ಹುತ್ತ ಕರಗಿ ವಾಲ್ಮೀಕಿಯು ಜನರ ಕಣ್ಣಿಗೆ ಬಿದ್ದನು. ವಲ್ಮೀಕದಲ್ಲಿ ಹುಟ್ಟಿದ್ದರಿಂದ ಜನ 'ವಾಲ್ಮೀಕಿ' ಎಂದು ಕರೆದರು. ತಮಸಾ ನದಿಯ ತಡಿಯಲ್ಲಿ ವಾಲ್ಮೀಕಿ ತನ್ನ

ಶಿಷ್ಯರೊಡನೆ ಆಶ್ರಮದಲ್ಲಿ ವಾಸಿಸತೊಡಗಿದನು. ಅಲ್ಲಿಗೆ ಒಮ್ಮೆ ನಾರದರು ಬಂದರು. ವಾಲ್ಮೀಕಿ ಮಹರ್ಷಿಯು ನಾರದರನ್ನು ಕುರಿತು:

**ಕೋನ್ವಸ್ಮಿನ್ ಸಾಂಪ್ರತಂ ಲೋಕೇ ಗುಣವಾನ್ ಕಶ್ಚ ವೀರ್ಯವಾನ್ ।**

**ಧರ್ಮಜ್ಞಶ್ಚ ಕೃತಜ್ಞಶ್ಚ ಸತ್ಯವಾಕ್ಯೋ ದೃಢವ್ರತಃ ॥**

**ಮಹರ್ಷೇ ತ್ವಂ ಸಮರ್ಥೋऽಸಿ ಜ್ಞಾತುಮೇವಂ ವಿಧಂ ನರಮ್ ।**[1]

ಸದ್ಯಕ್ಕೆ ಜೀವಿಸಿರುವವರಲ್ಲಿ ಗುಣವಾನ್, ವೀರ, ಧರ್ಮಜ್ಞ, ಕೃತಜ್ಞ, ಸತ್ಯವಾದಿ, ದೃಢಸಂಕಲ್ಪಿ, ಸದಾಚಾರನಿಷ್ಠ, ಸಕಲರಿಗೂ ಹಿತಬಯಸುವವನು, ಕಾಂತಿಯುಕ್ತ, ಕಾರ್ಯದಕ್ಷ, ಕ್ರೋಧವನ್ನು ಜಯಿಸಿದವನು, ವಿದ್ವಾಂಸ, ಆನಂದದಾಯಿ, ಧೈರ್ಯಶಾಲಿ, ಅಸೂಯೆ ಪಡದವನು, ದೇವತೆಗಳೂ ಯುದ್ಧಕ್ಕೆ ಹೆದರುವಂತಹನು (ಒಟ್ಟು ಹದಿನಾರು ಗುಣಗಳು) ಈ ಶ್ರೇಷ್ಠ ಗುಣಗಳು ಯಾರಲ್ಲಿವೆ? ಎಂದು ಕೇಳಿದಾಗ ನಾರದನು ವಾಲ್ಮೀಕಿ ಮಹರ್ಷಿಗೆ ರಾಮನಕಥೆಯನ್ನು ಸ್ಥೂಲವಾಗಿ (೧೦೦ ಶ್ಲೋಕಗಳು) ತಿಳಿಸಿಕೊಡುವನು. ನಾರದ ಹೇಳಿದಂತೆ ಈ ಶ್ಲೋಕಗಳು ಒಟ್ಟಾರೆ ಗ್ರಂಥದ ನಾಂದಿಯೂ ಹೌದು. ಇದನ್ನು 'ನಾರದವಾಕ್ಯಮ್' ಎಂದೂ 'ಮೂಲ ರಾಮಾಯಣವತ್' ಎಂದೂ ಕರೆಯುತ್ತಾರೆ.

ನಾರದರಿಂದ ಉಕ್ತವಾದ ಈ ಕಥೆಯನ್ನು ಕೇಳಿದ ನಂತರ ತನ್ನ ಶಿಷ್ಯರೊಡಗೂಡಿ ಗಂಗಾನದಿ ಸಮೀಪದಲ್ಲಿರುವ ತಮಸಾನದಿ ತಡಿಗೆ ವಾಲ್ಮೀಕಿ ಬಂದನು. ಅಲ್ಲಿ ವ್ಯಾಧನೊಬ್ಬನ ಬಾಣಕ್ಕೆ ಗಂಡು ಕ್ರೌಂಚಪಕ್ಷಿ ಗುರಿಯಾಯಿತು. ಆಗ ಹೆಣ್ಣು ಕ್ರೌಂಚಪಕ್ಷಿಯ ಆಕ್ರಂದನ ಮುಗಿಲು ಮುಟ್ಟಿತು. ಕ್ರೌಂಚಪಕ್ಷಿಗಳ ಶೋಕವನ್ನು ಕಂಡು ವಾಲ್ಮೀಕಿ ತಾನೂ ಶೋಕಾಕುಲನಾದನು. ಭಾವನಾವಿವಶನಾಗಿ

**ಮಾ ನಿಷಾದ ಪ್ರತಿಷ್ಠಾ ತ್ವಮಗಮಃ ಶಾಶ್ವತೀ ಸಮಾಃ ।**

**ಯತ್ಕ್ರೌಂಚ ಮಿಥುನಾದೇಕಮವಧೀಃ ಕಾಮಮೋಹಿತಮ್ ॥**[2]

(ಕಾಮ ಮೋಹಿತವಾಗಿದ್ದ ಕ್ರೌಂಚ ದಂಪತಿಗಳಲ್ಲಿ ಒಂದನ್ನು ನಿರ್ದಯವಾಗಿ ವಧಿಸಿದ ಕಾರಣ, ಎಲೈ ನಿಷಾದನೇ, ನೀನು ಅನಂತಕಾಲ ಸುಖವನ್ನು ಹೊಂದದಿರುಲಿ)

ಈ ಶ್ಲೋಕವು ತನ್ನ ಬಾಯಿಂದ ಬಂದುದೇ ತಡ ಸ್ವತಃ ವಾಲ್ಮೀಕಿಯೇ ಆಶ್ಚರ್ಯಚಕಿತನಾದನು! ಶಾಪವನ್ನಿತ್ತುದರಿಂದ ಪುಣ್ಯಹನನ ದುಃಖವು ಉಂಟಾಗಿದ್ದರೂ ಈ ಲಯಬದ್ಧಶ್ಲೋಕದಿಂದ ಆತನ ಪ್ರತಿಭೆ ಜಾಗೃತವಾಗಿ ಶೋಕಾವೇಗದಿಂದ ಈ ಶ್ಲೋಕವನ್ನೇ ಕುರಿತು ಚಿಂತಿಸುತ್ತಿದ್ದಾಗ ಬ್ರಹ್ಮದೇವ ಅವನಿಗೆ ಕಾಣಿಸಿಕೊಂಡು "ಅದು ಶ್ಲೋಕವೇ ಸರಿ ಎಂದೂ ಅದರ ನಿಜಸ್ವರೂಪವನ್ನು ಸ್ಥಿರೀಕರಿಸಿದನು. ಆ ಛಂದಸ್ಸಿನಲ್ಲಿಯೇ ರಾಮನ ಜೀವನಚರಿತ್ರೆಯನ್ನು ಹೇಳು ಚೆನ್ನಾಗುತ್ತದೆ"[3] ಎಂದನು. ವಾಲ್ಮೀಕಿಯು ಅದೇ ಲಯದಲ್ಲಿ ೨೪,೦೦೦ ಶ್ಲೋಕಗಳಲ್ಲಿ ರಾಮಚರಿತೆಯ ಸಕಲವೃತ್ತಾಂಗಳನ್ನೂ ಬಣ್ಣಿಸಿ ಕಾವ್ಯರಚನೆ ಮಾಡಿದನು.

ರಾಮಾಯಣವನ್ನು ರಚಿಸಿದ ವಾಲ್ಮೀಕಿಯು, ರಾಮಾಯಣದ ಒಂದು ಪ್ರಮುಖ ಪಾತ್ರವೂ ಆಗಿದ್ದಾನೆ. ರಾಮನಿಂದ ಪರಿತ್ಯಕ್ತಳಾದ ಸೀತೆಗೆ ತನ್ನ ಆಶ್ರಮದಲ್ಲಿ ಆಶ್ರಯವಿತ್ತನು. ಆಕೆಯಲ್ಲಿ ಜನಿಸಿದ ರಾಮನ ಅವಳಿಮಕ್ಕಳಾದ ಲವ-ಕುಶರನ್ನು ವಾಲ್ಮೀಕಿ ಸಾಕಿ ಬೆಳೆಸಿ, ಅವರಿಗೆ ಈ ಕಾವ್ಯವನ್ನು ಕಲಿಸಿದನು. ಆ ಕಿರಿಯರು ತಂತ್ರೀವಾದ್ಯದೊಡನೆ; ಈ ರಾಮಾಯಣವನ್ನು ರಾಮನು ಅಶ್ವಮೇಧಯಾಗ ಮಾಡಿದ ಸಂದರ್ಭದಲ್ಲಿ ಆತನ ಮುಂದೆ ಮತ್ತು ನೆರೆದ ಪ್ರತಿಷ್ಠಿತ ಸಭೆಯಲ್ಲಿ ಸುಶ್ರಾವ್ಯವಾಗಿ ಹಾಡಿದರು.

ವಾಲ್ಮೀಕಿಯ ಶೈಲಿ, ವರ್ಣನೆ, ಪ್ರಾಸಂಗಿಕಕಥೆಗಳನ್ನು ಪೋಣಿಸುವ ತಂತ್ರ, ಪ್ರಕೃತಿಯ ವರ್ಣನೆ ಅತ್ಯಂತ ಮನೋಹರವಾಗಿವೆ. ವಾಲ್ಮೀಕಿ ರಾಮಾಯಣ ೨೪,೦೦೦ ಶ್ಲೋಕಗಳಿರುವ ಮಹಾಕಾವ್ಯ. ಇದರಲ್ಲಿ ಏಳು ಕಾಂಡಗಳು, ೫೦೦ ಸರ್ಗಗಳು ಇವೆ. ಮುಂದಿನ ಮಹಾಕಾವ್ಯಗಳಿಗೆ ಇದೊಂದು ಮಾದರಿಯಾಗಿದೆ ಎನ್ನಬಹುದು.

**ಜೈನ ರಾಮಾಯಣ ಪರಂಪರೆ:-**

ಜೈನ ಮತದ ಸಿದ್ಧಾಂತಗಳನ್ನು ಕಾವ್ಯರೂಪದಲ್ಲಿ ರಚಿಸಿದವರು ಜೈನಮುನಿಗಳು. ಜೈನಧರ್ಮದಲ್ಲಿ ಅಹಿಂಸಾ ಸಿದ್ಧಾಂತ ಪ್ರಮುಖವಾದುದು. ವೈದಿಕಧರ್ಮದಲ್ಲಿದ್ದಂತಹ ಬಲಿಪೂಜೆ, ಆರಾಧನೆ ಅವರ ಮತಕ್ಕೆ ಅಳವಡುವಂತಹುದಲ್ಲ. ಆದ್ದರಿಂದ ಜೈನರು ಜನಪ್ರಿಯ ಮಹಾಕಾವ್ಯಗಳ ಕಥೆಗಳನ್ನೂ, ಪ್ರಸಂಗಗಳನ್ನೂ ಮೂಲದಿಂದ ಬಹುಮಟ್ಟಿಗೆ ಬದಲಾಯಿಸಿ ತಮಗೆ ಬೇಕಾದಂತೆ ರಚಿಸಿಕೊಂಡರು. ಜೊತೆಗೆ ರಾಮಾಯಣ, ಮಹಾಭಾರತಗಳಿಗೆ ಪೂರ್ಣವಾಗಿ ಪರ್ಯಾಯವೆನಿಸುವಂತಹ ಜೈನಧರ್ಮೀಯ ಕಾವ್ಯಗಳನ್ನು ರಚಿಸಿದರು. ಆ ಕಾವ್ಯಗಳನ್ನು ಜೈನದರ್ಶನಕ್ಕೆ ಅಳವಡುವಂತೆ ಮಾಡಿದರು. ಜೈನ ರಾಮಾಯಣಗಳನ್ನು ಮುಖ್ಯವಾಗಿ ಎರಡು ಪರಂಪರೆಗಳಾಗಿ ಗುರುತಿಸಬಹುದು. ೧) ವಿಮಲಸೂರಿಯ ಪರಂಪರೆ. ೨) ಗುಣಭದ್ರನ ಪರಂಪರೆ. ಇವೆರಡರಲ್ಲಿ ಕನ್ನಡ ರಾಮಾಯಣದ ದೃಷ್ಟಿಯಿಂದ ವಿಮಲಸೂರಿಯ ಪರಂಪರೆ ಬಹಳ ಮುಖ್ಯವಾದುದು. ಆದುದರಿಂದ ವಿಮಲಸೂರಿಯ ರಾಮಾಯಣದ ಕಥೆಯಲ್ಲಿ ಆಗಿರುವ ಕಥಾಂತರಗಳೇನು ಎನ್ನುವುದನ್ನು ಗಮನಿಸುವುದು ಅತ್ಯಂತ ಸೂಕ್ತವಾದುದು.

ವಿದ್ವಾಂಸರ ಪ್ರಕಾರ ಜೈನ ಸಾಹಿತ್ಯದಲ್ಲಿ ಅತ್ಯಂತ ಪ್ರಾಚೀನ ಉಪಲಬ್ಧಕೃತಿಯೆಂದರೆ ವಿಮಲಸೂರಿಯ 'ಪಉಮಚರಿಯ'. ಈ ಕೃತಿಗೆ ವಾಲ್ಮೀಕಿ ರಾಮಾಯಣವೇ ಆಧಾರವಾಗಿದ್ದರೂ 'ವಾಲ್ಮೀಕಿ ರಾಮಾಯಣ'ದಲ್ಲಿ ಬರುವ ದೈವಿಕ ಘಟನೆಗಳನ್ನು ಬಿಟ್ಟು; ತನ್ನ ಕೃತಿಯಲ್ಲಿ ಮೂಲಕಥೆಗೆ ವಿಶೇಷವಾದ ರೀತಿಯಲ್ಲಿ, ವಾಸ್ತವಿಕ ಸ್ಪರ್ಶವನ್ನು ವಿಮಲಸೂರಿ ನೀಡಿದ್ದಾನೆ. ಜೊತೆಗೆ ರಾಮಕಥೆಗೆ ಜೈನಸಿದ್ಧಾಂತಗಳನ್ನು ಅಳವಡಿಸಿದ್ದಾನೆ. ರಾಮ ಮತ್ತು ರಾವಣನ ಪಕ್ಷಗಳ; ಹೆಚ್ಚಿನ ಪಾತ್ರಗಳು ಜೈನದೀಕ್ಷೆಯನ್ನು ಸ್ವೀಕರಿಸಿ, ಜೈನವ್ರತಪಾಲನೆ ಮಾಡಿದಂತೆ ಚಿತ್ರಿಸಲಾಗಿದೆ. ಲಕ್ಷ್ಮಣ ಅಹಿಂಸಾಪಾಲನೆ ಮಾಡದಿರುವ ಕಾರಣ ವಿಮಲಸೂರಿಯ ರಾಮಾಯಣದಲ್ಲಿ, ಅವನು ನರಕಕ್ಕೆ ಹೋಗಬೇಕಾಯಿತು. ಆದರೆ ವಿಚಿತ್ರ ಸಂಗತಿಯೆಂದರೆ; ವಿಮಲಸೂರಿಯ ರಾಮಾಯಣದಲ್ಲಿ ಲಕ್ಷ್ಮಣನಿಂದ ಶಂಭೂಕನ ವಧೆಯಾಗದಿರುತ್ತಿದ್ದರೆ, ರಾಮ ರಾವಣರ ಯುದ್ಧದ ರಣವಾದ್ಯ ಮೊಳಗುತ್ತಿರಲಿಲ್ಲ. ಪ್ರತಿನಾಯಕ (ಪ್ರತಿವಾಸುದೇವ)ನಾದ ರಾವಣನಿಗೆ, ಅತ್ಯಂತ ಸಹನೆಯಿಂದ ಅರಿವನ್ನುಂಟುಮಾಡುವ ಪ್ರಯತ್ನ ನೆಡೆಯುತ್ತದೆ. ಆದುದರಿಂದಲೇ ರಾವಣನಂತಹ ಪಾತ್ರದಲ್ಲಿಯೂ ಹಲವು ಆದರ್ಶಗುಣಗಳನ್ನು ಜೈನಕವಿಗಳು ಚಿತ್ರಿಸಿದ್ದಾರೆ. ವಿಮಲಸೂರಿ ಪರಂಪರೆಯ ಕಾವ್ಯಗಳನ್ನು ಅನುಸರಿಸಿ; ಕನ್ನಡದಲ್ಲಿ

ಮೊದಲಬಾರಿಗೆ ಜೈನ ರಾಮಾಯಣವನ್ನು ಬರೆದ, ನಾಗಚಂದ್ರ ಕವಿಯ ರಾವಣ ಇದಕ್ಕೆ ಒಂದು ಉತ್ತಮ ನಿದರ್ಶನ. ಇವನು ಕೇವಲ ಮಾಂಸಭಕ್ಷಣೆ ಮಾಡಿ, ಲೋಕಕ್ಕೆ ಉಪಟಳ ನೀಡುವ ರಾಕ್ಷಸನಲ್ಲ. ಹಲವು ವಿದ್ಯೆಗಳನ್ನು (ಅವಲೋಕಿನಿ) ಸಿದ್ಧಿಮಾಡಿಕೊಂಡ, ಆಕರ್ಷಕ ವ್ಯಕ್ತಿತ್ವದ ವಿದ್ಯಾಧರ, ಬ್ರಹ್ಮಚರ್ಯ, ಅಣುವ್ರತ, ಪರಾಂಗನಾವಿರತಿ–ಮುಂತಾದ ಜೈನ ಸಿದ್ಧಾಂತಗಳನ್ನು ಪಾಲಿಸುತ್ತಿದ್ದ. ಹೀಗೆ ವಿಮಲಸೂರಿಯ ರಾಮಾಯಣವು; ಕನ್ನಡ ಜೈನ ರಾಮಾಯಣ ಪರಂಪರೆಯ ಮೇಲೆ, ಗಾಢ ಪ್ರಭಾವವನ್ನು ಬೀರಿದೆ.)

**ಜಾನಪದ ಪರಂಪರೆ:–**

ರಾಮಕಥೆಯು ಲಿಖಿತ ರೂಪದಲ್ಲಿ ಕಾಣಿಸಿಕೊಳ್ಳುವ ಮೊದಲು; ಜಾನಪದಗೀತೆಯ ರೂಪದಲ್ಲಿತ್ತೆಂದೂ, ಸಭೆಗಳಲ್ಲಿ ಹಾಡಲ್ಪಡುತ್ತಿತ್ತೆಂದೂ ತಿಳಿದುಬರುತ್ತದೆ. ವಾಲ್ಮೀಕಿಯು ರಾಮಾಯಣವನ್ನು ಬರವಣಿಗೆಗೆ ತರುವ ಮುನ್ನ ಲಯಬದ್ಧವಾಗಿ ಹಾಡಿದ. ಹಾಗೆಯೇ ರಾಮನ ಅವಳಿಮಕ್ಕಳಾದ ಲವ–ಕುಶರಿಗೆ ಇಡೀ ರಾಮಾಯಣವನ್ನು ಸುಶ್ರಾವ್ಯವಾಗಿ ಹಾಡುವಂತೆ ಕಲಿಸಿದ ಎಂಬ ಮಾತುಗಳು, ರಾಮಾಯಣದ ಕಥೆ ಜನಪದ ಮೂಲದೆಂದು ಸೂಚಿಸುತ್ತದೆ. ಹೀಗೆ ಜಾನಪದ ಮೂಲದಿಂದಲೇ ಬಂದ ರಾಮಾಯಣ ಕಥೆಯು, ವಾಲ್ಮೀಕಿಯ ಕೈಯಲ್ಲಿ ಪಿತೃಪ್ರಧಾನ ಕುಟುಂಬದ ವ್ಯವಸ್ಥೆಯ ಕಥನವಾಗಿ ಪರಿಣಮಿಸಿತು. ಸರಿಸುಮಾರು ಅದೇ ಕಾಲಕ್ಕೆ; ಜೈನರೂ ಬೌದ್ಧರೂ ರಾಮಾಯಣ ಕಥನವನ್ನು, ತಮ್ಮ ತಮ್ಮ ಧಾರ್ಮಿಕ ಸಿದ್ಧಾಂತಗಳಿಗೆ ಅನುಗುಣವಾಗಿ ಪುನರ್ಯೋಜಿಸಲು ತೊಡಗಿದ್ದರು. ಆದರೆ ಇಷ್ಟೆಲ್ಲದರ ನಡುವೆಯೂ ಜಾನಪದ ಪರಂಪರೆಯು; ತನ್ನ ಪಾಡಿಗೆ ತಾನು ನಾಗರೀಕತೆಯ ನಾಜೂಕು ಸ್ಪರ್ಶವಿಲ್ಲದೆ, ರಾಮಕಥೆಯನ್ನು ಬೆಳೆಸುತ್ತಲೇ ಇತ್ತು. ವಾಲ್ಮೀಕಿ ಕಥೆಯಂತೆ ಶಿಷ್ಟವಲ್ಲದ, ಜೈನ ಬೌದ್ಧರಂತೆ ಕಲಾತ್ಮಕವೂ ಅಲ್ಲದ, ಜಾನಪದ ಪರಂಪರೆಯನ್ನು ಭಾರತದ ಗ್ರಾಮೀಣ ಪ್ರತಿಭೆಯು ಅವ್ಯಾಹತವಾಗಿ ಮುಂದುವರೆಸಿತು. ಈ ಪರಂಪರೆಯನ್ನು ಗುರುತಿಸಬೇಕಾದರೆ; ನಾವು, ಅನೇಕ ಭಾಷೆಗಳಲ್ಲಿ ಬೇರೆ ಬೇರೆ ಕಾಲಘಟ್ಟಗಳಲ್ಲಿ ರಚನೆಯಾದ ರಾಮಾಯಣಕ್ಕೆ ಸಂಬಂಧಿಸಿದ ಜಾನಪದ ರಚನೆಗಳನ್ನು ಗಮನಿಸಬೇಕಾಗುತ್ತದೆ. ಈ ಜಾನಪದ ಪರಂಪರೆಯು ಕನ್ನಡದ ರಾಮಾಯಣ ಪರಂಪರೆಗಳ ಮೇಲೆ ಪ್ರಭಾವ ಬೀರಿರುವುದನ್ನು ತಳ್ಳಿ ಹಾಕಲು ಸಾಧ್ಯವಿಲ್ಲ.

ರಾಮಾಯಣದ ಈ ಮೂರು ನೆಲೆಯ ವಸ್ತುಪ್ರಪಂಚವನ್ನು ಕನ್ನಡದ ಕವಿಗಳು, ಒಂದು ಸಾವಿರ ವರ್ಷಗಳ ಸುದೀರ್ಘ ಇತಿಹಾಸದಲ್ಲಿ ಮತ್ತೆ ಮತ್ತೆ ಪುನಾರರಚನೆ ಮಾಡುತ್ತಾ ಬಂದಿದ್ದಾರೆ. ಹಾಗೆ ಮಾಡುವಾಗ ಮೂಲಕಥಾವಸ್ತುವನ್ನು ಧರ್ಮ, ಮನೋಧರ್ಮ, ಯುಗಧರ್ಮಗಳೇ ಕಾರಣವಾಗಿ ಕಥಾಂತರಗೊಳಿಸುತ್ತಾ ಬಂದಿದ್ದಾರೆ. ಮೂಲಕಥಾ ಶರೀರದಲ್ಲಿ ಆಗುವ ಸೋದ್ದಿಶ್ಯ ಬದಲಾವಣೆಗಳನ್ನು, ಪ್ರಸ್ತುತ ಮಹಾಪ್ರಬಂಧದಲ್ಲಿ ಕಥಾಂತರ ಎಂಬ ಪರಿಕಲ್ಪನೆಯಿಂದ ಗುರುತಿಸಲಾಗಿದೆ. ಕಥಾಂತರದ ಪರಿಕಲ್ಪನೆ, ಕನ್ನಡದ ಆರಂಭಿಕಕಾವ್ಯಗಳಿಂದಲೂ ಪ್ರಾಯೋಗಿಕ ಅನುಸಂಧಾನಕ್ಕೆ ಒಳಪಟ್ಟಿದ್ದರೂ, 'ಕಥಾಂತರ' ಎಂಬ ನಿರ್ದಿಷ್ಟ ಮಾತಿನ ಬಳಕೆ 'ಕುಮಾರವ್ಯಾಸ ಭಾರತ'ದಲ್ಲಿ ಕಂಡು ಬರುತ್ತದೆ. ತಾನು ಬರೆಯುತ್ತಿದ್ದ ಕಾವ್ಯ, ವ್ಯಾಸಪ್ರಣೀತ ಭಾರತದ ಕಥಾಂತರದ ಫಲ ಎಂದು ಕುಮಾರವ್ಯಾಸನು ಪೀಠಿಕಾಸಂಧಿಯಲ್ಲಿ ಸೂಚಿಸಿದ್ದಾನೆ. :

**"ಪದದ ಪ್ರೌಢಿಯ ನವರಸಂಗಳ**
**ವುದಿತವೆನುವಭಿದಾನ ಭಾವವ**
**ಬೆದಕಲಾಗದು ಬಲ್ಲ ಪ್ರೌಢರುಮೀ ಕಥಾಂತರಕ್ಕೆ**
**ಇದ ವಿಚಾರಿಸೆ ಬರಿಯ ತೊಳಸಿಯ**
**ವುದಕದಂತಿರೆಯಿಲ್ಲಿ ನೋಳ್ಪುದು**
**ಪದುಮನಾಭನ ಮಹಿಮೆ ಧರ್ಮವಿಚಾರ ಮಾತ್ರವನು ॥"**[೬]

ಯಾವುದೇ ಒಂದು ಕಥೆಯು ಪುನರುಕ್ತವಾಗಲೇ ಬೇಕು. ಕೀರ್ತಿನಾಥ ಕುರ್ತಕೋಟಿಯವರು ಹೇಳಿರುವಂತೆ "ಮತ್ತೆ ಮತ್ತೆ ಹೇಳಿದಂತೆ ಕಥೆ ಮತ್ತೆ ಮತ್ತೆ ಹೊಸದಾಗುತ್ತದೆ"[೭] ಆದರೆ ಯಾವ ಕವಿಯೂ ಒಂದು ಕಥೆಯನ್ನು ಅದು ಮೂಲದಲ್ಲಿ ಇದ್ದಂತೆಯೇ ಮತ್ತೆ ಹೇಳಲಿಕ್ಕೆ ಹೋಗುವುದಿಲ್ಲ. ಮೂಲಕಥೆಯು ತನ್ನ ಕೃತಿ ಆಗಬೇಕಾದರೆ, ಕವಿಯಾದವನು ಕಥಾಂತರದ ಉದ್ಯಮವನ್ನು ಕೈಗೊಳ್ಳಲೇಬೇಕಾಗುತ್ತದೆ. ಆದುದರಿಂದ ಕಥಾಂತರವೆಂಬ ಮಾತು; ಭಾಷಾಂತರ ಎಂಬ ಮಾತಿಗಿಂತ ಹೆಚ್ಚಿನ ವ್ಯಾಪ್ತಿಯುಳ್ಳ ಮಾತಾಗಿದೆ. ಭಾಷಾಂತರ ಎಂದರೆ ಒಂದು ಭಾಷೆಯಲ್ಲಿರುವ ವಿಷಯಸಾಮಗ್ರಿಯನ್ನು, ಇನ್ನೊಂದು ಭಾಷೆಗೆ ಯಥಾವತ್ತಾಗಿ ಕೊಂಡೊಯ್ಯುವ ಪ್ರಕ್ರಿಯೆ. ಅನುವಾದ, ತರ್ಜುಮೆ, ಕನ್ನಡಿಸುವುದು ಇವೇ ಮೊದಲಾದ ಪದಗಳನ್ನು ಪರ್ಯಾಯವಾಗಿ ಬಳಸುವುದುಂಟು. ವಿದ್ವಾಂಸರು ಭಾಷಾಂತರ, ಭಾವಾಂತರ ಪರಿಕಲ್ಪನೆಗಳಿಗೆ ನೀಡಿರುವ ಒಂದೆರಡು ವ್ಯಾಖ್ಯಾನಗಳನ್ನು ಇಲ್ಲಿ ಗಮನಿಸಬಹುದು.

“ಒಂದು ಭಾಷೆಯಲ್ಲಿನ ಪಠ್ಯವಸ್ತುವಿಗೆ ಬದಲು ಇನ್ನೊಂದು ಭಾಷೆಯಲ್ಲಿ ಸಮಾನ ಪಠ್ಯವಸ್ತುವನ್ನು ಹಾಕುವ ಪ್ರಕ್ರಿಯೆಯನ್ನು ಭಾಷಾಂತರ”ವೆಂದು ಜೆ.ಸಿ.ಕ್ಯಾಟ್‌ಫೋರ್ಡ್ ಹೇಳಿದರೆ, ಎಸ್.ವಿ.ರಘುನಾಥರಾಯರು “ಸದೃಶ ಪರಿಣಾಮ ಬೀರುವಂತೆ ಬೇರೊಂದು ಭಾಷೆಗೆ ಮೂಲ ಲೇಖಕನ ಭಾವಗಳನ್ನು ಸ್ಪಷ್ಟವಾಗಿ ವರ್ಗಾಯಿಸುವುದಕ್ಕೆ ಬಳಸುವ ಕಲೆಯೇ ಭಾಷಾಂತರ”ವೆಂದಿದ್ದಾರೆ. ವಿಲಮೋವಿಟ್ಜ ಎಂಬ ವಿದ್ವಾಂಸನು ಭಾಷಾಂತರವನ್ನು ‘ಪರಕಾಯ ಪ್ರವೇಶವಿದ್ದಂತೆ’ ಎಂದರೆ, ಡಾ॥ಸಿ.ಪಿ.ಕೃಷ್ಣಕುಮಾರ್ ಅವರು ‘ಭಾಷಾಂತರ ಒಂದು ಪ್ರಜ್ಞಾಪೂರ್ವಕಕಲೆ’ ಎಂದಿದ್ದಾರೆ. ಒಟ್ಟಾರೆ ಹೇಳುವುದಾದರೆ ಒಂದು ಭಾಷೆಯಲ್ಲಿ ನೀಡಲಾಗಿರುವ ಮಾಹಿತಿಯನ್ನು ಮೂಲದ ಆಶಯಕ್ಕೆ ಧಕ್ಕೆ ಬರದಂತೆ ಯಥಾವತ್ತಾಗಿ ಇನ್ನೊಂದು ಭಾಷೆಗೆ ವರ್ಗಾಯಿಸುವುದನ್ನು ಸೀಮಿತವಾದ ಅರ್ಥದಲ್ಲಿ ಭಾಷಾಂತರ ಎನ್ನಬಹುದು.

ಮೂಲಭಾಷೆಯ ಕೃತಿಯಲ್ಲಿ; ಶ್ಲೇಷಾರ್ಥಗಳೂ ಬಹ್ವರ್ಥಗಳೂ ನುಡಿಗಟ್ಟುಗಳೂ ಗಾದೆಗಳೂ ಇದ್ದೂ ಅವನ್ನು ಸಂವಾದಿಶಬ್ದಗಳಲ್ಲಿ ಕಂಡುಕೊಳ್ಳಲು ಲಕ್ಷ್ಯಭಾಷೆಗೆ ಸಾಧ್ಯವಾಗದೆ ಹೋದಾಗ, ಮೂಲದ ಸಾರವನ್ನು ಗ್ರಹಿಸಿ ಅದರ ಭಾವ ಕೆಡದಂತೆ ಅನುವಾದಿಸುವುದಕ್ಕೆ ಭಾವಾನುವಾದ ಎನ್ನಬಹುದು. ಆದುದರಿಂದ ‘ಕಥಾಂತರ’ ಎಂಬ ಪರಿಕಲ್ಪನೆ ಭಾಷಾಂತರ, ಭಾವಾಂತರ ಪರಿಕಲ್ಪನೆಗಳಿಗಿಂತ ಭಿನ್ನವಾದುದಾಗಿದೆ.

ಕಥಾಂತರವೆಂಬುದು ಹಳೆಯ ಸಾಮಗ್ರಿಯಿಂದಲೇ ಹೊಸ ಶಿಲ್ಪವನ್ನು ಸೃಷ್ಟಿಸುವ ಒಂದು ಸೃಷ್ಟಿಶೀಲವ್ಯಾಪಾರ. ಕವಿ ತನ್ನ ಧರ್ಮ, ಮನೋಧರ್ಮ, ಯುಗಧರ್ಮಗಳ ಅಭಿವ್ಯಕ್ತಿಗಾಗಿ ಕಥಾಂತರವೆಂಬ ಈ ಕ್ರಿಯಾಶೀಲ ಅನುಸಂಧಾನದಲ್ಲಿ ತೊಡಗಲೇಬೇಕಾಗುತ್ತದೆ. ಸಾಮಾನ್ಯವಾಗಿ ಕಥೆಗಳ ಮರುಸೃಷ್ಟಿಯನ್ನು ಮರು ವ್ಯಾಖ್ಯಾನಗಳೆಂದು ಕರೆಯುವ ರೂಢಿಯಿತ್ತು. ವ್ಯಾಖ್ಯಾನಗಳು ಮೂಲಕೃತಿಗೆ ಬದ್ಧವಾಗಿ ತಮ್ಮ ಹೊಸ ಅರ್ಥಗಳನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಕಥಾಂತರ ಪ್ರವೃತ್ತಿಯು, ಕಥಾ ವ್ಯಾಖ್ಯಾನಕ್ಕಿಂತ ವಿಸ್ತಾರವೂ ಸೂಕ್ಷ್ಮವೂ ಆದ ಅಂತಃಸ್ವರೂಪವನ್ನು ಪಡೆದಿದೆ. ಮೂಲಕಥಾವಸ್ತುವಿಗೆ ಹೊಸ ಕವಿ ಬದ್ಧನಾಗಿರಬೇಕಾದ ಅಗತ್ಯ ಇಲ್ಲಿ ಇಲ್ಲ. ಆತನು ಬದ್ಧನಾಗಬೇಕಾದದ್ದು ತನ್ನ ಕಾವ್ಯಧರ್ಮಕ್ಕೆ. ಸೃಷ್ಟಿಶೀಲ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಬಳಸಿಕೊಳ್ಳುವ ಮೂಲಕ ಕಥಾಂತರದ ಕ್ರಿಯಾಶೀಲವ್ಯಾಪಾರವು, ಕಾಲಾನುಕಾಲದಿಂದ ಜಗತ್ತಿನ ಎಲ್ಲಾ

ಭಾಷೆಗಳಲ್ಲೂ ನಡೆಯುತ್ತಾ ಬಂದಿದೆ. ಕನ್ನಡ ಸಾಹಿತ್ಯ ಪರಂಪರೆಯನ್ನು ಗಮನಿಸಿದರೂ ಕಥಾಂತರದ ಪ್ರತಿಭಾವ್ಯಾಪಾರವು ಆರಂಭಕಾಲದಿಂದಲೂ ನಡೆಯುತ್ತಾ ಬಂದಿರುವುದನ್ನು ಗುರುತಿಸುವುದು ಸಾಧ್ಯ

ಮೂಲದ ಒಂದೇ ಕಥೆಯನ್ನು ಆಧರಿಸಿ; ಬೇರೆ ಬೇರೆ ಕವಿಗಳು ಕೃತಿ ರಚನೆಯನ್ನು ಮಾಡಿದಾಗ, ಒಂದಕ್ಕಿಂತ ಒಂದು ಭಿನ್ನವಾಗಿರುವುದು ಕಂಡುಬರುತ್ತದೆ. ಅದು ಸಹಜ ಕೂಡ. ಡಾ॥ಚಂದ್ರಶೇಖರ ಕಂಬಾರರು 'ಕನ್ನಡಟೈಮ್ಸ್' ವಾರಪತ್ರಿಕೆಗೆ ಕೊಟ್ಟಂತಹ ಸಂದರ್ಶನದಲ್ಲಿ "ಈಗ ನೋಡಿ ನಮಗೂ ಒಂದು ಮಹಾಭಾರತ ಬೇಕಪ್ಪಾ, ಪಂಪ ಬರೆದ. ನಮಗೂ ಒಂದು ಬೇಕು ಅಂತ ಹೇಳಿ ಅಂವ ಬರದದ್ದೇ ಹೊರತು, ಅಂವ ವ್ಯಾಸನನ್ನ ಅನುವಾದ ಮಾಡಲಿಲ್ಲ. ವ್ಯಾಸನ್ನ ಓದ್ದ. ಆಮೇಲೆ ಮಹಾಭಾರತ ಹ್ಯಾಗಿರ್ತದೆ ಅಂತ ತಿಳಕೊಂಡ. 'ಇವನೇ ಅರಿಕೇಸರಿ, ಇವನೇ ಭೀಮ ತಿಳ್ಕೋ, ಇವನೇ ಅರ್ಜುನ ಅಂತ ತಿಳ್ಕೋ_. ನಮ್ಮ ಅರಿಕೇಸರಿ ಇವನು' ಅಂಥ ಹೇಳಿ ಕಥೇ ಹೇಳಿದ ಅಷ್ಟೆ. ಅದು ಅನುವಾದ ಅಲ್ಲ ಸ್ವತಂತ್ರಕೃತಿ. ನಾವು ಪಂಪನನ್ನು ಅನುವಾದಕ ಅಂತ ಎಂದೂ ಅನ್ನೋದಿಲ್ಲ. ಕುಮಾರವ್ಯಾಸನು ಎಂದೂ ಅನುವಾದಕ ಎಂದು ಅನ್ನೋದಿಲ್ಲ"[೧೦]

ಕಂಬಾರರ ಈ ಮಾತುಗಳಲ್ಲಿ ಪಂಪನಾಗಲಿ, ಕುಮಾರವ್ಯಾಸನಾಗಲಿ ನೇರ ವ್ಯಾಸ ಮಹಾಭಾರತವನ್ನು ಅನುವಾದಮಾಡದೆ ತಮ್ಮ ಸಮಕಾಲೀನ ಇತಿಹಾಸವನ್ನು ಯುಗಧರ್ಮದ ಮೌಲ್ಯಗಳನ್ನು ತಮ್ಮ ತಮ್ಮ ಕೃತಿಗಳ ಮೂಲಕ ಮಂಡಿಸಿದ್ದಾರೆ ಎನ್ನುವುದು ಸ್ಪಷ್ಟವಾಗುತ್ತದೆ.

ಡಾ॥ಜಿ.ಎಸ್.ಶಿವರುದ್ರಪ್ಪನವರು ಇದನ್ನೇ ಇನ್ನಷ್ಟು ನಿಖರವಾಗಿ ಹೀಗೆ ಸ್ಪಷ್ಟಪಡಿಸುವರು. "ಕವಿಯ ಅನುಭವವೆಲ್ಲ ವರ್ತಮಾನಕಾಲದ್ದೇ; ಅವನು ಭೂತಕಾಲದ ಅಥವಾ ಭವಿಷ್ಯತ್ತಿನ ಅನುಭವದಲ್ಲಿ ಬದುಕುವುದಿಲ್ಲ. ಅವನು ಯಾವುದೇ ವಸ್ತುವನ್ನಾರಿಸಿಕೊಳ್ಳಲಿ ಅದರಲ್ಲಿ ಅವನು ಅಭಿವ್ಯಕ್ತಿಸುವುದು ತನ್ನ ಸಮಕಾಲೀನವಾದ ಅನುಭವವನ್ನೇ. ಈ ಅನುಭವವನ್ನು ಮಹಾಕಾವ್ಯದ ಕವಿ ಪ್ರಾಚೀನವಾದ ವಸ್ತುವಿನ ಮೂಲಕ ಹೇಳುತ್ತಾನೆ, ಅಷ್ಟೆ. ವಸ್ತು 'ಹಳೆಯದು' ಅಷ್ಟೆ. ಅದರಲ್ಲಿ ವ್ಯಕ್ತವಾಗುವ ಅನುಭವ 'ಸಮಕಾಲೀನ'ವಾದದ್ದು"[೧೧]

ಅಂದರೆ ಯಾವ ಕವಿಯೂ ಒಂದು ಕಥೆಯನ್ನು ಅದು ಮೂಲದಲ್ಲಿ ಇದ್ದಂತೆಯೇ ಮತ್ತೆ ಮತ್ತೆ ಹೇಳಲಿಕ್ಕೆ ಹೋಗುವುದಿಲ್ಲ; ಅದರ ಮೂಲಕ ತನ್ನ ಸಮಕಾಲೀನ ಇತಿಹಾಸವನ್ನೋ ರಾಜಕೀಯ ಮನೋಧರ್ಮವನ್ನೋ ಅಥವಾ ತನ್ನ ಕಾಲದ ಯುಗಧರ್ಮವನ್ನೋ ಕಥಾಂತರಿಸುತ್ತಾ ಹೋಗುತ್ತಾನೆ, ಎನ್ನುವುದು ಸ್ಪಷ್ಟವಾಗುತ್ತದೆ.

ಪ್ರಾಚೀನ ಕನ್ನಡ ಸಾಹಿತ್ಯಸಂದರ್ಭವನ್ನು ಅನುಲಕ್ಷಿಸಿ ಮಾತನಾಡುವುದಾದರೆ ಕನ್ನಡ ಕಾವ್ಯಗಳಿಗೆ ಸಂಸ್ಕೃತ ರಾಮಾಯಣ, ಮಹಾಭಾರತಗಳು ಸಂಸ್ಕೃತ, ಪ್ರಾಕೃತ ಜೈನಪುರಾಣಗಳು, ಮೂಲಕಥಾವಸ್ತುಗಳಾಗಿ ಕಂಡುಬರುತ್ತವೆ. ರಾಮಾಯಣವನ್ನೇ ಗಮನಿಸಿ ಹೇಳಬಹುದಾದರೆ ನಾಗಚಂದ್ರನಿಂದ ಮುದ್ದಣನ ವರೆಗೆ ಹತ್ತಾರು ಕವಿಗಳು ವೈದಿಕ, ಜೈನ, ಜಾನಪದ ಮೊದಲಾದ ಮೂಲ ವಸ್ತುವಿನ್ಯಾಸಗಳನ್ನು ಕಾಲಕಾಲಕ್ಕೆ ತಮ್ಮ ತಮ್ಮ ಅಗತ್ಯಕ್ಕನುಗುಣವಾಗಿ ಕಥಾಂತರಿಸುತ್ತಾ ಬಂದಿದ್ದಾರೆ. ನಾಗಚಂದ್ರ, ಕುಮುದೇಂದು, ಕುಮಾರವಾಲ್ಮೀಕಿ, ಕನಕದಾಸ, ಮುದ್ದಣ ಮೊದಲಾದ ಕವಿಗಳು ಹೇಳುವ ರಾಮಾಯಣದ ಕಥೆಗಳನ್ನು ಸ್ಥೂಲ ಸ್ವರೂಪದಲ್ಲಿ ನೆನೆದರೂ ಅವು ಒಂದಕ್ಕಿಂತ ಒಂದು ಭಿನ್ನವಾಗಿರುವುದು ಸ್ವಯಂ ಸ್ಪಷ್ಟ. ವಸ್ತು, ಶೈಲಿ ಮತ್ತು ಧೋರಣೆ ಈ ಮೂರು ನೆಲೆಗಳಲ್ಲಿ ಮೂಲ ಕಥಾವಸ್ತುವಿನಿಂದ ಅಂತರವನ್ನು ಹೊಸ ಕಥಾಶಿಲ್ಪಗಳು ಸಾಧಿಸುತ್ತವೆ.

## ಟಿಪ್ಪಣಿ

೧. ಕಾ.ಶ್ರೀ.ನಾಗರಾಜ: ರಾಮಾಯಣ ಕಥಾಮಾಲಾ, ವಾಲ್ಮೀಕಿ ರಾಮಾಯಣ– ಸಾಹಿತ್ಯ ಸಿಂಧು ಪ್ರಕಾಶನ ಪುಟ–೬೭. ೧೯೯೯

೨. ಬನ್ನಂಜೆ ಗೋವಿಂದಾಚಾರ್ಯ: ವಾಲ್ಮೀಕಿ ಕಂಡ ರಾಮಾಯಣ, ದಶಪ್ರಮತಿ ಪ್ರಕಾಶನ– ಪುಟ–೧೨. ೧೯೯೯

೩. ವಿ.ಸೀತಾರಾಮಯ್ಯ: ವಾಲ್ಮೀಕಿ ರಾಮಾಯಣ, ಸಾಹಿತ್ಯ ಅಕಾಡೆಮಿ, ಪುಟ–೨. ೧೯೭೬

೪. ಕುಮಾರವ್ಯಾಸ: ಭಾರತ ಕಥಾಮಂಜರಿ, ಸಂ. ಕುವೆಂಪು ಮತ್ತು ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, (ಆದಿಪರ್ವ ಪೀಠಿಕಾ ಸಂಧಿ:ಪದ್ಯ ೧೪), ಪುಟ–೨. ೧೯೮೮

೫. ಕೀರ್ತಿನಾಥ ಕುರ್ತುಕೋಟಿ: ಕುಮಾರವ್ಯಾಸ ೧೯೮೯, ಸಾಹಿತ್ಯ ಅಕಾಡೆಮಿ, ನವದೆಹಲಿ

೬. ಡಾ.ಪ್ರಧಾನಗುರುದತ್ತ: ಭಾಷಾಂತರ ಕಲೆ, ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ. ಪುಟ–೧೧. ೧೯೮೯

೭. ಅದೇ ಪುಟ–೧೦

೮. ಅದೇ ಪುಟ–೮

೯. ಅದೇ ಪುಟ–೧೧

೧೦. ಡಾ.ಚಂದ್ರಶೇಖರ ಕಂಬಾರ: ಕನ್ನಡ ಟೈಮ್ಸ್ ವಾರಪತ್ರಿಕೆ, ಪುಟ-೧೬! ೮ ಆಗಸ್ಟ್ 2002

೧೧. ಡಾ.ಜಿ.ಎಸ್.ಶಿವರುದ್ರಪ್ಪ: ಸಮಗ್ರ ಗದ್ಯ

# ಅಧ್ಯಾಯ-೨

# ಕನ್ನಡ ರಾಮಾಯಣ ಕಥಾಪರಂಪರೆಗೆ ಮೂಲ ಆಕರವಾದ ಪ್ರಾಚೀನ ಕೃತಿಗಳ ಕಥಾಭಿತ್ತಿಯ ಸ್ವರೂಪ

ಆಧುನಿಕ ಕನ್ನಡ ರಾಮಕಥೆಗಳು; ತಮ್ಮ ಹಿಂದೆ ಶತಮಾನಗಳ ಕಾಲ ಅವಿರತವಾಗಿ ರಚಿತವಾದ; ಬೇರೆ ಬೇರೆ ರಾಮಕಥಾ ಪರಂಪರೆಗಳಿಂದ ಕೆಲವೊಮ್ಮೆ ಪ್ರತ್ಯಕ್ಷವಾಗಿ ಕೆಲವೊಮ್ಮೆ ಪರೋಕ್ಷವಾಗಿ ಪ್ರಭಾವಿತವಾಗಿ, ತಮ್ಮ ತಮ್ಮ ವಿಶಿಷ್ಟವಾದ ಕಥಾಂತರಗಳನ್ನು ಸಾಧಿಸಿದೆ. ಮಾಸ್ತಿ, ಕುವೆಂಪು ಮತ್ತು ವೀರಪ್ಪಮೊಯಿಲಿಯವರು ಆಧುನಿಕ ಕಾಲದಲ್ಲಿ ರಚಿಸಿರುವ ರಾಮಾಯಣ ಮಹಾಕೃತಿಗಳು; ಸುದೀರ್ಘವಾದ ರಾಮಕಥಾ ಪರಂಪರೆಯ ಸೋದ್ದಿಶ್ಯ ಕಥಾಂತರದ ಪರಿಣಾಮಗಳಾಗಿವೆ, ಎಂಬುದನ್ನು ನಾವು ಮರೆಯುವಂತಿಲ್ಲ. ಆದ ಕಾರಣ ಈ ಮೂರು ಆಧುನಿಕ ರಾಮಾಯಣ ಕೃತಿಗಳು; ಹಿಂದಿನ ವಿಭಿನ್ನ ರಾಮಾಯಣ ಕಥಾಪರಂಪರೆಗಳಿಂದ ಏನನ್ನು ಸ್ವೀಕರಿಸಿವೆ, ಏನನ್ನು ತಿರಸ್ಕರಿಸಿವೆ, ಯಾವ ಯಾವ ರೀತಿಯಲ್ಲಿ ಮೂಲ ಕಥಾಹಂದರದಿಂದ ಭಿನ್ನವಾಗುವ ಮೂಲಕ ತಮ್ಮ ವಿಶಿಷ್ಟವಾದ ಸಮಕಾಲೀನ ಸಂವೇದನೆಯ ಅಭಿವ್ಯಕ್ತಿಯನ್ನು ಕಥಾಂತರಗಳ ಮುಖೇನ ಸಾಧಿಸಿವೆ, ಎಂಬುದನ್ನು ಗಂಭೀರವಾಗಿ ಅಧ್ಯಯನ ಮಾಡಬೇಕಾದರೆ, ರಾಮಾಯಣದ ವಿಭಿನ್ನ ಸಂಪ್ರದಾಯದ ಮೂಲ ಕಥಾಹಂದರಗಳನ್ನು ನಾವು ಮೊದಲು ಪರಿಚಯ ಮಾಡಿಕೊಳ್ಳಬೇಕಾಗುತ್ತದೆ. ಆದ ಕಾರಣ ಈ ಅಧ್ಯಾಯದಲ್ಲಿ ಶತಮಾನಗಳಿಂದ ವಿರಚಿತವಾಗುತ್ತ ಬಂದಿರುವ ವಿಭಿನ್ನ ಸಂಪ್ರದಾಯಗಳ ರಾಮಕಥಾಹಂದರವನ್ನು ಸಾಧ್ಯವಾದಷ್ಟು ಸಂಗ್ರಹವಾಗಿ ನಿರೂಪಿಸಲಾಗಿದೆ. ಈ ಕಥಾ ಸಾಮಗ್ರಿಯೇ; ನಮಗೆ ಮುಂದೆ ಹೊಸ ಕಾಲದ ಮೂರು ಮುಖ್ಯ ರಾಮಕೃತಿಗಳು, ಸಾಧಿಸಿರುವ ಕಥಾಂತರಗಳನ್ನು ಅರಿಯಲು ಪ್ರಧಾನ ಮೂಲ ಸಾಮಗ್ರಿಯಾಗುತ್ತದೆ. ಹಾಗಾಗಿ ಕ್ರಮಾನುಬದ್ಧವಾಗಿ ರಾಮಾಯಣದ ಪ್ರಾಚೀನ ಕಥಾಹಂದರಗಳನ್ನು ಈಗ ಪರಿಚಯ ಮಾಡಿಕೊಳ್ಳೋಣ.

## ೨.೧ ವೈದಿಕ ರಾಮಾಯಣ ಪರಂಪರೆ:-

ಅ) ವಾಲ್ಮೀಕಿ ರಾಮಾಯಣದ ಕಥಾ ಸ್ವರೂಪ

ಆ) ಭಾಸನ ರಾಮಾಯಣ ಕಥಾಧಾರಿತ ನಾಟಕಗಳಲ್ಲಿ ರಾಮಕಥಾಸ್ವರೂಪ

ಇ) ಕಾಳಿದಾಸನ ರಘುವಂಶದಲ್ಲಿ ಕಾಣುವಂತೆ ರಾಮಕಥಾಸ್ವರೂಪ

ಈ) ತುಲಸೀದಾಸರ ಶ್ರೀರಾಮಚರಿತ ಮಾನಸ ಕಥಾ ಸ್ವರೂಪ

**೨.೨ ಜೈನ ರಾಮಾಯಣ ಪರಂಪರೆ:-**

ಅ) ವಿಮಲಸೂರಿಯ ರಾಮಾಯಣದ ಕಥಾ ಸ್ವರೂಪ

ಆ) ನಾಗಚಂದ್ರನ ರಾಮಚಂದ್ರಚರಿತ ಪುರಾಣಂ ಕಥಾಸ್ವರೂಪ

**೨.೩ ಬೌದ್ಧಪರಂಪರೆಯ ಕಥಾ ಸ್ವರೂಪ**

**೨.೪ ಜಾನಪದ ಕಥಾ ಪರಂಪರೆ**

**ಅ) ವಾಲ್ಮೀಕಿ ರಾಮಾಯಣದ ಕಥಾ ಸ್ವರೂಪ:-**

ವಾಲ್ಮೀಕಿ ರಾಮಾಯಣದ ಮುಖ್ಯ ಕಥೆಯೆಲ್ಲಾ ಒಂದು ಆರ್ಯಸಂಸ್ಕೃತಿಯ ರಾಜಪರಿವಾರದ ಸಾಂಸಾರಿಕ ಚಿತ್ರ; ಪೂರ್ವದಿಂದ ನಡೆದು ಬಂದ 'ಧರ್ಮ'ಕ್ಕೂ ಸನ್ನಿವೇಶಗಳ ವೈಪರೀತ್ಯಕ್ಕೂ ನಡೆಯುವ ಘರ್ಷಣೆ. ಕಥೆ ಬೆಳವಣಿಗೆಯಾದಂತೆ ವಾನರ ಸಂಸ್ಕೃತಿ ಮತ್ತು ದಾನವ ಸಂಸ್ಕೃತಿಯ ರಾಜಪರಿವಾರಗಳು ಈ ಘರ್ಷಣೆಯೊಳಗೆ ಸಿಕ್ಕಿಬೀಳುತ್ತವೆ.

ದಶರಥ ಅಯೋಧ್ಯೆಯ ರಾಜ. ಅವನಿಗೆ ಮೂವರು ರಾಣಿಯರು. ಯಾರಿಂದಲೂ ಅವನಿಗೆ ಮಕ್ಕಳಾಗದಿರಲು ಕುಲಗುರು ವಸಿಷ್ಠರ ಮಾತಿನಂತೆ ಪುತ್ರಕಾಮೇಷ್ಟಿಯಾಗವನ್ನು ಕೈಗೊಳ್ಳುತ್ತಾನೆ. ಯಾಗ ದೇವತೆಯ ವರಪ್ರಸಾದವಾಗಿ ಪಾಯಸ ದೊರಕುತ್ತದೆ. ಆ ಅನುಗ್ರಹದಿಂದ ಅವನಿಗೆ ನಾಲ್ವರು ಮಕ್ಕಳಾಗುತ್ತಾರೆ. ಪಟ್ಟದ ರಾಣಿಯಾದ ಕೌಸಲ್ಯೆಯಲ್ಲಿ ಹಿರಿಯನಾದ ರಾಮ, ಸುಮಿತ್ರೆಯಲ್ಲಿ ಲಕ್ಷ್ಮಣ- ಶತ್ರುಘ್ನರೆಂಬ ಅವಳಿ ಮಕ್ಕಳು, ಕಿರಿಯ ರಾಣಿ ಕೈಕೆಯಲ್ಲಿ ಭರತ ಹುಟ್ಟುತ್ತಾರೆ. ಮಕ್ಕಳು ಚೆಲುವರಾಗಿಯೂ ಶಕ್ತರಾಗಿಯೂ ಬೆಳೆಯುತ್ತಾರೆ. ಅರಸುಮಕ್ಕಳಿಗೆ ದೊರಕುವ ಎಲ್ಲ ಶಿಕ್ಷಣದಿಂದ; ಯಾವ ಯಾವ ಕಲೆ ಶಾಸ್ತ್ರಗಳ ಅಭ್ಯಾಸವಾಗುತ್ತಿತ್ತೋ ಅವುಗಳಲ್ಲಿ ಅವರು ನಿಷ್ಣಾತರಾಗುತ್ತಾರೆ. ವಿಶೇಷವಾಗಿ ರಾಮ ತನ್ನ ಗುಣ, ಶೀಲ, ವಿವೇಕಗಳ ಹಿರಿಮೆಯಿಂದ ಎಲ್ಲರ ಪ್ರೀತಿಗೆ ಪಾತ್ರನಾಗುತ್ತಾನೆ. ಲಕ್ಷ್ಮಣ ರಾಮನ ಅನುವರ್ತಿಯಾದರೆ ಶತೃಘ್ನ ಭರತನನ್ನು ಅನುಸರಿಸುತ್ತಾನೆ.

ದಶರಥನ ಮಕ್ಕಳು ಯೌವನಕ್ಕೆ ಕಾಲಿಡುತ್ತಿದ್ದಂತೆಯೇ ಒಮ್ಮೆ ವಿಶ್ವಾಮಿತ್ರ, ದಶರಥನ ಬಳಿಗೆ ಬಂದು ತಾನೊಂದು ಯಾಗವನ್ನು ಮಾಡಬೇಕಾಗಿದೆ. ಅದಕ್ಕೆ ತಾಟಕಿ ಮಾರೀಚರ ಕಂಟಕವಿದೆ. ಯಾಗದ ರಕ್ಷಣೆಗಾಗಿ ನನ್ನೊಡನೆ ರಾಮನನ್ನು ಕಳುಹಿಸು; ಅದು ಮುಗಿದ ಮೇಲೆ ನಿನ್ನ ಮಗ ಕಲ್ಯಾಣವಂತನಾಗಿ ಹಿಂದಿರುಗುತ್ತಾನೆಂದನು. ಆ ರಾಕ್ಷಸರೊಡನೆ ಹೋರಾಡಲು ತನ್ನ ಪ್ರೀತಿಯ ಮಗನನ್ನು ಕಳಿಸುವುದು ಅಪಾಯಕರ ಎಂದು ದಶರಥನು ಮೊದಲು ನಿರಾಕರಿಸುತ್ತಾನೆ. ನಂತರ ಗುರು ವಸಿಷ್ಠರ ಸಮಾಧಾನದ ಮಾತುಗಳನ್ನು ಕೇಳಿದ ಮೇಲೆ ಮಹರ್ಷಿಯೊಡನೆ ಮಗನನ್ನು ಕಳುಹಿಸುತ್ತಾನೆ. ರಾಮನೊಡನೆ ಲಕ್ಷ್ಮಣನೂ ಹೋಗುತ್ತಾನೆ. ಮೂವರೂ ಆಶ್ರಮದ ಕಡೆ ಪ್ರಯಾಣ ಬೆಳೆಸುತ್ತಾರೆ. ಮಾರ್ಗ ಮಧ್ಯದಲ್ಲಿ ವಿಶ್ವಾಮಿತ್ರ ಈ ಅಣ್ಣ ತಮ್ಮಂದಿರಿಗೆ ಅನೇಕ ಕಥೆಗಳನ್ನೂ, ಪುರಾಣ ಪ್ರಸಂಗಗಳನ್ನೂ ಹೇಳುತ್ತಾನೆ. ಅಲ್ಲದೆ ಶಸ್ತ್ರಾಸ್ತ್ರಗಳ ಮತ್ತು ಯುದ್ಧ ವಿದ್ಯೆಯ ರಹಸ್ಯಗಳನ್ನು ತಿಳಿಸುತ್ತಾನೆ. ಅನೇಕ ಮಂತ್ರಾಸ್ತ್ರಗಳನ್ನೂ ರಾಮನಿಗೆ ನೀಡುತ್ತಾನೆ.

ಹೀಗೆ ಪ್ರಯಾಣ ಬೆಳೆಸುತ್ತಾ ಅವರು ತಾಟಕವನದಲ್ಲಿ ಕಾಲಿಡುತ್ತಾರೆ. ತಾಟಕೆ ಭಯಂಕರ ಮಾಯಾ ವಿದ್ಯೆಗಳನ್ನು ಸೃಷ್ಟಿಸುತ್ತಾ ಇವರ ಮೇಲೆರಗಲು ಬರುತ್ತಾಳೆ. ಆಗ ವಿಶ್ವಾಮಿತ್ರನು ರಾಮನಿಗೆ 'ಸ್ತ್ರೀ ಹತ್ಯೆ ಮಹಾಪಾಪ' ಎಂದು ಹಿಂಜರಿಯಬೇಡ. ಸಮಾಜಕ್ಕೆ, ಧರ್ಮಕ್ಕೆ ಕಳಂಕವನ್ನು ಮಾಡುವ ವ್ಯಕ್ತಿ ಗಂಡಸೆ, ಹೆಂಗಸೆ ಎಂಬುದು ಎಣಿಕೆಗೆ ಬರುವುದಿಲ್ಲ, ಧೈರ್ಯವಾಗಿ ಅವಳನ್ನು ಸಂಹರಿಸು ಎನ್ನುತ್ತಾನೆ. ರಾಮನ ಬಾಣ ಪ್ರಯೋಗದಿಂದ ತಾಟಕಿ ನಾಶವಾಗುತ್ತಾಳೆ. ನಂತರ ಋಷಿ ತನ್ನ ಆಶ್ರಮ ಸೇರಿ ಯಾಗವನ್ನು ಆರಂಭಿಸುತ್ತಾನೆ. ಈಗ ತಾಟಕಿಯ ಮಕ್ಕಳಾದ ಮಾರೀಚ ಮತ್ತು ಸುಬಾಹು ಆಶ್ರಮದ ಮೇಲೆ ಆಕ್ರಮಣ ನಡೆಸಿ ಯಾಗವನ್ನು ಕೆಡಿಸಲು ಬಂದಾಗ ರಾಮ ಲಕ್ಷ್ಮಣರಿಬ್ಬರೂ ಯುದ್ಧ ಸನ್ನದ್ಧರಾಗುತ್ತಾರೆ. ರಾಮನ ಬಾಣಾಘಾತಕ್ಕೆ ಸುಬಾಹು ಸತ್ತುಬಿದ್ದರೆ, ಮಾರೀಚ ಗಾಯಗೊಂಡು ಓಡಿಹೋಗುತ್ತಾನೆ.

ಯಜ್ಞಕಾರ್ಯ ಮುಗಿದ ಮೇಲೆ ಋಷಿ ರಾಮ-ಲಕ್ಷ್ಮಣರನ್ನು ಕರೆದುಕೊಂಡು ಮಿಥಿಲೆಯ ಕಡೆ ಪ್ರಯಾಣ ಬೆಳಸುತ್ತಾನೆ. ಅಲ್ಲಿ ಮಿಥಿಲೆಯ ರಾಜ ಜನಕ ಸಾಕಿ ಬೆಳಸಿದ್ದ ಮಗಳು ಸೀತೆಯ ಪಾಣಿಗ್ರಹಣಕ್ಕೆ ಒಂದು ವೀರಪಣವಿರುತ್ತದೆ. ತನ್ನಲ್ಲಿ ಒಂದು ಶಿವಧನಸ್ಸಿದೆ. ಅದನ್ನು ಬಾಗಿಸಿ ಹೆದೆಗೇರಿಸಿ ಬಾಣ ಹೂಡಿದವರಿಗೆ ಸೀತೆಯನ್ನು ಮದುವೆ ಮಾಡಿಕೊಡುತ್ತೇನೆ ಎಂದು ಜನಕ ಘೋಷಿಸಿದ್ದನು.

ಯುವಕರಿಗೆ ಶಿವಧನಸ್ಸನ್ನು ತೋರಿಸುವ ಹಂಬಲದಿಂದ ಅತ್ತ ಪ್ರಯಾಣ ಬೆಳೆಸಿದ ಋಷಿಗೆ ವಿಧಿನಿಯಮದಂತೆ ರಾತ್ರಿಯಲ್ಲಿ ದಾರಿ ತಪ್ಪುತ್ತದೆ. ಕತ್ತಲಲ್ಲಿ ಕಣ್ಣೂಹೆಯಿಂದ ಕಾಡಿನಲ್ಲಿ ನಡೆದವರು ಬೆಳಗಾಗುವಷ್ಟರಲ್ಲಿ ಗೌತಮಾಶ್ರಮವನ್ನು ಸೇರಿರುತ್ತಾರೆ. ಅಲ್ಲಿ ಶಾಪಗ್ರಸ್ತಳಾಗಿ ಕಲ್ಲಾಗಿದ್ದ ಅಹಲ್ಯೆಗೆ ರಾಮನಿಂದ ಶಾಪ ವಿಮೋಚನೆಯಾಗುತ್ತದೆ. ಅಷ್ಟರಲ್ಲಿ ಗೌತಮ ಮಹರ್ಷಿಯೂ ಅಲ್ಲಿಗೆ ಮರಳುತ್ತಾನೆ. ಅಲ್ಲಿಂದ ಮತ್ತೆ ಪ್ರಯಾಣ ಬೆಳಸಿ ಜನಕರಾಜನ ಮಿಥಿಲೆಯನ್ನು ಸೇರುತ್ತಾರೆ. ಜನಕ ಮಹಾರಾಜ ಇವರಿಗೆ ಸ್ವಾಗತ ಕೋರುತ್ತಾನೆ. ವಿಶ್ವಾಮಿತ್ರ ತಾನು ಬಂದ ಉದ್ದೇಶವನ್ನು ಹೇಳಿ ರಾಜಕುಮಾರರ ಪರಿಚಯ ಹೇಳುತ್ತಾನೆ. ಜನಕ ಮಹಾರಾಜ ಶಿವಧನಸ್ಸನ್ನು ಅವರಿಗೆ ತೋರುತ್ತಾನೆ. ಆ ಹಿಂದೆ ಬಹುಪ್ರಖ್ಯಾತರಲ್ಲಿ ಶಕ್ತರೆನ್ನಿಸಿಕೊಂಡವರೆಲ್ಲರೂ ಶಿವಧನಸ್ಸನ್ನು ಹೆದೆಗೇರಿಸಲು ಪ್ರಯತ್ನಪಟ್ಟು ಸೋತಿರುತ್ತಾರೆ. ಆದರೆ ರಾಮ ಸುಲಭವಾಗಿ ಅದನ್ನು ಬಾಗಿಸಿ ಹೆದೆಗೇರಿಸಲು ಪ್ರಯತ್ನಿಸಿದಾಗ ಅದು ಎರಡು ತುಂಡಾಗಿ ಮುರಿದು ಬೀಳುತ್ತದೆ. ಜನಕನಿಗೆ ಹರ್ಷವಾಗಿ ರಾಮನಿಗೆ ಸೀತೆಯನ್ನು ಕೊಟ್ಟು ವಿವಾಹ ಮಾಡುವುದಾಗಿ ಹೇಳುತ್ತಾನೆ. ದಶರಥ ಮತ್ತು ಅವನ ಪರಿವಾರಕ್ಕೆ ಹೇಳಿಕಳುಹಿಸುತ್ತಾನೆ. ಅವರೆಲ್ಲರ ಆಗಮನವಾದ ಮೇಲೆ ರಾಮ–ಸೀತೆಯರ ಮದುವೆ ನೆರವೇರುತ್ತದೆ. ವಿಶ್ವಾಮಿತ್ರನ ಕಾರ್ಯ ಮುಗಿಯಿತು. ಆತ ಉನ್ನತ ತಪಸ್ಸಿಗಾಗಿ ಹಿಮಾಲಯದತ್ತ ಹೊರಡುತ್ತಾನೆ.

ಮಿಥಿಲೆಯಿಂದ ಹಿಂದಿರುಗುವ ದಾರಿಯಲ್ಲಿ ಜಮದಗ್ನಿಯ ಮಗನಾದ ಪರಶುರಾಮನು ರಾಮನನ್ನು ಪ್ರತಿಭಟಿಸುತ್ತಾನೆ. ತನ್ನಲ್ಲಿರುವ ವೈಷ್ಣವ ಧನುಸ್ಸನ್ನು ಬಗ್ಗಿಸು, ಇಲ್ಲದಿದ್ದರೆ ಯುದ್ಧದಲ್ಲಿ ತನ್ನನ್ನು ಎದುರಿಸು ಎನ್ನುತ್ತಾನೆ. ಆ ಧನುಸ್ಸನ್ನು ರಾಮ ಸುಲಭವಾಗಿ ಬಾಗಿಸಿ ಪರಶುರಾಮನ ಮೇಲೆಯೇ ಬಾಣವನ್ನು ಪ್ರಯೋಗಿಸುತ್ತೇನೆಂದಾಗ, ಪರಶುರಾಮನಿಗೆ ರಾಮ ಯಾರೆಂದು ಅರಿವಾಗಿ ಅವನಿಗೆ ತನ್ನ ವೈಷ್ಣವ ಧನುಸ್ಸನ್ನು ಬಳುವಳಿಯಾಗಿ ಕೊಟ್ಟು ತಪಸ್ಸಿಗೆ ತೆರಳುತ್ತಾನೆ. ಇತ್ತ ರಾಮಾದಿಗಳು ಸಂತೋಷದಿಂದ ಅಯೋಧ್ಯೆಗೆ ಮರಳುತ್ತಾರೆ. ಇಲ್ಲಿಗೆ ಬಾಲಕಾಂಡದ ಕಥೆ ಮುಗಿಯುತ್ತದೆ.

ಒಂದು ದಿನ ದಶರಥನಿಗೆ ಅಪಶಕುನವಾಯಿತು. ತನ್ನ ಜೀವಿತಾವಧಿ ಕೊನೆಗೊಂಡಂತೆ ದುಃಸ್ವಪ್ನವಾಯಿತು. ತನ್ನ ಹಿರಿಯ ಮಗನಾದ ರಾಮನಿಗೆ ಪಟ್ಟಗಟ್ಟಲು ನಿರ್ಧರಿಸಿ ಪಟ್ಟಾಭಿಷೇಕದ ಏರ್ಪಾಡುಗಳನ್ನೆಲ್ಲ ಕೈಕೆಗೆ ತಿಳಿಯದಂತೆ ಮಾಡಿದ. ಕೈಕೆಯ ತವರುಮನೆಯಲ್ಲಿದ್ದ ಭರತನಿಗಾಗಲಿ ಕೇಕಯದವರಿಗಾಗಲಿ ಸೀತೆಯ ತಂದೆ ಜನಕನಿಗಾಗಲಿ ಪಟ್ಟಾಭಿಷೇಕಕ್ಕೆ ಹೇಳಿ ಕಳುಹಿಸಲಿಲ್ಲ. ಆದರೆ

ರಾಮನ ಪಟ್ಟಾಭಿಷೇಕದ ಸುದ್ದಿ ಕೈಕೆಯ ಅಂತಃಪುರದಲ್ಲಿ ಮತ್ತೊಂದು ಸನ್ನಿವೇಶಕ್ಕೆ ನಾಂದಿಹಾಡಿತು. ಅದಕ್ಕೆ ಮಂಥರೆ ಕಾರಣಳಾದಳು. ಮಾರನೆಯ ದಿನ ರಾಮನನ್ನು ಯುವರಾಜನನ್ನಾಗಿ ಮಾಡುವುದಿದೆ ಎಂದು ಅವಳಿಗೆ ತಿಳಿದು ಬಂದಿತು. ತಕ್ಷಣವೇ ತನ್ನ ಒಡತಿಯಲ್ಲಿಗೆ ಧಾವಿಸಿಬಂದು ಸುದ್ದಿಯನ್ನು ತಿಳಿಸಿ ಎಚ್ಚರಿಕೆ ಕೊಟ್ಟಳು. "ನೀನು ಎಂಥ ಅವಿವೇಕಿ; ಒದಗುತ್ತಿರುವ ಅಪಾಯದಿಂದ ಎಚ್ಚತ್ತುಕೊ" ಎಂದಳು. ರಾಮನ ಬಗ್ಗೆ ತುಂಬಾ ಪ್ರೀತಿ ಅಭಿಮಾನವಿಟ್ಟಿದ್ದ ಕೈಕೆಗೆ ವಾಸ್ತವವಾಗಿ ಮೊದಲು ಈ ಸುದ್ದಿ ತುಂಬಾ ಪ್ರಿಯವಾಯಿತು. ಆದರೆ ಮಂಥರೆಯ ದುರ್ಬೋಧನೆಯ ಸುಳಿಗೆ ಕೈಕೆ ಸಿಲುಕಿದಳು. "ರಾಮನಿಗೆ ಪಟ್ಟವಾದರೆ ಅರಮನೆಯಲ್ಲಿ ನಿನ್ನ ಎಲ್ಲಾ ಹಿರಿಮೆಯೂ ಕೊನೆಗೊಂಡಂತಾಗುತ್ತದೆ. ದಶರಥನಿಗೆ ನಿನ್ನಲ್ಲಿ ವಿಶ್ವಾಸವಿದೆ ಎಂದು ನಂಬಿ ಕೂರುವ ಸಮಯವಿದಲ್ಲ. ನಾಳೆ ಕೌಸಲ್ಯೆ ಆಳುವ ರಾಜನ ತಾಯಿಯಾಗುತ್ತಾಳೆ. ಇನ್ನು ಅರಮನೆಯಲ್ಲಿ ಅವಳ ಕೈ ಮೇಲಾಗುತ್ತದೆ. ನೀನು ಅವಳ ಇಚ್ಛೆಗೆ ಅಧೀನವಾಗಿ ನಡೆದುಕೊಳ್ಳಬೇಕಾಗುತ್ತದೆ". ಎಂದು ಕೈಕೆಯ ಮತಿಯನ್ನೇ ಮಥಿಸಿದಳು ಮಂಥರೆ. ಅದು ಸಾಲದೆಂಬಂತೆ "ಹಿಂದೆ ಯುದ್ಧರಂಗದಲ್ಲಿ ನೀನು ಅವನಿಗೆ ನೆರವು ಕೊಟ್ಟಿದ್ದಕ್ಕೆ ಆತ ಕರುಣಿಸಿದ್ದ ಎರಡು ವರಗಳನ್ನು ಕೇಳಿ ಪಡೆಯಲು ಈಗ ಕಾಲ ಒದಗಿದೆ. ವರದಾನದ ಫಲವನ್ನು ಪಡೆಯಲು ಇದೇ ಸಮಯ. ರಾಮನು ಹದಿನಾಲ್ಕು ವರ್ಷಗಳ ಕಾಲ ವನವಾಸಕ್ಕೆ ಹೊರಡಲಿ. ಈಗ ನಡೆದಿರುವ ಸಿದ್ಧತೆಯಲ್ಲಿ ಭರತನಿಗೆ ಪಟ್ಟಕಟ್ಟಲಿ. ಈಗಲೇ ಕಾರ್ಯಸನ್ನದ್ಧಳಾಗು; ಕೋಪ ಗೃಹವನ್ನು ಪ್ರವೇಶಿಸು. ನಿನ್ನ ಬೇಡಿಕೆ ಈಡೇರುವವರೆಗೂ ಬಿಡಬೇಡ" ಎನ್ನುತ್ತಾಳೆ.

ರಾಮನಿಗೆ ಪಟ್ಟಗಟ್ಟಲು ಸಿದ್ಧತೆ ನಡೆಸುವಂತೆ ಆಜ್ಞೆ ಮಾಡಿದ ದೊರೆಗೆ ಮನಸ್ಸಿನಲ್ಲಿ ಏನೇನೊ ಸಂದೇಹಗಳು ನುಸುಳಿ ತನ್ನ ಕಿರಿಯ ಹೆಂಡತಿಯಾದ ಕೈಕೆಯ ಮೇಲಿನ ಮೋಹದಿಂದ ಅವಳ ಅಂತಃಪುರಕ್ಕೆ ಬರುತ್ತಾನೆ. ಆದರೆ ಅಲ್ಲಿ ಅವನು ಕಾಣುವುದು ತನ್ನ ಮೋಹದ ಮಡದಿ ಚೆಲುವೆಯನ್ನಲ್ಲ; ತಿದಿಯೊತ್ತಿರುವ ಕುಲುಮೆಯನ್ನ. ಕೈಕೆಗೆ ರಾಮನಲ್ಲಿ ಪ್ರೀತಿಯಿದ್ದರೂ ಸವತಿಯರ ಭೀತಿಗೆ ಒಳಗಾಗಿ ಮುದಿದೊರೆಯನ್ನು ಮಾತಿನಲ್ಲಿ ಕಟ್ಟಿಹಾಕುತ್ತಾಳೆ. ರಾಮನ ವನವಾಸ ಸಂಬಂಧದಲ್ಲಿ ಆಕೆ ಅಚಲಳಾಗಿರುವುದನ್ನು ಕಂಡು; ದೊರೆ ಬೇಡೆಂದು ಪ್ರಾರ್ಥಿಸಿದ. ಅದರ ಜೊತೆಗೆ ಇತರ ಪುರಸ್ಕಾರ ಬೆದರಿಕೆಗಳೂ ವ್ಯರ್ಥವಾದವು. ದಶರಥ ಭಾಷೆಗೆ ತಪ್ಪಲಾರ; ರಾಮನ ವನವಾಸ, ಭರತನ ಪಟ್ಟಾಭಿಷೇಕವೆಂಬ ಸಂಗತಿಗಳನ್ನು ಒಪ್ಪಲಾರ. ಇದು ಅವನ ಧರ್ಮಸಂಕಟ. ಹಿಂದೆ ವಾಗ್ದಾನ ಮಾಡಿದ್ದುದೂ ನಿಜ; ಅದನ್ನು ನಡೆಸಿಕೊಡಬೇಕಾದುದು ಅವನ ಕರ್ತವ್ಯ. ಅದು ಸಾಲದೆಂಬಂತೆ

ಅಂತಃಪುರವನ್ನು ಪ್ರವೇಶಿಸಿದೊಡನೆ ಕೈಕೆಯ ಸ್ಥಿತಿಯನ್ನು ನೋಡಿ ತನ್ನ ಸುಕೃತದ ಮೇಲೆ ಆಣೆ ಇಟ್ಟು ಅವಳ ಇಷ್ಟವನ್ನು ನೇರವೇರಿಸಿ ಕೊಡುತ್ತೇನೆಂದು ಪ್ರಮಾಣ ಮಾಡಿದ್ದ. ಕೈಕೆ ರಾಮನಿಗೆ ಹೇಳಿಕಳುಹಿಸಿದಳು. ಕರೆಗೆ ಓಗೊಟ್ಟು ಬಂದ ರಾಮನಿಗೆ, ತಂದೆ ಮಾಡಿದ್ದ ವಾಗ್ದಾನವನ್ನು ನಡೆಸಿಕೊಡುವುದು ನಿನ್ನ ಕರ್ತವ್ಯ ಎಂದಳು. ಈ ಮಾತುಗಳನ್ನು ತಂದೆ ಆಡಲಾರದವನಾಗಿದ್ದ. ಆದರೆ ರಾಮ ಈ ಮಾತನ್ನು ನಡೆಸಿಕೊಡಲೇಬೇಕಾಗಿತ್ತು. ಕೆಲವೇ ಕ್ಷಣಗಳ ಹಿಂದೆ ಪಟ್ಟಾಭಿಷೇಕದ ಸಂತೋಷ ಸಮಾರಂಭಗಳಲ್ಲಿ ಮುಳುಗಿ ಉಲ್ಲಾಸಗೊಂಡಿದ್ದ ರಾಮನಿಗೆ ಈ ಸಿಡಿಲಾಘಾತ ಅನೀರಿಕ್ಷಿತ. ರಾಮನಿಗೆ ಪರಿಸ್ಥಿತಿಯ ಅರಿವಾಯಿತು. ತಕ್ಷಣವೇ ತಂದೆಯ ಸ್ಥಿತಿ ಅವನಿಗೆ ಅರ್ಥವಾಯಿತು. ತಾಯಿ ಕೈಕೆಗೆ ಈ ರೀತಿ ಹೇಳಿದ. 'ತಾನು ಕೊಟ್ಟ ಮಾತನ್ನು ನಡೆಸಿಕೊಡಲಿಲ್ಲವೆಂಬ ದುಷ್ಕೀರ್ತಿ ನನ್ನ ತಂದೆಗೆ ಬಾರದಿರಲಿ. ಅದನ್ನು ನಡೆಸಿಕೊಡಲು ನಾನು ಪ್ರತಿಜ್ಞೆ ಮಾಡುತ್ತೇನೆ. ಇದರಿಂದ ನೀನಾಗಲಿ, ಆತನಾಗಲಿ ಯಾವ ಸಂಕೋಚವನ್ನೂ, ವಿಷಾದವನ್ನು ಪಡಬೇಕಾಗಿಲ್ಲ. ಭರತನಿಗೂ ನನಗೂ ಯಾವ ವ್ಯತ್ಯಾಸವೂ ನನ್ನಲ್ಲಿ ಕಾಣದು. ಅವನೇ ಪಟ್ಟವೇರಲಿ. ನಾನು ಸಂತಸದಿಂದಲೇ ವನವಾಸಕ್ಕೆ ಹೊರಡುತ್ತೇನೆ. ತಂದೆ ಅಪಕೀರ್ತಿಯಿಂದ ಮುಕ್ತನಾದರೆ ಅಷ್ಟೇ ಸಾಕು' ಎಂದು ಹೇಳಿದ.

ಈ ಸುದ್ದಿಯನ್ನು ತಿಳಿಸಲು ತಾಯಿಯ ಬಳಿಗೆ ಬಂದ, ಆಕೆಯಂತೂ ನಾಳಿನ ತನ್ನ ಮಗನ ಪಟ್ಟಾಭಿಷೇಕದ ನಿರೀಕ್ಷೆಯ ಆನಂದದಲ್ಲಿ ಮುಳುಗಿಹೋಗಿದ್ದಳು. ಇಂಥ ಸ್ಥಿತಿಯಲ್ಲಿದ್ದ ಆಕೆಯ ಮುಂದೆ ರಾಮನು "ನನಗೆ ನಾಳೆ ಪಟ್ಟಾಭಿಷೇಕವಿಲ್ಲ. ಇಂದಿನಿಂದ ಹದಿನಾಲ್ಕು ವರ್ಷಗಳ ವನವಾಸದ ಪ್ರಾಪ್ತಿಯಾಗಿದೆ. ನಾನು ಹೊರಡಬೇಕು ಆಶೀರ್ವದಿಸು" ಎನ್ನುತ್ತಾನೆ. ತಾಯಿಯ ಇಷ್ಟಕ್ಕೂ ಮಗನ ದೃಢತೆಗೂ ಮತ್ತೆ ಘರ್ಷಣೆ, ಕೊನೆಗೆ ರಾಮ ತನ್ನ 'ತಂದೆಯನ್ನು ಋಣ ಮುಕ್ತನನ್ನಾಗಿ ಮಾಡುವ ಹೊಣೆಗಾರಿಕೆ ಪೂರ್ತಿ ತನ್ನದೇ' ಎಂದಾಗ ಕೌಸಲ್ಯೆಗೆ ತನ್ನ ಸಂಕಟವನ್ನು ತಾನೇ ಸಹಿಸಿಕೊಳ್ಳುವಂತಾಯಿತು. ಸಾಲದ್ದಕ್ಕೆ ರಾಮ ದೃಢ ನಿರ್ಧಾರಿಯಾಗಿದ್ದನು. ಸೀತೆಗೂ ಈ ಸಂಗತಿಯನ್ನು ತಿಳಿಸಿದನು. ಆಕೆಗೂ ಸಹಜವಾಗಿ ಆಶಾಭಂಗವಾಯಿತು. ಆದರೆ ಆಕೆ ಉಂಟಾಗಿರುವ ಪರಿಸ್ಥಿತಿಯನ್ನೂ ಮುಂದೆ ನಡೆಯಲಿರುವುದನ್ನು ಊಹಿಸಿಕೊಂಡು ತನ್ನ ಸತೀಧರ್ಮದಿಂದ ಮನಸ್ಸನ್ನು ಬಹುಬೇಗ ಹೊಂದಿಸಿಕೊಳ್ಳುತ್ತಾಳೆ. ಲಕ್ಷ್ಮಣನಾದರೋ ಕೋಪದ ಮೇರೆಯನ್ನು ಮೀರಿ ತಂದೆ ಎನ್ನುವುದನ್ನು ಲೆಕ್ಕಿಸದೆ ಮೋಹಾಂಧ, ಮದಾಂಧ, ಮೂರ್ಖ ಇನ್ನೂ ಮುಂತಾಗಿ ನಿಂದಿಸಲಾರಂಭಿಸುತ್ತಾನೆ. ಆದರೆ ರಾಮ ತನ್ನ ಶಾಂತ ಸ್ವಭಾವದಿಂದ ಅವನ ಕೋಪವನ್ನು

ಶಮನಗೊಳಿಸುತ್ತಾನೆ. ಆದರೆ ತನ್ನೊಡನೆ ವನವಾಸಕ್ಕೆ ಬರುವ ಅವನನ್ನಾಗಲಿ ಸೀತೆಯನ್ನಾಗಲಿ ತಡೆಯಲು ರಾಮನಿಗೆ ಶಕ್ಯವಿಲ್ಲದೆ ಹೋಯಿತು. ಇತ್ತ ಕೈಕೆ, ಮಂಥರೆ ಸೇರಿ ರಾಮನ ವನಗಮನಕ್ಕೆ ಸಿದ್ಧತೆ ನಡೆಸುತ್ತಾರೆ. ದಶರಥನ ದುಃಖಕ್ಕೆ ಮಿತಿಯಿಲ್ಲ. ನರಳುತ್ತ ನೆಲದ ಮೇಲೆ ಹೊರಳಾಡುವುದಷ್ಟೇ ಅವನಿಗಿದ್ದ ಶಕ್ತಿ. ಅರಮನೆಯಲ್ಲಿದ್ದ ತನ್ನ ಹೆಣ್ಣು ಪರಿವಾರಕ್ಕೆಲ್ಲ ಹೇಳಿ ಕಳುಹಿಸಿ ತನ್ನ ಮಗನನ್ನು ಬೀಳ್ಕೊಡುವ ಸಮಯದಲ್ಲಿ ತನ್ನ ಜೊತೆಗಿರಲು ಕರೆಸಿದ. ಗಂಡು ಮಕ್ಕಳಿಬ್ಬರ ಜೊತೆಯಲ್ಲಿ ಸೊಸೆ ಊರು ಬಿಟ್ಟಳು.

ಈ ಸುದ್ದಿಯ ಗ್ರಹಣ ಹಿಡಿದು ಇಡೀ ಪಟ್ಟಣ ಕಂಗೆಟ್ಟಿತ್ತು. ದುಃಖದಲ್ಲಿ ಮುಳುಗಿತ್ತು. ಯಾವ ಪಟ್ಟಣದ ಜನ ಕೆಲವೇ ಗಂಟೆಗಳ ಹಿಂದೆ ಸಂತೋಷದಿಂದ ರಾಮನ ಪಟ್ಟಾಭಿಷೇಕದ ಗಾಳಿಪಟ ಹಾರಿಸಲು ಸಿದ್ಧರಿದ್ದರೋ ಆ ಗಾಳಿಪಟ ಗಗನಕ್ಕೇರುವ ಮೊದಲೇ ಮಂಥರೆಯೆಬ್ಬಿಸಿದ ಸುಂಟರಗಾಳಿಯ ಸುಳಿಗೆ ಸಿಕ್ಕಿ ಧೂಳೀಪಟವಾಯಿತು. ರಾಮ, ಸೀತಾ, ಲಕ್ಷ್ಮಣರನ್ನು ಹೊತ್ತ ರಥ ಕಣ್ಮರೆಯಾಗುವವರೆಗೂ ಅದರ ಹಿಂದೆಯೇ ಓಡುತ್ತಾ ಅದು ಕಾಣಿಸದಾದಾಗ ದಶರಥ ಕೌಸಲ್ಯೆಯ ಅಂತಃಪುರಕ್ಕೆ ಬಂದನು. ಕೈಕೆಯನ್ನು ಇನ್ನು ಕಣ್ಣೆತ್ತಿ ನೋಡುವುದಿಲ್ಲವೆಂದು ಶಪಥ ಮಾಡಿದನು. ರಾಜನಾಗಬೇಕೆಂಬ ಹೊಸ ವ್ಯವಸ್ಥೆಯನ್ನು ಭರತನು ಒಪ್ಪುವುದಾದರೆ ಅವನ ಬಗೆಗೆ ತನ್ನಿಂದ ಯಾವ ಹರಕೆಯೂ ಇಲ್ಲವೆಂದನು.

ಇತ್ತ ಅರಮನೆಯಲ್ಲಿ ಮುದಿದೊರೆ ಮೂರ್ಛಾಸಾಗರದಲ್ಲಿ ಮುಳುಗುತ್ತಾ ಏಳುತ್ತಾ ಕಾಲದೂಡುತ್ತಾನೆ. ಮೂರ್ಛೆಯಿಂದ ಎಚ್ಚರಗೊಂಡ ದೊರೆಯ ಮುಂದೆ ಕೌಸಲ್ಯೆ ಬಂದರು ಕೈಕೆಯೆಂದು ಭ್ರಮಿಸಿ ನಿಂದಿಸತೊಡಗುತ್ತಾನೆ. ಬಯಲನ್ನೇ ರಾಮ ಬಂದನೆಂದು ಅಪ್ಪಿಕೊಳ್ಳಲೆತ್ನಿಸುತ್ತಾನೆ. ಮತ್ತೆ ಮತ್ತೆ ಮೂರ್ಛೆಗೊಳ್ಳುತ್ತಾನೆ. ಕೆಲವು ದಿನಗಳಲ್ಲೇ ಸಾರಥಿಯಾಗಿ ಹೋಗಿದ್ದ ಸುಮಂತ್ರ ಹಿಂದಿರುಗಿ ಬಂದು 'ರಾಮಾದಿಗಳು ಗಂಗೆಯನ್ನು ದಾಟಿ ವನದೊಳಗೆ ಕಾಲಿಟ್ಟರು' ಎಂಬ ಸುದ್ದಿಯನ್ನು ತಿಳಿಸಿದಾಗ ದಶರಥ ರಾಮನಿಗಾಗಿ ಪರಿತಪಿಸುತ್ತಾ ಸಾವಿಗೀಡಾಗುತ್ತಾನೆ. ಮಂತ್ರಿಗಳೆಲ್ಲ ಸೇರಿ ಅವಸರವಾಗಿ ಸಮಾಲೋಚನೆ ನಡೆಸಿ ದೂರದ ಕೇಕಯಪುರದಲ್ಲಿರುವ ರಾಜಗೃಹಕ್ಕೆ ಸುದ್ದಿಗಾರರನ್ನು ಕಳುಹಿಸಿದರು. ಇಲ್ಲಿಯ ಸಂಗತಿಗಳಾವುದನ್ನೂ ತಿಳಿಯಹೇಳದೆ, ಅಯೋಧ್ಯೆಗೆ ಬೇಗ ಭರತನನ್ನು ಕರೆತನ್ನಿ ಎಂದು ನಿರ್ಬಂಧಿಸಿದರು. ಅವರು ಅಲ್ಲಿಗೆ ಸೇರುವ ಹಿಂದಿನ ರಾತ್ರಿಯೇ ಭರತನಿಗೆ

ದುಃಸ್ವಪ್ನವಾಗಿತ್ತು. ಕರೆಯಲು ಬಂದವರನ್ನು ಅಯೋಧ್ಯೆಯಲ್ಲಿ ಎಲ್ಲರೂ ಕ್ಷೇಮವೇ? ಎಂದು ಕೇಳಿದ. ದೂತರು 'ಹೌದು' ಎಂದು ಹೇಳಿ ನೀವೀಗ ತಕ್ಷಣವೇ ರಾಜಕಾರ್ಯ ನಿಮಿತ್ತ ಅಯೋಧ್ಯೆಗೆ ಪ್ರಯಾಣ ಬೆಳಸಬೇಕೆಂದರು. ಅಯೋಧ್ಯೆಗೆ ಪ್ರಯಾಣ ಹೊರಟ. ದಾರಿಯುದ್ದಕ್ಕೂ ಅಪಶಕುನಗಳು. ಊರಿಗೆ ಬಂದರೆ ಪಟ್ಟಣಕ್ಕೆ  ಸೂತಕದ ಮಂಕು ಬಡಿದಂತಿತ್ತು. ಭರತನ ಮನಸ್ಸು ಕುಗ್ಗಿತ್ತು. ಕೂಡಲೇ ಅರಮನೆಯನ್ನು ಪ್ರವೇಶಿಸಿದ. ಅಲ್ಲೆಲ್ಲೂ ತಂದೆಯ ಸುಳಿವಿಲ್ಲ. ತಾಯಿಯ ಅಂತಃಪುರಕ್ಕೆ ತೆರಳಿದರೆ ಅಲ್ಲೂ ದಶರಥನಿಲ್ಲ. ಆತಂಕದಿಂದ ತಾಯಿಯನ್ನು ಕೇಳಿದ; "ಸಮಸ್ತ ಪ್ರಾಣಿಗಳಿಗೂ ಯಾವ ಗತಿಯೋ ನಿನ್ನ ತಂದೆ ಆ ಗತಿಯನ್ನು ಹೊಂದಿದನು" ಎಂದು ಹೇಳಿ ಭರತನಿಗಾಗಿ ಪ್ರಯೋಜನವನ್ನು ಸಾಧಿಸಲು ತಾನು ಏನೇನು ಮಾಡಿದೆ ಎಂಬುದರ ವಿವರಗಳನ್ನು ಅವನು ಸಂತಸಗೊಳ್ಳುವನೆಂಬ ಭ್ರಮೆಯಿಂದ ತಿಳಿಸಿದಳು. ರಾಮ,ಲಕ್ಷ್ಮಣ, ಸೀತೆಯರ ವನವಾಸ ನಿಮಿತ್ತ ತಂದೆಯ ಸಾವಿಗೆ ಕಾರಣಳಾದ ಕೈಕೆಯನ್ನು, ತನ್ನ ಹಡೆದ ತಾಯಿಯೆಂಬುದನ್ನು ಲೆಕ್ಕಿಸದೆ ನಿಂದಿಸಿದ, ಆಕ್ಷೇಪಿಸಿದ. ಭರತ ಅಲ್ಲಿ ನಿಲ್ಲಲಾರದೆ ಕೌಸಲ್ಯೆಯನ್ನು ಕಾಣಲು ಹೋದ. ಈಗ ನಡೆದಿರುವ ಅವಗಡಕ್ಕಾಗಿ ಕ್ಷಮೆ ಯಾಚಿಸಿದ. ಈ ಘಟನೆಯಲ್ಲಿ ತನ್ನದೇನೂ ಒಳಸಂಚು ಇಲ್ಲವೆಂದು ಮನದಟ್ಟು ಮಾಡಿದ. ತದನಂತರ ತಂದೆಯ ಉತ್ತರ ಕ್ರಿಯೆಗಳನ್ನು ನೆರವೇರಿಸಿದ. ಪುರೋಹಿತ, ಮಂತ್ರಿಮಹೋದಯರು ಈಗ ಭರತನೇ ಸಿಂಹಾಸನವೇರಬೇಕೆಂದಾಗ ಒಪ್ಪದೆ ನಿರಾಕರಿಸಿದ. ಪ್ರತಿಯಾಗಿ ರಾಮನು ಬೀಡುಬಿಟ್ಟಿರುವಲ್ಲಿಗೆ ಹೋಗಿ ಅವನನ್ನು ರಾಜ್ಯಕ್ಕೆ ಹಿಂದಿರುಗುವಂತೆ ಮನವೊಲಿಸಿ ಕರೆತಂದು ಪಟ್ಟಗಟ್ಟಬೇಕು ಎಂಬ ತನ್ನ ನಿರ್ಣಯವನ್ನು ಅವರಿಗೆ ಹೇಳಿ ಒಪ್ಪಿಸಿದ.  ಸೈನ್ಯದ ಜೊತೆ ಭರತ ಹಾಗೂ ಇಡೀ ಅರಮನೆಯ ಪರಿವಾರವು ಅರಣ್ಯಕ್ಕೆ ಪ್ರಯಾಣಿಸಿತು. ಭರತನೂ ಗಂಗೆಯನ್ನು ದಾಟಲು ಗುಹನ ನೆರವನ್ನು ಪಡೆದು ಭರದ್ವಾಜಾಶ್ರಮವನ್ನು ದಾಟಿ ಪರಿವಾರ ಸಮೇತನಾಗಿ ಭರದ್ವಾಜರ ಮಾತಿನಂತೆ ಚಿತ್ರಕೂಟಕ್ಕೆ ತೆರಳಿದನು.

ಭರತನು ತಾನು ಬಂದಿರುವ ವಿಷಯವನ್ನೂ ಅರಮನೆಯಲ್ಲಿ ನಡೆದ ಕಹಿ ಘಟನೆಯನ್ನೂ ರಾಮಾದಿಗಳಿಗೆ ವಿವರಿಸಿದ. ತಂದೆಯ ಮರಣದ ಸುದ್ದಿ ದುಃಖ ತಂದಿತು. ಹಿರಿಯ ಮಗನಾದ್ದರಿಂದ ಕಾಡಿನಲ್ಲೇ ಶ್ರಾದ್ಧ ಕಾರ್ಯವನ್ನು ನೆರವೇರಿಸಿದ. ನಂತರ ಭರತನು ಎಷ್ಟು ಬಗೆಯಲ್ಲಿ ಒಪ್ಪಿಸಲು ಯತ್ನಿಸಿದರೂ ಹಿಂದಿರುಗಲು ರಾಮ ಒಪ್ಪಲಿಲ್ಲ. ತಾನು ಕೊಟ್ಟಿದ್ದ ಮಾತಿನ ಅವಧಿಯೂ ಸಮಯಗಳೂ ನೆರವೇರುವವರೆಗೂ ಹಿಂದಿರುಗಲಾರೆನೆಂದ. ಈ ನಿರ್ಬಂಧಗಳನ್ನು ತಂದೆಯ ಪರವಾಗಿ

ತಾನೇ ಕೈಗೊಂಡವನೆಂದು ಇದು ಯಾರ ಒತ್ತಾಯವಲ್ಲವೆಂದೂ ಹೇಳಿದ. ರಾಮ ಅಯೋಧ್ಯೆಗೆ ಮರಳುವುದು ಅಶಕ್ಯವೆಂದು ತಿಳಿದ ನಂತರ ಭರತನು ರಾಮನನ್ನು ಬೇಡಿ ಅವನ ಪಾದುಕೆಗಳನ್ನು ಪಡೆದ. ಆ ಪಾದುಕೆಗಳನ್ನೇ ಅಣ್ಣನ ಪ್ರತಿನಿಧಿ ಎಂದು ಪರಿಗಣಿಸಿ ರಾಮನು ಹಿಂತಿರುಗವವರೆಗೂ ರಾಜಕಾರ್ಯ ನಿರ್ವಹಿಸುವೆನೆಂದೂ ಮತ್ತು ಹದಿನಾಲ್ಕನೇ ವರ್ಷದ ಕೊನೆಯ ದಿನ ರಾಮನು ಹಿಂತಿರುಗದಿದ್ದರೆ ಅಗ್ನಿಪ್ರವೇಶ ಮಾಡುವೆನೆಂದು ಹೇಳಿದ. ಇದರಿಂದ ಭರತನ ಯೋಗ್ಯತೆ ಮಾನ್ಯತೆ ಸ್ಥಾಪಿತವಾದವು. ಮಗನ ಮೇಲಿನ ಮಮಕಾರದಿಂದ ಮಾತೆ ಮಾಡಿದ ಕರ್ಮವನ್ನು ಮಗ ಈ ರೀತಿ ತೊಳೆಯಲೆತ್ನಿಸಿದ. ಭರತ ಹಿಂದಿರುಗಿದ, ಅಯೋಧ್ಯೆಗಲ್ಲ. ಹತ್ತಿರದ ನಂದಿಗ್ರಾಮಕ್ಕೆ. ಅಲ್ಲಿ ಆಡಳಿತದ ಮುಖ್ಯ ಕೇಂದ್ರವನ್ನು ಸ್ಥಾಪಿಸಿ, ಸಿಂಹಾಸನಪೀಠದಲ್ಲಿ ಅಣ್ಣನ ಪಾದುಕೆಗಳನ್ನಿಟ್ಟು ಅಯೋಧ್ಯೆಯನ್ನು ವಿವೇಕದಿಂದಲೂ ಚೆನ್ನಾಗಿಯೂ ಆಳುತ್ತಿದ್ದನು. ಅಷ್ಟು ಕಾಲವು ಭರತನು ರಾಮನ ಪ್ರತಿನಿಧಿಯಂತಿದ್ದ. ಇತ್ತ ರಾಮ, ಚಿತ್ರಕೂಟ ಅಯೋಧ್ಯೆಗೆ ತುಂಬಾ ಹತ್ತಿರವಾಗಿದೆಯೆಂದು ಆಲೋಚಿಸಿ ಮತ್ತೆ ದಕ್ಷಿಣದ ಕಡೆ ಪ್ರಯಾಣಿಸಿದ. ಒಂದು ರಾತ್ರಿಯ ಮಟ್ಟಿಗೆ ಅತ್ರಿಯ ಆಶ್ರಮದಲ್ಲಿ ಉಳಿದಾಗ ಋಷಿಪತ್ನಿ ಅನಸೂಯೆ ಸೀತೆಯನ್ನು ಆದರಿಸಿ ಉತ್ತಮ ವಸ್ತ್ರಾಭರಣಗಳನ್ನು ಕೊಟ್ಟು ಹರಸುತ್ತಾಳೆ. ಮಾರನೆಯ ದಿನವೇ ಮತ್ತೆ ರಾಮಾದಿಗಳು ದಕ್ಷಿಣ ಕಾನನದಲ್ಲಿ ಪ್ರಯಾಣಿಸುತ್ತಾರೆ. ಇಲ್ಲಿಗೆ ಅಯೋಧ್ಯಾಕಾಂಡದ ಕಥೆ ಮುಗಿಯುತ್ತದೆ.

ಇಡೀ ಕಾವ್ಯದಲ್ಲಿ ಅಯೋಧ್ಯಾಕಾಂಡವೇ ತುಂಬಾ ದೀರ್ಘವಾದುದು. ಅಯೋಧ್ಯಾಕಾಂಡದಲ್ಲಿ ತಂದೆ, ತಾಯಿ, ಅಣ್ಣ, ತಮ್ಮ, ಗಂಡ-ಹೆಂಡತಿ, ರಾಜ ಮತ್ತು ಪ್ರಜೆಗಳಿಗೆ ಧರ್ಮಪರೀಕ್ಷೆಗಳನ್ನು ಒಡ್ಡುವ ಸನ್ನಿವೇಶಗಳನ್ನು ಮನಮುಟ್ಟುವಂತೆ, ಕರುಳು ಕರಗುವಂತೆ ಚಿತ್ರಿಸಲಾಗಿದೆ. ದಶರಥನ ಪುತ್ರಶೋಕದ ವರ್ಣನೆಯೂ ಕೌಸಲ್ಯೆಯ ಪರಿತಾಪದ ವರ್ಣನೆಯೂ ರಾಮಾಯಣದಲ್ಲಿ ಮನಮಿಡಿಯುವ ರಸಮಯವಾದ ಭಾಗಗಳಾಗಿವೆ.

ಕಾಡಿನಲ್ಲಿ ರಾಮ, ಸೀತೆ, ಲಕ್ಷ್ಮಣರು ಪಡುವ ಸುಖ ದುಃಖಗಳೇ ಅರಣ್ಯಕಾಂಡದ ವಸ್ತು. ಋಷಿಗಳ ಆತಿಥ್ಯದಲ್ಲಿ ವನದಿಂದ ವನಕ್ಕೆ ಸಂಚರಿಸುತ್ತಾ ರಾಮಾದಿಗಳು ಸ್ವಲ್ಪಕಾಲ ಕಳೆದರು. ಆ ದಿನಗಳು ಅವರ ಪಾಲಿಗೆ ಎಷ್ಟು ಸುಖಮಯವಾಗಿದ್ದವೆಂದರೆ ತಮ್ಮ ಅರಮನೆಯ ಸುಖ ಸೌಕರ್ಯಗಳು ಇಲ್ಲಿ ಇಲ್ಲವೆಂಬುದೇ ಅವರಿಗೆ ಮರೆತು ಹೋಗುತ್ತದೆ. ಪ್ರಕೃತಿಯ ಸೊಬಗಿನ ನಡುವೆ

ಸಂತೋಷದಿಂದ ಕಾಲಕಳೆಯುತ್ತಾರೆ. ಪತಿಯು ಜೊತೆಗಿರುವುದರಿಂದ ಸೀತೆಯಂತೂ ಸುಖಶೃಂಗಕ್ಕೇರುತ್ತಾಳೆ. ಆದರೆ ಆ ಸುಖದ ದಿನಗಳು ಅವರ ಪಾಲಿಗೆ ಶಾಶ್ವತವಾಗಿ ಉಳಿಯುವುದಿಲ್ಲ. ಅವರು ಕಾಡಿನಲ್ಲಿ ಪಯಣಿಸುತ್ತಿರಬೇಕಾದರೆ ದಾರಿಯಲ್ಲಿ ಶಾಂತಿಭಂಗ ಮಾಡುತ್ತಿದ್ದ ವಿರಾಧ ಮತ್ತಿತರ ರಕ್ಕಸರ ನಾಶ ಅವರ ಜೀವನದ ಮುಂದಿನ ದುರ್ದಿನಗಳಿಗೆ ನಾಂದಿಯಾಗಿಬಿಡುತ್ತದೆ. ಶರಭಂಗರ ಆಶ್ರಮದಲ್ಲಿ ರಾಮ ಬೀಡುಬಿಡುತ್ತಾನೆ. ನಂತರ ಅವರೇ ಸುತೀಕ್ಷ್ಣರ ಆಶ್ರಮಕ್ಕೆ ಹೋಗಬೇಕೆಂದು ನಿರ್ದೇಶಿಸುತ್ತಾರೆ. ಸುತೀಕ್ಷ್ಣರ ಆಶ್ರಮ ಮತ್ತು ಸುತ್ತಮುತ್ತಲ ಪ್ರದೇಶದಲ್ಲಿ ತುಂಬಾ ಕಾಲ ಕಳೆಯುತ್ತಾರೆ.

ಸುತೀಕ್ಷ್ಣರ ಆಶ್ರಮದಿಂದ ಮತ್ತೆ ದಕ್ಷಿಣಕ್ಕೆ ಪಯಣಿಸುತ್ತಾರೆ. ಮಾರ್ಗಮಧ್ಯೆ ಅಗಸ್ತ್ಯರ ಆಶ್ರಮಕ್ಕೂ ಹೋಗುತ್ತಾರೆ. ಅಗಸ್ತ್ಯರು ಅವರಿಗೆ ಆತಿಥ್ಯ ನೀಡಿ ಒಂದು ಖಡ್ಗವನ್ನು ವರಪ್ರಸಾದವಾಗಿ ಕೊಟ್ಟು ಗೋದಾವರಿಯ ದಡದಲ್ಲಿರುವ ಜನಸ್ಥಾನಕ್ಕೆ ಹೋಗಿ ನೆಲೆಸಿ, ಅದು ಎಲ್ಲಾ ರೀತಿಯಿಂದಲೂ ವಾಸಕ್ಕೆ ಯೋಗ್ಯಸ್ಥಳವೆಂದು ತಿಳಿಸುತ್ತಾರೆ. ಅಲ್ಲಿ ತಮ್ಮ ವನವಾಸದ ಸುಖದ ಕೊನೆಯ ದಿನಗಳು ಕಳೆಯುತ್ತಿರುವಾಗ ರಾವಣನ ತಂಗಿ ಶೂರ್ಪನಖಿಯ ಕಣ್ಣಿಗೆ ಈ ಸಹೋದರರು ಬಿದ್ದರು. ಅವಳೋ ಇವರಿಬ್ಬರಿಗೂ ಮೋಹಪರವಶಳಾಗಿ ಮೆಚ್ಚಿಬಂದಳು. ಈ ಘಟನೆ ಅವರಿಗೆ ತತ್ಕಾಲದಲ್ಲಿ ಹಾಸ್ಯವನ್ನು ತಂದರೂ, ಅವಳಿಗೆ ಇವರು ಕೊಟ್ಟ ಶಿಕ್ಷೆ ರಾಕ್ಷಸರೊಡನೆ ವೈರವನ್ನು ತಂದು ಹಾಕಿತು. ಖರದೂಷಣಾದಿಗಳನ್ನು ಬಾಹುಬಲದಿಂದ ಕೊಂದರು.

ಆದರೆ ಶೂರ್ಪನಖಿ ಸುಮ್ಮನೆ ಕೂರುವ ಹೆಂಗಸಲ್ಲ. ನಡೆದ ಸಂಗತಿಗಳನ್ನು ರಾವಣನಲ್ಲಿಗೆ ಹೋಗಿ ತಿಳಿಸಿ ಅವನನ್ನೇ ಆಕ್ಷೇಪಿಸಿದಳು. ರಾಮನನ್ನು ಶಿಕ್ಷಿಸಬೇಕೆಂದು ಒತ್ತಾಯಿಸಿದಳು. 'ತನಗೆ ಮಾಡಿದ ಅವಮಾನಕ್ಕೆ, ಖರದೂಷಣರೊಡನಿದ್ದ ಹದಿನಾಲ್ಕು ಸಾವಿರ ಸೈನ್ಯ ನಾಶ ಮಾಡಿದ್ದಕ್ಕೆ ಸೇಡು ತೀರಿಸಿಕೊಳ್ಳಬೇಕು. ಅಲ್ಲದೆ ರಾಮನ ಮಡದಿ ಸೀತೆ ಅತ್ಯಂತ ಸುಂದರಿ, ಅವಳು ರಾಮನಿಗಿಂತ ರಾವಣನಿಗೆ ತಕ್ಕವಳು ಎಂದು ಕಾಮಬೀಜವನ್ನೂ ಬಿತ್ತಿದಳು. ರೋಷಗೊಂಡ ರಾವಣ ಜನಾಸ್ಥಾನಕ್ಕೆ ಬಂದು ಮಾರೀಚನನ್ನು ಮಾಯಾಜಿಂಕೆಯಾಗಿ ಸುಳಿಯಲು ಆಜ್ಞಾಪಿಸಿದನು. ವಿಧಿಯಿಲ್ಲದೆ ಮಾರೀಚ ಮಾಯಾಜಿಂಕೆಯ ವೇಷವನ್ನು ತೊಟ್ಟು ರಾಮನ ಕುಟೀರದ ಹತ್ತಿರ ಸೀತೆಗೆ ಕಾಣುವಂತೆ ಸುಳಿದಾಡಿದ. ಅದನ್ನು ನೋಡಿದ ಸೀತೆಗೆ ಹಂಬಲ ಉಂಟಾಯಿತು. ರಾಮ, ಜಿಂಕೆ ಹಿಡಿದು ತರಲು ಹೋದ. ಲಕ್ಷ್ಮಣ ಅವನನ್ನು ಹಿಂಬಾಲಿಸುವಂತಾಯಿತು. ಆ ಸಮಯ ನೋಡಿ ರಾವಣ ಸೀತೆಯನ್ನು

ಅಪಹರಿಸಿದ. ಅಲ್ಲಿಗೆ ರಾಮಾದಿಗಳ ವನವಾಸದ ಸುಖದ ದಿನಗಳು ಮುಗಿದವು. ರಾಕ್ಷಸರ ಮಾಯೆ ಎಂದು ತಿಳಿದೂ ತಿಳಿದೂ ಹೆಂಡತಿಯ ಹಠವನ್ನು ತಾಳಲಾರದೆ ಜಿಂಕೆಯನ್ನು ಬೆನ್ನಟ್ಟುವುದಾಗಲಿ, ಸೀತೆಯೂ ಲಕ್ಷ್ಮಣನನ್ನು ನಿಂದಿಸುವ ದೃಶ್ಯವಾಗಲಿ, ರಾಮನ ಕಟ್ಟಾಜ್ಞೆಯನ್ನು ಮೀರುವ ಲಕ್ಷ್ಮಣನಾಗಲಿ, ಅಯೋಧ್ಯಾಕಾಂಡದಲ್ಲಿ ನಾವು ಕಂಡಿರುವ ಅವರ ಸ್ವಭಾವಕ್ಕೆ ಅನುಗುಣವಾಗಿಲ್ಲ.

ರಾವಣ ಸೀತೆಯನ್ನು ಅಪಹರಿಸಿ ಎಳೆದೊಯ್ಯುವಾಗ, ತನ್ನನ್ನು ಬಲಾತ್ಕಾರದಿಂದ ಎತ್ತಿಕೊಂಡು ಹೋಗುತ್ತಿರುವ ರಕ್ಕಸನಿಂದ ಬಿಡಿಸಿ ತನ್ನನ್ನು ರಕ್ಷಿಸಲು ರಾಮಲಕ್ಷ್ಮಣರಿಗೆ ತಿಳಿಸಬೇಕೆಂದು ಬಡ ಬಡಿಸಿ ಬೊಬ್ಬೆಯಿಡುತ್ತಾಳೆ. ದಶರಥನ ಸ್ನೇಹಿತನಾಗಿದ್ದ ಜಟಾಯು ಸೀತೆಯನ್ನು ಬಿಡಿಸಿಕೊಳ್ಳಲು ಸಹಾಯಕ್ಕೆ ತೆರಳಿದರೆ ರಾವಣ ಕೋಪದಿಂದ ರೆಕ್ಕೆಗಳನ್ನೇ ಕತ್ತರಿಸುವನು. ಜಟಾಯು ಪೆಟ್ಟು ತಿಂದು ನೆಲಕ್ಕುರುಳಿದ. ದುರ್ಬಲಳಾದ ಸೀತೆಯನ್ನು ರಾವಣ ಲಂಕೆಗೆ ಕರೆದುಕೊಂಡು ಹೋದ. ಲಂಕೆಯಲ್ಲಿ ಸೀತೆಗೆ ಎಲ್ಲ ಅನುಕೂಲಗಳನ್ನು ಕಲ್ಪಿಸಿ ತನ್ನನ್ನು ವರಿಸೆಂದು ಕೇಳಿದ. ಅವಳು ತಿರಸ್ಕರಿಸಿದಾಗ ತನ್ನ ವೈಭೋಗವನ್ನೇ ಅವಳಿಗೆ ಧಾರೆಯೆರೆಯುವುದಾಗಿಯೂ ತನ್ನನ್ನು ವರಿಸಿದರೆ ಸಮಸ್ತ ಲಂಕೆಗೆ ಆಕೆಯೇ ಮಹಾರಾಣಿಯಾಗುವಳೆಂದು ಆಮಿಷವೊಡ್ಡಿದ. ಸೀತೆ ಒಪ್ಪಲಿಲ್ಲ. ರೊಚ್ಚಿಗೆದ್ದ ರಾವಣ ಅವಳಿಗೆ ಮನಸ್ಸು ಬದಲಿಸಲು ಅವಧಿ ಕೊಟ್ಟು ಅಶೋಕವನದಲ್ಲಿ ಬಂಧನದಲ್ಲಿಟ್ಟ.

ಇತ್ತ ತನ್ನ ಬಾಣಕ್ಕೆ ತುತ್ತಾದ ಜಿಂಕೆ ರಾಕ್ಷಸನಾಗಿ ಸತ್ತು ಬಿದ್ದದ್ದನ್ನೂ ತನ್ನ ಧ್ವನಿಯನ್ನೇ ಅನುಕರಿಸಿ 'ಲಕ್ಷ್ಮಣಾ, ಸೀತೇ' ಎಂದು ಕರೆದದ್ದನ್ನು ನೋಡಿ, ಕೇಳಿ, ರಾಮನಿಗೆ ಶಂಕೆ ಮೂಡಿ ಪರ್ಣಕುಟಿಯ ಕಡೆ ಧಾವಿಸಿದ. ಮಾರ್ಗಮಧ್ಯದಲ್ಲಿ ಲಕ್ಷ್ಮಣ ಸಿಕ್ಕ. ಆಗ ರಾಮ ಸೀತೆಯೊಬ್ಬಳನ್ನೇ ಬಿಟ್ಟು ನೀನೇಕೆ ಬಂದೆ? ಎಂದು ಆಕ್ಷೇಪಿಸಿದ. ಆಗಬಾರದ್ದೇನಾದರೂ ಆಗಿದ್ದರೆ ಎಂದು ಇಬ್ಬರೂ ಪರ್ಣಕುಟಿಗೆ ಓಡೋಡಿ ಬಂದರು. ಅಂದುಕೊಂಡಂತೆಯೇ ಆಗಿತ್ತು. ಸೀತೆ ಅಲ್ಲಿರಲಿಲ್ಲ. ಹುಡುಕಿದರೆ ಎಲ್ಲಿಯೂ ಸುಳಿವಿಲ್ಲ. ಅಧೀರನಾದ ರಾಮನಿಗೆ ಲಕ್ಷ್ಮಣನೇ ಧೈರ್ಯ ಹೇಳುವಂತಾಯಿತು. ಸೀತೆಯ ಶೋಧ ಕಾರ್ಯದಲ್ಲಿ ತೊಡಗಿದ್ದ ರಾಮ ಲಕ್ಷ್ಮಣರಿಗೆ ರಕ್ತಸಿಕ್ತವಾಗಿ ಸಾಯುವ ಸ್ಥಿತಿಯಲ್ಲಿದ್ದ ಜಟಾಯು ಸ್ವಲ್ಪ ದೂರದಲ್ಲಿ ಬಿದ್ದಿರುವುದು ಕಾಣಿಸಿತು. ಅವನಿಂದ 'ಸೀತೆಯ ಅಪಹರಣ ರಾವಣನಿಂದ' ಎಂದು ವೈರಿಯ ಹೆಸರು ಮಾತ್ರ ತಿಳಿಯಿತು. ಆತ ಅಷ್ಟು ಹೇಳಿ ಮರಣಿಸಿದ. ರಾಮ ಲಕ್ಷ್ಮಣರೇ ಅವನಿಗೆ ಪಿತೃಕಾರ್ಯವೆಂಬಂತೆ ಅಗ್ನಿ ಸಂಸ್ಕಾರ ಮಾಡಿದರು.

ಅಲ್ಲಿಂದ ಮುಂದುವರಿದವರಿಗೆ ಕಬಂಧನ ಸನ್ನಿವೇಶವೆದುರಾಗುತ್ತದೆ. ಆತನದು ತನ್ನ ನೀಳವೂ ಬಲಿಷ್ಠವೂ ಆದ ತೋಳುಗಳಿಂದ ಕೈಗೆ ಸಿಕ್ಕಿದ್ದನೆಲ್ಲ ಬಾಚಿ ತಿನ್ನುವ ರಾಕ್ಷಸ. ಆ ಕಂಬಂಧನ ಕೈಗಳಿಗಿವರಿಬ್ಬರೂ ಸಿಕ್ಕುತ್ತಾರೆ. ಆದರೆ ಅವನು ಕಬಳಿಸುವ ಮುನ್ನವೇ ಚೇತರಿಸಿಕೊಂಡು ಅವನ ತೋಳುಗಳನ್ನು ಕತ್ತರಿಸುತ್ತಾರೆ. ಕಬಂಧ ಆಗ ಇವರ ಹೆಸರನ್ನು ಕೇಳುತ್ತಾನೆ. ಹೇಳಿದ ಮೇಲೆ ತನ್ನ ಶಾಪ ವಿಮೋಚನೆಯಾಯಿತೆಂದು ಹೇಳಿ ತನ್ನ ಕೃತಜ್ಞತೆ ಸಲ್ಲಿಸುತ್ತಾನೆ. ಅದರ ಜೊತೆಗೆ ಸೀತೆಯನ್ನು ಪಡೆಯಲು ಸುಗ್ರೀವನ ಸ್ನೇಹ ಬೆಳೆಸುವಂತೆ ಹೇಳಿ ತನ್ನ ಈ ಭೂತಾಕಾರದ ದೇಹಕ್ಕೆ ಅಂತ್ಯ ಸಂಸ್ಕಾರ ಮಾಡಲು ಕೋರುತ್ತಾನೆ. ಅಷ್ಟೇ ಅಲ್ಲದೆ ಹೋಗುವ ದಾರಿಯಲ್ಲಿ ಮತಂಗಾಶ್ರಮವಿದೆ. ಅಲ್ಲಿ ಶಬರಿ ಎಂಬಾಕೆಯಿದ್ದಾಳೆ. ಸುಗ್ರೀವನನ್ನು ಕಾಣುವ ಮುಂಚೆ ಅವಳ ಆತಿಥ್ಯ ಸ್ವೀಕರಿಸಿ ಎಂದು ಹೇಳುತ್ತಾನೆ. ನಂತರ ರಾಮ ಲಕ್ಷ್ಮಣರು ಮರಣಿಸಿದ ಕಬಂಧನಿಗೆ ಅಗ್ನಿ ಸಂಸ್ಕಾರ ಮಾಡುತ್ತಾರೆ. ಕಬಂಧನ ಮಾತಿನಂತೆಯೇ ಮತಂಗಾಶ್ರಮಕ್ಕೆ ಬಂದು ಶಬರಿಯ ಆತಿಥ್ಯ ಸ್ವೀಕರಿಸುತ್ತಾರೆ. ಉಭಯಕುಶಲೋಪರಿ ನಡೆದ ಮೇಲೆ ಶಬರಿ ರಾಮನ ಅಪ್ಪಣೆ ಪಡೆದು ತನ್ನ ಜೀರ್ಣವಾದ ದೇಹವನ್ನು ತ್ಯಜಿಸುತ್ತಾಳೆ. ಅಲ್ಲಿಂದ ಮುಂದುವರಿದು ಪಂಪಾಸರೋವರದ ಸೊಬಗಿಗೆ ಮನಸೋಲುತ್ತಾರೆ. ನಂತರ ಸುಗ್ರೀವನೆಡೆಗೆ ಸಾಗುತ್ತಾರೆ. ಇಲ್ಲಿಗೆ ಅರಣ್ಯಕಾಂಡದ ಕಥೆ ಮುಗಿಯುತ್ತದೆ.

ಸೀತೆಯನ್ನು ಹುಡುಕುತ್ತಾ ಋಷ್ಯಮೂಕಪರ್ವತದ ಹತ್ತಿರ ಬರುತ್ತಾರೆ, ರಾಮಲಕ್ಷ್ಮಣರು. ಪಂಪಾಸರೋವರದ ಸೊಬಗು ರಾಮನಲ್ಲಿ ಸೀತೆಯ ವಿರಹತಾಪವನ್ನು ಉಕ್ಕಿಸುತ್ತದೆ. ಅಲ್ಲಿ ಬೆಟ್ಟದ ಮೇಲೆ ವಾಲಿಯ ಭಯದಿಂದಿದ್ದ ಸುಗ್ರೀವ ಹಾಗೂ ಅವನ ನಾಲ್ವರು ಮಂತ್ರಿಗಳು ಇವರನ್ನು ಕಂಡು ಅಂಜುತ್ತಾರೆ. ಕಡೆಗೆ ಹನುಮಂತನ ಮೂಲಕ ಮಾತನಾಡಿಸುತ್ತಾರೆ. ಒಬ್ಬರೊಬ್ಬರ ವಿಷಯ ತಿಳಿದ ಮೇಲೆ ಇಬ್ಬರೂ ಸಖ್ಯ ಬೆಳೆಸುತ್ತಾರೆ. ರಾಮ ಸುಗ್ರೀವರಿಬ್ಬರೂ ರಾಜ್ಯ ಭ್ರಷ್ಟರು, ಇಬ್ಬರು ತಮ್ಮ ತಮ್ಮ ಹೆಂಡತಿಯರ ವಿರಹತಾಪದಿಂದ ಬಳಲುತ್ತಿರುವವರು, ಸಹಜವಾಗಿಯೇ ಸಖ್ಯವಾಗುತ್ತದೆ. ಸುಗ್ರೀವನಿಗೆ ಎಷ್ಟು ರಾಮನ ಸಖ್ಯದಲ್ಲಿ ಆಸೆಯಿತ್ತೋ ರಾಮನಿಗೂ ಅಷ್ಟೇ ಅಗತ್ಯವಿದೆ. ಜನಬಲವಿಲ್ಲದೆ ಅವನು ಏನೂ ಮಾಡುವಂತೆಯೇ ಇರಲಿಲ್ಲ. ಈಗ ಸುಗ್ರೀವನಿಂದ ಜನ ಸಹಾಯ ಸಿಗಬೇಕಾದರೆ ಅವನನ್ನು ಗಂಡಾಂತರದಿಂದ ಪಾರು ಮಾಡಬೇಕಾಗಿತ್ತು. ವಾಲಿಯನ್ನು ಮೊದಲು ಕೊಲ್ಲಬೇಕಾಗಿತ್ತು. ಈ ಕಾಡಿನಲ್ಲಿ ಕ್ಷತ್ರಿಯ ಧರ್ಮವೆಂದು ನೇರವಾಗಿ ವಾಲಿಯೊಡನೆ ಯುದ್ಧಕ್ಕೆ ಹೋಗಿದ್ದರೆ, ರಾಜನಾದ ವಾಲಿಯ ಅಸಂಖ್ಯ ಸೇನೆಯೂ ಮೇಲೆ ಬೀಳಬಹುದೆಂದು ಹೆದರಿಕೆಯಾಗಿರಬಹುದು. ಆದ್ದರಿಂದ ಆಪತ್ಕಾಲದಲ್ಲಿ

ಆ ಧರ್ಮವನ್ನೂ ಮೀರಿ ರಾಮನು ಮರೆಯಿಂದಲೇ ವಾಲಿಯನ್ನು ಕೊಂದು ಸುಗ್ರೀವನ ಸಹಾಯವನ್ನು ಗಟ್ಟಿ ಮಾಡಿಕೊಳ್ಳಬೇಕಾಯಿತು. ಇಷ್ಟಾದರೂ ಸುಗ್ರೀವನು ಸ್ತ್ರೀಲೋಲನಾಗಿ ಮೈಮರೆತು ತಾನು ಕೊಟ್ಟ ಮಾತಿನ ಕಾರ್ಯವನ್ನು ತಡ ಮಾಡಿದನು. ಕೋಪಗೊಂಡ ರಾಮ; ಲಕ್ಷ್ಮಣನ ಮೂಲಕ ಬೆದರಿಸಿ ಅವನಿಂದ ಸೀತೆಯನ್ನರಸಲು ದೂತರನ್ನಟಿಸಬೇಕಾಯಿತು. ವಾಲಿಯ ಭಯದಿಂದ ಊರೂರು ದೇಶ ದೇಶ ತಿರುಗಿದ್ದ ಸುಗ್ರೀವನಿಗೆ ಆದಷ್ಟೂ ಭೌಗೋಳಿಕ ಪರಿಚಯವಿತ್ತು. ಆದ್ದರಿಂದಲೇ ಆತ ದೂತರಿಗೆ ಸಲಹೆ ಕೊಟ್ಟು; ಯಾರು ಯಾರನ್ನು ಯಾವ ಯಾವ ಕಡೆ ಕಳುಹಿಸಬೇಕೆಂದು ನಿರ್ಧರಿಸಿದ ಅವರಿಗೆ ಸೀತೆಯನ್ನು ಹುಡುಕಲು ಇಂತಿಷ್ಟು ಎಂದು ಅವಧಿಯನ್ನು ನಿಗಧಿ ಮಾಡಿ ಅಷ್ಟರೊಳಗೆ ಹುಡುಕಿ ತಾರದಿದ್ದರೆ ಮರಣ ದಂಡನೆಯೇ ಗತಿ ಎಂದು ಎಚ್ಚರಿಕೆಯನ್ನೂ ಕೊಟ್ಟು ಕಳುಹಿಸಿದ. ಆ ರೀತಿ ಹುಡುಕುತ್ತಾ ಹೊರಟ ಅಂಗದಾದಿಗಳಿಗೆ ಮಾರ್ಗದಲ್ಲಿ ಎಷ್ಟೆಷ್ಟೋ ಆಪತ್ತುಗಳು ಒದಗಿಬಂದವು. ಸ್ವಯಂಪ್ರಭೆಯ ಬಿಲವನ್ನೂ ಪ್ರವೇಶಿಸಿ ಹೊರಬರಲು ದಾರಿಕಾಣದೆ ಪರಿತಪಿಸಿದರು. ಅಲ್ಲಿ ಆಕೆ ತಾನು ಧ್ಯಾನ ಮಗ್ನಳಾಗಿರುವ ಕಾರಣವನ್ನೂ ಅದಕ್ಕುಂಟಾದ ಹಿನ್ನೆಲೆಯ ಪ್ರಸಂಗವನ್ನು ತಿಳಿಸಿ ವಾನರರಿಗೆ ಆತಿಥ್ಯ ನೀಡಿ ನಂತರ ಅವರನ್ನು ಬಿಲದ ದ್ವಾರಕ್ಕೆ ಕರೆತಂದು, ಸೀತೆಯನ್ನರಸುವ ನಿಮ್ಮ ಕಾರ್ಯಕ್ಕೆ ಮಂಗಳವಾಗಲೆಂದು ಹರಸಿ ಕಳುಹಿಸಿದಳು. ಸುಗ್ರೀವ ಕೊಟ್ಟ ಅವಧಿ ಕ್ಷೀಣಿಸುತ್ತಿರಲು ಅಂಗದಾದಿಗಳು ಭಯಗೊಂಡು ಒಂದೆಡೆ ಕುಳಿತು ಚಿಂತಿತರಾಗಿದ್ದ ಸಂದರ್ಭದಲ್ಲಿ ಸಂಪಾತಿಯ ಪರಿಚಯವಾಗಿ ಆತ ತನ್ನ ವೃತ್ತಾಂತವನ್ನೂ, ಜಟಾಯು ತನ್ನ ತಮ್ಮನೆಂದೂ ಹೇಳಿದನು. ಸೀತೆಯನ್ನುಳಿಸಲು ಹೋಗಿ ರಾವಣನೊಡನೆ ಹೋರಾಡಿ ವೀರಮರಣ ಪಡೆದನೆಂದು ವಾನರರು ಹೇಳಿದಾಗ ದುಃಖಿಸಿದ ನಂತರ ರಾವಣನ ಮೇಲೆ ತನಗೂ ದ್ವೇಷವಿದೆ. ಅದರೆ ನನಗೀಗ ವಯಸ್ಸಾಗಿದೆ ಎಂದು ಹೇಳಿ ಲಂಕೆಯ ಮಾರ್ಗವನ್ನು ತೋರಿದನು. ಸಮುದ್ರ ತಡಿಗೆ ಬಂದ ಅಂಗದಾದಿಗಳು ಮತ್ತೆ ಚಿಂತಿತರಾದರು. ನಂತರ ವೀರ ಹನುಮಂತ ತಾನು ಸಮುದ್ರವನ್ನು ಲಂಘಿಸಿ ಸೀತೆಯ ಇರುವಿಕೆಯನ್ನು ತಿಳಿದು ಬರುವೆನೆಂದು ಉಳಿದ ವಾನರರಿಗೆ ಅಭಯಕೊಟ್ಟು ಸಮುದ್ರ ಲಂಘನಕ್ಕೆ ಸಿದ್ಧನಾದನು. ಇಲ್ಲಿಗೆ ಕಿಷ್ಕಿಂಧಾಕಾಂಡ ಮುಗಿಯುತ್ತದೆ.

ಹನುಮಂತನು ಸಮುದ್ರವನ್ನು ದಾಟುವಾಗ ಮೈನಾಕ, ಸುರಸೆ, ಲಂಕಿಣಿ ಮುಂತಾದ ಅದ್ಭುತಗಳನ್ನೆಲ್ಲ ಕಾಣುತ್ತೇವೆ. ಅಂತೂ ಹನುಮಂತ ಸಮುದ್ರ ದಾಟಿ ಯಾರಿಗೂ ಕಾಣದಂತೆ ರಾತ್ರಿಯ ಕತ್ತಲಲ್ಲಿ ಲಂಕಾನಗರಿ ಸೇರಿದ. ಊರೊಳಗೆ ತಿರುಗಾಡಿದ. ಅರಮನೆಯೊಳಗೆ ರಾವಣನ ವಿಲಾಸ

ಮಂದಿರಗಳನ್ನು ಜಾಲಾಡಿದ. ಎಲ್ಲೂ ಸೀತೆಯ ಸುಳಿವಿಲ್ಲ. ಕೊನೆಗೆ ಅಶೋಕವನಕ್ಕೆ ಹೋದಾಗ ಅಲ್ಲಿ ಸೀತೆ ಒಂದು ಮರದ ಕೆಳಗೆ ಕುಳಿತಿರುವುದು ಕಾಣುತ್ತದೆ. ಕ್ರೂರಿಗಳೂ, ಕುರೂಪಿಗಳೂ ಆದ ರಾಕ್ಷಸಿಯರು ಅವಳಿಗೆ ಕಾವಲಿದ್ದಾರೆ. ಅವರೆಲ್ಲರ ಕಣ್ಣು ತಪ್ಪಿಸಿ ಸೀತೆ ಒಬ್ಬಳೇ ಇದ್ದಾಗ ಹನುಮ ಅವಳಿಗೆ ಕಾಣಿಸಿಕೊಳ್ಳುತ್ತಾನೆ. ತಾನು ರಾಮದೂತನೆಂದೂ ತಿಳಿಸಿ ರಾಮ ಕೊಟ್ಟಿದ್ದ ಮುದ್ರೆಯುಂಗರವನ್ನು ಆಕೆಗೆ ಅರ್ಪಿಸುತ್ತಾನೆ. ಸೀತೆಗೆ ಸಂತೋಷವಾಗುತ್ತದೆ. ಅವಳಿಂದ ಕುರುಹಾಗಿ ಚೂಡಾಮಣಿಯನ್ನು ತೆಗೆದುಕೊಂಡನು. ಆಗ ಸೀತೆ, ತನಗಧೀನವಾಗುವುದಕ್ಕೆ ರಾವಣನು ಆಕೆಗೆ ಕೊಟ್ಟಿದ್ದ ಅವಧಿಯಲ್ಲಿ ಇನ್ನು ಎರಡು ತಿಂಗಳು ಮಾತ್ರ ಇದೆ. ಅಷ್ಟರೊಳಗೆ ನನಗೆ ಬಿಡುಗಡೆಯಾಗದಿದ್ದರೆ ನನ್ನನ್ನು ಕೊಲ್ಲಲಿದ್ದಾನೆ ಎಂದು ಹೇಳುತ್ತಾಳೆ. ಆಗ ರಾಮನ ಪರವಾಗಿ ಹನುಮಂತನೇ ಆಕೆಗೆ ಮಾತು ಕೊಡುತ್ತಾನೆ. ತಾವೆಲ್ಲರೂ ಬೇಗ ಬಂದು ಅವಧಿಯ ಒಳಗಾಗಿ ಬಿಡಿಸಿಕೊಳ್ಳುತ್ತೇವೆ ಎಂದು. ಸೀತೆ, ರಾಮಲಕ್ಷ್ಮಣರ ಆರೋಗ್ಯಕ್ಕೂ ಮುಂದಿನ ವಿಜಯಕ್ಕೂ ಹಾರೈಸಿ ಕಳುಹಿಸುತ್ತಾಳೆ. ಧೈರ್ಯವಾಗಿ ಲಂಕೆಯನ್ನೆಲ್ಲಾ ಅಲೆದಾಡಿ ಲಂಕೆಯ ಬಲಾಬಲಗಳನ್ನು ಅರಿಯಲು ತನ್ನ ಶಕ್ತಿ ಪ್ರಭಾವಗಳ ಕುರುಹುಗಳನ್ನು ಆಂಜನೇಯ ಅಲ್ಲಿ ಉಳಿಸುತ್ತಾನೆ. ಈತನ ಉಪಟಳಕ್ಕೆ ದೈತ್ಯರೇ ದಂಗಾಗಿ ಹೋಗುತ್ತಾರೆ. ಕೊನೆಗೆ ಇವನನ್ನು ಹಿಡಿದು ಕಟ್ಟಿ ಕಪಿ ಎಂದು ಹಾಸ್ಯ ಮಾಡಿ ಬಾಲಕ್ಕೆ ಬೆಂಕಿಯಿಟ್ಟರೆ, ಅದೇ ಬೆಂಕಿಯಲ್ಲಿ ಹನುಮ ಲಂಕೆಯನ್ನೇ ಸುಡುತ್ತಾನೆ. ನಂತರ ಮತ್ತೊಮ್ಮೆ ಸೀತೆಯ ದರ್ಶನ ಮಾಡಿ ತನ್ನ ಸ್ನೇಹಿತರಿದ್ದಲ್ಲಿಗೆ ಹಿಂತಿರುಗುತ್ತಾನೆ. ಸೀತೆಯನ್ನು ಕಂಡ ಸಿಹಿ ಸುದ್ದಿ ಹೇಳುತ್ತಾನೆ. ಅಲ್ಲಿಂದ ಅವರು ಸುಗ್ರೀವ ರಾಮರಲ್ಲಿಗೆ ಹಿಂದಿರುಗುವಾಗ ಸುಗ್ರೀವನ ಒಡೆತನದಲ್ಲಿದ್ದ ಆತನ ಮಾವ ದಧೀಮುಖನ ರಕ್ಷಣೆಯಲ್ಲಿದ್ದ ಮಧುವನಕ್ಕೆ ಧಾಳಿಯಿಟ್ಟು ತಮಗೆ ಬೇಕಾದ ಹಣ್ಣು ಜೇನುಗಳನ್ನು ಸವಿಯುತ್ತಾರೆ. ಅಲ್ಲಿಂದ ಪಯಣಿಸಿ ರಾಮನಿಗೆ ಸೀತೆಯ ಚೂಡಾಮಣಿಯನ್ನು ಕೊಟ್ಟು ಸೀತೆಯ ಸುದ್ದಿಯನ್ನು ವಿವರವಾಗಿ ಹೇಳುತ್ತಾರೆ. ಇಲ್ಲಿಗೆ ಸುಂದರಕಾಂಡದ ಕಥೆ ಮುಗಿಯುತ್ತದೆ.

ರಾಮನ ಅಪ್ಪಣೆಯ ಮೇರೆಗೆ ಸುಗ್ರೀವ ಬೇಗನೆ ಸೈನ್ಯವನ್ನು ಸಿದ್ಧಗೊಳಿಸುತ್ತಾನೆ. ಸೈನ್ಯದ ಪ್ರಯಾಣ ಬೇಗ ಆರಂಭವಾಗಿ ದಕ್ಷಿಣ ಸಮುದ್ರ ತೀರದಲ್ಲಿ ಬೀಡು ಬಿಡುತ್ತದೆ. ರಾಮನಿಗೆ ಇಡೀ ಸೈನ್ಯವನ್ನು ಸಮುದ್ರ ದಾಟಿಸುವುದು ಹೇಗೆಂಬ ಚಿಂತೆ. ಮಹಾಅಭಿಯಂತರು ನಳನಿಂದ ಸೇತುವೆ ಕಟ್ಟುವ ಸನ್ನಾಹದಿಂದ ಚೈತ್ಯ ಯಾತ್ರೆ ಹೊರಟಾಯಿತು.

ಅತ್ತ ರಾವಣ ಒಂದು ಮಂತ್ರಾಲೋಚನೆ ಸಭೆಯನ್ನು ನಡೆಸಿ ಲಂಕೆಗೆ ಒದಗಲಿರುವ ಕೇಡನ್ನು ಅಧಿಪತಿಗಳಿಗೆ ವಿವರಿಸುತ್ತಾನೆ. ವಿಭೀಷಣ ಮತ್ತೊಬ್ಬ ಹಿರಿಯನನ್ನು ಹೊರತುಪಡಿಸಿ ಉಳಿದವರೆಲ್ಲರೂ ಯುದ್ಧಕ್ಕೆ ಒಪ್ಪುವರು. ಕುಂಭಕರ್ಣನಿಗೆ ಸೀತೆಯನ್ನು ರಾವಣ ಅಪಹರಿಸಿ ತಂದಿರುವುದು ಇಷ್ಟವಾಗದಿದ್ದರೂ ರಾವಣನ ಇಂದಿನ ತೀರ್ಮಾನವನ್ನು ವಿಭೀಷಣನಷ್ಟು ಪ್ರತಿಭಟಿಸಲಿಲ್ಲ. ವಿಭೀಷಣನು ರಾವಣನಿಗೆ ಸಂಧಿಯ ಉಪದೇಶ ಮಾಡಿದರೂ ಪಥ್ಯವಾಗುವುದಿಲ್ಲ. ನಂತರ ವಿಭೀಷಣ ರಾಮನ ಕಡೆ ಸೇರಲು ಬರುತ್ತಾನೆ. ಅಷ್ಟರಲ್ಲಿ ಇತ್ತ ಸೇತುವೆಯೂ ನಿರ್ಮಾಣವಾಗಿರುತ್ತದೆ. ವಿಭೀಷಣನನ್ನು ರಾಮ ಮನ್ನಿಸುತ್ತಾನೆ. ಅಲ್ಲದೆ ಅವನ ಸಹಾಯದಿಂದಲೇ ಮಹಾಯುದ್ಧ ನಡೆದು ಕೊನೆಗೊಳ್ಳುತ್ತದೆ. ರಾವಣ ಮತ್ತಿತರ ದುಷ್ಟ ರಕ್ಕಸರು ಹತರಾಗುತ್ತಾರೆ. ರಾಮನಿಗೆ ಜಯ ದೊರೆತ ಮೇಲೆ ಲಂಕೆಯಲ್ಲಿ ವಿಭೀಷಣನ ಪಟ್ಟಾಭಿಷೇಕವಾಗುತ್ತದೆ. ತದನಂತರ ಅಗ್ನಿಪರೀಕ್ಷೆಯಲ್ಲಿ ಸೀತೆಯ ಪರಿಶುದ್ಧತೆ ಕಂಡ ಮೇಲೆ ರಾಮನು ಅವಳನ್ನು ಸ್ವೀಕರಿಸುವನು. ಇಷ್ಟು ಹೊತ್ತಿಗೆ ವನವಾಸದ ಅವಧಿ ಮುಗಿದಿತ್ತು. ಆದ್ದರಿಂದ ಭರತನಿಗೆ ರಾಮ ಬರುತ್ತಾನೆಂಬ ಸುದ್ದಿ ಮುಟ್ಟಿಸಲು ಮೊದಲು ಹನುಮಂತನನ್ನು ಕಳುಹಿಸಿ ನಂತರ ಸೀತೆ, ಲಕ್ಷ್ಮಣ, ವಿಭೀಷಣ, ಅನಲೆ ಮತ್ತು ವಾನರ ವೃಂದದೊಡನೆ ಅಯೋಧ್ಯೆಗೆ ಹೊರಡುತ್ತಾನೆ. ಮಾರ್ಗಮಧ್ಯದಲ್ಲಿ ಕಿಷ್ಕಿಂಧಾ ಪಟ್ಟಣದ ಅರಸಿಯರನ್ನು ಕರೆದುಕೊಂಡು ಹೋಗುತ್ತಾರೆ. ಅಯೋಧ್ಯೆಗೆ ತೆರಳುವ ಮುನ್ನ ಭಾರದ್ವಾಜ ಮುನಿಗಳ ಆಶ್ರಮ ಹೊಕ್ಕು ಅಲ್ಲಿಂದ ನಂದಿಗ್ರಾಮ ಸೇರುತ್ತಾರೆ. ರಾಮನ ಪಟ್ಟಾಭಿಷೇಕವಾಗುತ್ತದೆ.

ಹೀಗೆ ಮಹಾಕಾವ್ಯವಾದರೂ ರಾಮಾಯಣದಲ್ಲಿ ಅನ್ಯಾದೃಶವಾದ ಏಕಸೂತ್ರತೆಯಿದೆ. ಒಬ್ಬ ಕವಿ ಪ್ರತಿಭೆಯ ಕೈವಾಡವಿದೆ. ಸಾಮಾನ್ಯ ಘಟನೆಗಳನ್ನೇ ತೆಗೆದುಕೊಂಡು ಇಷ್ಟು ರಸಮಯವಾಗಿಯೂ ಇಟ್ಟು ಹೃದಯಂಗಮಯವಾಗಿಯೂ ವರ್ಣಿಸಿದ ಆದಿಕವಿಯ ಕಾವ್ಯಕಲೆಯನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ. ಇಂಥ ಆದಿಕಾವ್ಯದಿಂದ ನಂತರದ ರಾಮಕಥೆಯ ಕಾವ್ಯಗಳು ಎಷ್ಟು ಪ್ರಭಾವಿತವಾಗಿದೆ ಎನ್ನುವುದನ್ನು ಮುಂದಿನ ಅಧ್ಯಾಯಗಳಲ್ಲಿ ಶೋಧಿಸಲಾಗಿದೆ.

**ಆ) ಭಾಸನ ರಾಮಾಯಣ ಕಥಾಧಾರಿತ ನಾಟಕಗಳಲ್ಲಿ ರಾಮಕಥಾಸ್ವರೂಪ:–**

ಭಾಸನು ಕಾಳಿದಾಸನಿಗೂ ಪ್ರಾಚೀನ. ಇದುವರೆವಿಗೂ ಈತ ಬರೆದಿರುವ ಹದಿನಾಲ್ಕು ನಾಟಕಗಳು ನಮಗೆ ದೊರಕಿವೆ. ಯಜ್ಞಫಲ, ಪ್ರತಿಮಾನಾಟಕ, ಅಭಿಷೇಕ ನಾಟಕ, ಪಂಚರಾತ್ರ ಮಧ್ಯಮ, ವ್ಯಾಯೋಗ, ದೂತವಾಕ್ಯ, ದೂತಘಟೋತ್ಕಚ, ಕರ್ಣಭಾರ, ಊರುಭಂಗ, ಬಾಲಚರಿತ, ಪ್ರತಿಜ್ಞಾಯೌಂಗಧರಾಯಣ, ಸ್ವಪ್ನ ವಾಸವದತ್ತ, ಅವಿಮಾರಕ ಮತ್ತು ಚಾರುದತ್ತ ನಾಟಕಗಳು. ಭಾಸನು ತನ್ನ ನಾಟಕಗಳಿಗೆ ಕಥಾವಸ್ತುವನ್ನು ರಾಮಾಯಣ, ಮಹಾಭಾರತ, ಭಾಗವತ ಮತ್ತು ಬೃಹತ್ಕಥೆಗಳಿಂದ ತೆಗೆದುಕೊಂಡಿದ್ದಾನೆ.

ಯಜ್ಞಫಲ, ಪ್ರತಿಮಾನಾಟಕ ಮತ್ತು ಅಭಿಷೇಕ ನಾಟಕಗಳು ರಾಮಾಯಣ ಸಂಬಂಧೀ ನಾಟಕಗಳು. ಯಜ್ಞಫಲವು ರಾಮಾಯಣದ ಬಾಲಕಾಂಡದ ಕಥೆಯನ್ನಾಧರಿಸಿದ ನಾಟಕವಾದರೆ, ಪ್ರತಿಮಾನಾಟಕವು ಅಯೋಧ್ಯಾ ಮತ್ತು ಅರಣ್ಯಕಾಂಡಗಳ ಕಥಾವಸ್ತುವನ್ನಾಧರಿಸಿದ್ದು, ಅಭಿಷೇಕ ನಾಟಕವು ಕಿಷ್ಕಿಂಧಾ, ಸುಂದರ ಮತ್ತು ಯುದ್ಧಕಾಂಡಗಳ ಕಥೆಯನ್ನು ಆಧರಿಸಿದ್ದಾಗಿದೆ. ಈ ಮೂರು ನಾಟಕಗಳನ್ನು ಡಾ.ಎಲ್.ಬಸವರಾಜುರವರು ಕನ್ನಡಕ್ಕೆ ಅನುವಾದಿಸಿ ಕತೆಯ ಓಟಕ್ಕೆ ಧಕ್ಕೆಬಾರದಹಾಗೆ ಜೋಡಿಸಿ 'ಭಾಸ ರಾಮಾಯಣ ನಾಟಕ ತ್ರಿವೇಣಿ' ಎಂಬ ಹೆಸರಿನಿಂದ ಕರೆದಿದ್ದಾರೆ.

ಮೊದಲನೇ ದೃಶ್ಯದಲ್ಲಿ ಮಹಾರಾಜನ ಅಪ್ಪಣೆಯ ಮೇರೆಗೆ ಮಂತ್ರಿ ಸುಮಂತ್ರನು ಪೌರರಿಗೆ, ಬ್ರಾಹ್ಮಣರಿಗೆ ಎಲ್ಲರಿಗೂ ಭೋಜನ ಏರ್ಪಡಿಸಿ ತಕ್ಕುದಾದ ದಾನ ಮಾಡಿ, ಬೇಡಿದವರ ಬಯಕೆಯನ್ನು ಈಡೇರಿಸಿದ್ದಾನೆ. ಕಾರಣ ದಶರಥ ಮಹಾರಾಜನಿಗೆ ಮಕ್ಕಳು ಜನಿಸಿವೆ.

ಮಹಾರಾಜನಿಗೆ ಮಕ್ಕಳಾಗಿ ಮನೋರಥಗಳೆಲ್ಲಾ ಈಡೇರಿದ್ದರೂ ಮನಸ್ಸಿಗೇಕೊ ಅಷ್ಟು ಸಂತೋಷವಿಲ್ಲ. ಕಾರಣ ಹುಟ್ಟಿದ ಮಕ್ಕಳಿಗೆ ವಿನಯವನ್ನು ಕಲಿಸಬೇಕು, ವೇದಾಧ್ಯಯನವ ಮಾಡಿಸಬೇಕು, ರಾಗದ್ವೇಷವಿಲ್ಲದೆ ನಿಷ್ಪಕ್ಷಪಾತದಿಂದ ಪ್ರಜಾಪಾಲನೆ ಮಾಡುವುದನ್ನು ತಿಳಿಸಬೇಕು. ಈ ಕರ್ತವ್ಯವನ್ನೆಲ್ಲ ಮಾಡದೇ ಹೋದರೆ ಧರ್ಮವನ್ನು ಕೈಬಿಟ್ಟಂತಾಗುವುದು ಎಂಬುದೇ ಅವನ ಚಿಂತೆಯಾಗಿದೆ.

ಎರಡನೇ ದೃಶ್ಯದಲ್ಲಿ ಮೂವರು ಪತ್ನಿಯರು, ಮಕ್ಕಳಿಗೆ ಉಪನಯನೋತ್ಸವ ಮುಗಿದ ಮೇಲೆ ಮಹಾರಾಜನನ್ನು ಕಾಣಲು ಬಯಸುತ್ತೇವೆಂದೂ ಮೊದಲು ತನಗೆ ಆದ್ಯತೆ ನೀಡಿ ಸಂಭಾವಿಸಬೇಕೆಂದು ಪ್ರತ್ಯೇಕವಾಗಿ ತಮ್ಮ ತಮ್ಮ ಸಖಿಯರ ಮೂಲಕ ಹೇಳಿಕಳುಹಿಸುತ್ತಾರೆ.

ಕೈಕೆಯ ಪರವಾಗಿ ಮಂಥರೆ ಬಂದು ಕೈಕೆಯ ನಿವೇದನೆಯನ್ನು ವ್ಯಕ್ತಪಡಿಸಿದ್ದಾಗ ದಶರಥನು ಸ್ವಗತದಲ್ಲಿ ಕೈಕೇಯಿ ತನ್ನ ಶೌರ್ಯದಿಂದ ನನ್ನ ಜೀವನವನ್ನು ರಕ್ಷಿಸಿ ತನ್ನಲ್ಲಿ ಹುಟ್ಟಿದ ಮಗನೇ ಪಟ್ಟಾಭಿಷಿಕ್ತನಾಗಬೇಕೆಂದು ವಚನ ತೆಗೆದುಕೊಂಡಿದ್ದಾಳೆ. ಆಗ ಅವಳನ್ನು ಉಪೇಕ್ಷಿಸುವಂತಿಲ್ಲ. ಅವಳು ಶೌರ್ಯ-ಪ್ರಣಯಶಾಲಿನಿಯಾದ್ದರಿಂದ ಆಕೆಯ ಕೋಪವನ್ನಾಗಲಿ, ಅಭಿಮಾನವನ್ನಾಗಲಿ ಬಗೆಯರಿತು ಸನ್ಮಾನಿಸಿದರೆ, ಅವಳೆಲ್ಲರಿಗಿಂತ ಶೀಘ್ರವಾಗಿ ಸಮಾಧಾನಗೊಳ್ಳುತ್ತಾಳೆಂದುಕೊಂಡು ಮಂಥರೆಯನ್ನು ಕುರಿತು-ಮೂವರು ರಾಣಿಯರು ನನಗೆ ಹೇಳಿಕಳುಹಿಸಿದ್ದಾರೆ. ಧರ್ಮ, ಅರ್ಥ, ಕಾಮಗಳಲ್ಲಿ ಯಾವುದೊಂದನ್ನು ಕೀಳು-ಮೇಲೆಂದು ಕಾಣಬಾರದು. ಹಾಗೆಯೇ ಮಕ್ಕಳನ್ನು ಹೆತ್ತಿರುವ ಮೂವರೂ ರಾಣಿಯರನ್ನೂ ಸಮಾನವಾಗಿಯೇ ಸಂಭಾವಿಸಬೇಕು. ಆದುದರಿಂದ ಮೂವರು ನನ್ನನ್ನೂ ಮಧ್ಯ ಮಂದಿರದಲ್ಲಿ ಕಾಣಲಿ ಎಂದು ಹೇಳಿಕಳುಹಿಸುತ್ತಾನೆ.

ಮೂರನೇ ದೃಶ್ಯದಲ್ಲಿ; ಮಹಾರಾಜನು ಮೂವರು ರಾಣಿಯರನ್ನು ಒಪ್ಪಿಸಿ, ರಾಮನಿಗೆ ರಾಜ್ಯಾಭಿಷೇಕ ಮಾಡಬೇಕು, ಇಲ್ಲದಿದ್ದರೆ ಮುಂದೆ ಕಷ್ಟವಾಗುತ್ತದೆ ಎಂದು ಅಮಾತ್ಯ ಸುಮಂತ್ರನ ಮೂಲಕ ಹಂಚಿಕೆಯನ್ನು ಮಾಡಲು ಯತ್ನಿಸುತ್ತಾನೆ. ರಾಣಿಯರು, ಸಚಿವರು, ಪ್ರಜೆಗಳೆಲ್ಲರ ಮನಸ್ಸೂ ರಾಮನಲ್ಲಿ ಅನುರಕ್ತವಾಗುವಂತೆ ಮಾಡಿ ಭರತನಿಗೆ ಅಣ್ಣನಲ್ಲಿ ಭಕ್ತಿಯುಂಟಾಗುವಂತೆ ಮಾಡಬೇಕೆಂಬುದೇ ಆಗಿರುತ್ತದೆ. ಅಷ್ಟರಲ್ಲಿ ಮೂವರೂ ರಾಣಿಯರ ಪ್ರವೇಶವಾದ್ದರಿಂದ ಸುಮಂತ್ರ ಅಲ್ಲಿಂದ ಹೊರಟು ಹೋಗುತ್ತಾನೆ. ಬಂದವರೇ ನಮ್ಮನ್ನು ಕರೆಸಿದ ಉದ್ದೇಶವೇನೆಂದು ಕೇಳುತ್ತಾರೆ.

ದಶರಥನ ಕುಮಾರರಿಗೆಲ್ಲ ಉಪನಯವಾಯಿತು ಅವರಿಗೀಗ ಹದಿನೈದು ವಯಸ್ಸು. ಅವರಲ್ಲಿ ಹೆಚ್ಚು ಗುಣವಂತನನ್ನು ವೀರನನ್ನು ಆರಿಸಿ ಪಟ್ಟಗಟ್ಟಬೇಕೆಂದಾಗ ಮೂವರು ರಾಮನ ಹೆಸರನ್ನೇ ಎತ್ತಿ ಹಿಡಿಯುತ್ತಾರೆ. ರಾಜನಿಗೆ ಕೈಕೇಯಿಯದೆ ಆತಂಕವಾಗಿರುತ್ತದೆ. ಕೈಕೇಯಿ ನಿರ್ವಿವಾದವಾಗಿ ರಾಮನೇ ಅರ್ಹನೆಂದಾಗ ದಶರಥನು, 'ತಾನು ಕೊಟ್ಟ ವಚನದ ಗತಿಯೇನು?

ಪ್ರತಿಜ್ಞಾ ಹಾನಿಯು ಪಾತಕವೆಂಬ ಒಂದು ಸಂಪ್ರದಾಯವೊಂದಿದೆಯಲ್ಲ! ಎನ್ನುತ್ತಾನೆ. ಅದಕ್ಕೆ ಅವಳು 'ನಿನ್ನಂತಹ ರಾಜರ್ಷಿಯು ಪ್ರತಿಜ್ಞೆಗೆ ತಪ್ಪಿದರೆ ಮಹತ್ತಾದ ಅನರ್ಥ ತಪ್ಪದು' ಎಂದು ಹೇಳಿ, ಆದರೆ ಜನತೆಯ ಸೌಖ್ಯಕ್ಕಾಗಿ ಪ್ರತಿಜ್ಞೆ ಮುರಿಯಬಹುದು. ಆಗ ದೋಷ ಲವಲೇಶವು ಇಲ್ಲ. ರಾಮನು ಸರ್ವಗುಣ ಸಂಪನ್ನ. ಭೂಮಿಯನ್ನು ರಕ್ಷಿಸಲು ಬ್ರಹ್ಮನೇ ಸೃಷ್ಟಿಸಿದಂತಿದೆ. ಆತ ವಿಷ್ಣುವಿಗೆ ಸರಿಸಮ. ಆತನ ಮುಂದೆ ಭರತನ ಗುಣಗಳು ಗಣನೆಗೆ ಬಾರವು. ಆದುದರಿಂದ ರಾಜ್ಯಕ್ಕೆ ರಾಮನೇ ಅರ್ಹ' ಎಂಬ ಅಮೃತವೃಷ್ಟಿಯನ್ನೇ ಕರೆಯುತ್ತಾಳೆ. ದಶರಥನು ವಿಸ್ಮಿತನಾದರೂ 'ಪ್ರತಿಜ್ಞೆಗೆ ತಪ್ಪಿದರೆ ಮಹತ್ತಾದ ಅನರ್ಥ ತಪ್ಪದು' ಎಂಬ ಮಾತು ಮೊಳಕೆ ರೂಪದಲ್ಲಿದ್ದು 'ಕಾಲ ಬಂದಾಗ' ಅವಳಲ್ಲಿ ಪಲ್ಲವಿಸಬಿಡಬಹುದೇನೊ ಎಂಬ ಆತಂಕದಿಂದ 'ಕಾಲಬಂದಾಗ ನನ್ನ ಮಕ್ಕಳಲ್ಲಿ ಯಾರಾದರೂ ರಾಜನಾಗಲಿ ಆಗುವುದೂ, ಬಿಡುವುದೂ ವಿಧಿಯ ಅಧೀನ' ಎಂದು ಎಲ್ಲರನ್ನು ಬೀಳ್ಕೊಡುತ್ತಾನೆ. ಮೂಲದಲ್ಲಿ ಈ ಪ್ರಸಂಗವಿರುವುದಿಲ್ಲ.

ಸುಮಂತ್ರನು ಮತ್ತೆ ಬಂದು 'ಮಕ್ಕಳೆಲ್ಲ ಶಾಸ್ತ್ರಗಳನ್ನು ಮೊದಲೇ ಅಧ್ಯಯನ ಮಾಡಿದ್ದರೋ ಎಂಬಂತೆ ಬಲು ಬೇಗ ಕಲಿತುಬಿಟ್ಟರು. ಇನ್ನೀಗ, ಅವರಿಗೆ ಶಸ್ತ್ರಾಸ್ತ್ರಗಳನ್ನು ಕಲಿಸಲು ಯಾರಾದರೊಬ್ಬರನ್ನು ನೇಮಿಸಬೇಕಾಗಿದೆ ಎಂದು ಪೂಜ್ಯ ವಸಿಷ್ಠರು ಹೇಳಿ ಕಳುಹಿಸಿದ್ದಾರೆ ಎಂದು ಹೇಳುತ್ತಾನೆ. ಅಷ್ಟರಲ್ಲಿ ಪ್ರಧಾನ ಸೇವಕನಾದ ಸುಬುದ್ಧಿಯು 'ಲೋಕವನ್ನೇ ಜಯಿಸಿದ ರಾವಣನಿಗೆ ರಾಮನ ಅಮರ್ತ್ಯ ಪೌರುಷದಿಂದ ಮನಶಾಂತಿಗೆ ಭಂಗವಾಗಿ ಇಲ್ಲಿ ಗೂಢವಾಗಿ ಸಂಚರಿಸುತ್ತಿದ್ದಾನೆ ಎಚ್ಚರಿಕೆ' ಎಂದು ಸಾರುತ್ತಾನೆ. ದಶರಥನು ಮಕ್ಕಳಿಲ್ಲದಿದ್ದರೊಂದು ಚಿಂತೆ; ಮಕ್ಕಳಿದ್ದರಂತೂ ನಾನಾ ಚಿಂತೆ! ನನ್ನ ಮಕ್ಕಳೊಡನೆಯೇ ಅವರಿಗೆ ಶತ್ರುಗಳೂ ಹುಟ್ಟಿಕೊಂಡರಲ್ಲ! ಮಕ್ಕಳೆನೋ ಚಿಕ್ಕವರು; ವೈರಿಗಳೊ ದೊಡ್ಡವರು. ನಾನಾದರೋ ಮುಪ್ಪಿನವನು. ದೇವರೇ ಕಾಪಾಡಬೇಕು ಎನ್ನುವ ದಶರಥನ ಮಾತುಗಳಲ್ಲಿ ತನ್ನ ವೀರತನದ ಕಾಲ ಮುಗಿಯಿತು ಎನ್ನುವ ಭಾವವಡಗಿದೆ. ಈ ಮೂರು ದೃಶ್ಯಗಳುದ್ದಕ್ಕೂ ಲಾಡು ಪ್ರಿಯ ವಿದೂಷಕನು, ವಿನೋದದ ಮಾತುಗಳಿಂದ ರಂಜಿಸುವುದು ಒಂದು ವಿಶೇಷವಾಗಿದೆ.

ನಾಲ್ಕನೇ ದೃಶ್ಯದಲ್ಲಿ ದೇವೇಂದ್ರನು, ಚಿತ್ರಕೇತು ಮತ್ತು ಚಿತ್ರಪದ ಎಂಬ ಗಂಧರ್ವರನ್ನು ರಾಮನನ್ನು ರಕ್ಷಿಸಲು ಕಳುಹಿಸಿದ್ದಾನೆ. ಅವರು ಅದೃಶ್ಯವಾಗಿದ್ದು ಕೊಂಡು ರಾವಣಾದಿಗಳಿಂದ ಏನಾದರೂ ಅಪಾಯವುಂಟಾಗುತ್ತದೆಯೇ ಎಂದು ಕಾಯಲು ಬರುತ್ತಾರೆ.

ರಾವಣನೋ ಬಾಲರಾಮನಲ್ಲಿನ ಅಮರ್ತ್ಯ ಶಕ್ತಿಯನ್ನು ಕೇಳಿಯೇ ಹೆದರಿಕೊಂಡು 'ಅವನನ್ನು ಇಲ್ಲವಾಗಿಸಬೇಕು ಅಥವಾ ಸೆರೆಹಿಡಿದು ನನ್ನೂರಿಗೊಯ್ಯಬೇಕು' ಎಂಬ ನಿರ್ಧಾರದಿಂದ ಅದೃಶ್ಯನಾಗಿ ದಶರಥನ ಅರಮನೆಯ ಬಳಿ ಬಂದಿದ್ದಾನೆ. ಅದೇ ವೇಳೆಗೆ ವಿಶ್ವಾಮಿತ್ರನು ತನ್ನಲ್ಲಿರುವ ಬಲ, ಅತಿಬಲ, ಜಯ, ವಿಜಯ ಎಂಬ ವಿದ್ಯೆಗಳನ್ನು ಜೃಂಬಕ, ಬ್ರಹ್ಮಾಸ್ತ್ರಗಳೆಂಬ ದಿವ್ಯಾಸ್ತ್ರಗಳನ್ನು ಪಡೆಯಬಲ್ಲ ವೀರನಿಗಾಗಿ ಶೋಧಿಸುತ್ತಾ, ಅದಕ್ಕೆ ರಾಮನೇ ಸರಿಯೆಂದು ಅಲ್ಲಿಗೆ ಬರುತ್ತಾನೆ. ಅಲ್ಲಿ ಅದೃಶ್ಯವಾಗಿರುವ ರಾವಣನನ್ನು ತನ್ನ ದಿವ್ಯಶಕ್ತಿಯಿಂದ ಅರಿತು 'ನಾನಿವನ ಕಣ್ಣಿಗೆ ಅದೃಶ್ಯನಾಗಿದ್ದುಕೊಂಡು ಏನು ಮಾಡುವನೋ ನೋಡುತ್ತೇನೆ. ಇವನು ಬಂದೆಡೆ ಅನಿಷ್ಟ ತಪ್ಪಿದ್ದಲ್ಲ' ಎಂದು ಅದೃಶ್ಯನಾಗುತ್ತಾನೆ. ಈ ರೀತಿ ಅದೃಶ್ಯನಾಗಿರುವ ವಿಶ್ವಾಮಿತ್ರನನನ್ನು ಗಮನಿಸಿ' ವಿಶ್ವಾಮಿತ್ರನೂ ಇಲ್ಲಿ ಬಂದಿರುವನಲ್ಲಾ! ಇವನು ನನ್ನ ಹಂಚಿಕೆಯನ್ನು ಖಂಡಿತ ಹಾಳು ಮಾಡಿಬಿಡುತ್ತಾನೆ. ಆದರೆ ಈತ ನನ್ನ ಮುಂದೆ ಎಷ್ಟರವನು? ಈತ ಬೇರೆಯವರಿಗೆ ಅದೃಶ್ಯನಾಗಿದ್ದರೆ ನನಗೆ ಕಾಣುವನು. ಆದರೆ ನಾನಿವನಿಗೆ ಅದೃಶ್ಯನಾಗಿದ್ದೇನೆ ಎಂದು ಕೊಳ್ಳುತ್ತಾನೆ. ವಿಶೇಷವೆಂದರೆ ಈಗಾಗಲೇ ಅದೃಶ್ಯರಾಗಿರುವ ಚಿತ್ರಕೇತು ಮತ್ತು ಚಿತ್ರಪದರು ಇವರಿಬ್ಬರ ಕಣ್ಣಿಗೆ ಬೀಳದೆ ಇರುವುದು. ಅದೇ ರೀತಿ ಇವರೂ ಸಹ ಅವರ ಕಣ್ಣಿಗೆ ಬೀಳದಿರುವುದು ಸ್ವಲ್ಪ ಆಶ್ಚರ್ಯವೆನಿಸುತ್ತದೆ.

ರಾಮಾದಿಗಳು ವಸಿಷ್ಠರನ್ನು ಕುರಿತು ಪೂಜ್ಯರೇ, ಇಂದು ನಾವು ಊರಿನ ಹೊರಗೆಹೋಗಿ ಧನುರ್ವೇದವನ್ನು ಪ್ರಯೋಗಿಸಿ ಅಭ್ಯಾಸ ಮಾಡುತ್ತೇವೆ. ಅಪ್ಪಣೆಯಾಗಬೇಕೆಂದಾಗ 'ಇಂದು ನನಗೂ ಕೆಲಸವಿದೆ ನಿಮ್ಮಿಷ್ಟದಂತೆಯೇ ನೀವು ಹೋಗಿ' ಎಂದು ಕಳುಹಿಸುತ್ತಾನೆ.

ಶತ್ರುಘ್ನ, ಭರತ, ಲಕ್ಷ್ಮಣರೆಲ್ಲ ಕ್ರಮವಾಗಿ ಬಾಣ ಕೌಶಲ್ಯವನ್ನು ತೋರುತ್ತಾರೆ. ರಾಮ ಮೆಚ್ಚಿ ಗುಣಗಾನ ಮಾಡುತ್ತಾನೆ. ಅವರೂ ಅಣ್ಣ ನಿನ್ನ ಬಾಣ ಕೌಶಲ್ಯವನ್ನು ನೋಡುವ ಇಚ್ಛೆಯಿದೆ ಎಂದು ಬಲವಂತ ಮಾಡುತ್ತಾರೆ. ರಾಮ ಬಾಣ ಪ್ರಯೋಗಿಸಿದರೆ ಅದೃಶ್ಯನಾಗಿರುವ ರಾವಣ ಮುರಿದು ನಾಶ

ಮಾಡುತ್ತಾನೆ. ತಂದೆಯಿಂದ ಪಡೆದ ವಾಯವ್ಯಾಸ್ತ್ರವೂ ಹುಸಿಯಾದಾಗ ಕ್ರೋಧಗೊಂಡ ರಾಮನು ಆಗ್ನೇಯಾಸ್ತ್ರವನ್ನು ತೆಗೆದು 'ಈ ಬಾಣ ಗುರಿತಪ್ಪಿದರೆ ಅವಮಾನವನ್ನು ಸಹಿಸಲಾರೆ' ಎಂದು ಧ್ಯಾನ ಮಗ್ನನಾದಾಗ ರಾಮನ ಮುಂದೆ ಧೈರ್ಯಧಾರಣೆ ಮಾಡಲಾರದೆ ರಾವಣ ಪಲಾಯನವಾಗುತ್ತಾನೆ. ಇದನ್ನು ಗಮನಿಸುತ್ತಿದ್ದ ವಿಶ್ವಾಮಿತ್ರ, ಅವನು ಇನ್ನಾರಿಗಾದರೂ ಅಪಾಯ ಉಂಟುಮಾಡಿಯಾನೆಂದು ಅವನನ್ನೇ ಹಿಂಬಾಲಿಸುತ್ತಾನೆ.

ಇತ್ತ ರಾಮನು ಬಾಣ ಪ್ರಯೋಗ ಮಾಡಬೇಕೆನ್ನುವಾಗಲೆಲ್ಲಾ ಒಂದೊಂದು ಕಾರಣ ಅಡ್ಡವಾಗುತ್ತದೆ. ಆಗ್ನೇಯಾಸ್ತ್ರ ಪ್ರಯೋಗಿಸಿದರೆ; ಆ ಮರ ಬೆಂಕಿಯಲ್ಲಿ ಉರಿದು; ಅದರಲ್ಲಿರುವ ನಿರಪರಾಧಿ ಪಕ್ಷಿಗಳು ತಮ್ಮ ಮರಿಗಳೊಂದಿಗೆ ಸಾಯುತ್ತವೆ, ಎಂದು ಭರತ ತಡೆಯುತ್ತಾನೆ. ಮತ್ತೊಮ್ಮೆ ವಾಯವ್ಯಾಸ್ತ್ರ ಪ್ರಯೋಗಿಸಲು ಗುರಿ ಹಿಡಿದಾಗ ಲಕ್ಷ್ಮಣನು 'ಆಗಲೇ ಅದು ತನ್ನ ಗುರಿ ಮುಟ್ಟದೇ ಹುಸಿಯಾಯಿತಲ್ಲಾ' ಎಂದಾಗ 'ನಿಜ, ಈ ಬಾಣದಲ್ಲೇನೋ ತಪ್ಪಿದೆ' ಎಂದು ಅದನ್ನೇ ನೋಡುತ್ತ ತಡಮಾಡಿದಾಗ ಭರತನು ಅಣ್ಣಾ ಆ ತಪ್ಪಿರುವ ಬಾಣವು ನಿನ್ನನ್ನು ಸ್ತ್ರೀಹತ್ಯಾ ಪಾತಕದಿಂದ ಉಳಿಸಿತು! ನೋಡಲ್ಲಿ ಐದಾರು ಜನ ಹೆಂಗಸರಿದ್ದಾರೆ, ಅಲ್ಲದೆ ಅವರಿತ್ತಲೇ ಹೆದರಿ ಓಡಿ ಬರುವಂತಿದೆ. ಅಲ್ಲೇನಾದರೂ ಅಪಾಯವಿರಬೇಕೆಂದಾಗ ಶತ್ರುಘ್ನನು ಅಲ್ಲೇ ಅಲ್ಲವೇ, ಬಾಣ ಮುರಿದು ಬಿದ್ದದ್ದು ಎನ್ನುತ್ತಾನೆ. 'ಹಾಗಾದರೆ ಅಲ್ಲಿ ಯಾರೋ ಅದೃಶ್ಯವಾಗಿದ್ದುಕೊಂಡು ನಮಗೆ ಪ್ರತೀಕಾರ ಮಾಡುತ್ತಿರಬೇಕು ಅದನ್ನು ಭೇದಿಸಲು ನನ್ನ ಭಾವಗಾಮಿನಿಯಾದ ಅಸ್ತ್ರವನ್ನು ಪ್ರಯೋಗಿಸುತ್ತೇನೆಂದು ಗುರಿ ಹಿಡಿಯುವಷ್ಟರಲ್ಲಿ ವಸಿಷ್ಠರು ಎದುರಾಗುತ್ತಾರೆ. ಅವರಿಂದ ವಿಶ್ವಾಮಿತ್ರ ಇಲ್ಲಿ ಬಂದಿದ್ದರೆಂದೂ, ಈಗ ರಾವಣನನ್ನು ಬೆನ್ನಟ್ಟಿ ಹೋಗಿದ್ದಾರೆಂದೂ ನಾಳೆ ದಶರಥ ಮಹಾರಾಜನ ಬಳಿಬಂದು ಏನನ್ನೋ ಯಾಚಿಸಬೇಕೆಂದಿರುವಂತೆ' ಎಂದು ತಿಳಿಯುತ್ತದೆ. ಚಿತ್ರಕೇತು ಮತ್ತು ಚಿತ್ರಪದ ಗಂಧರ್ವರು ರಾಮನ ಬಾಣಕೌಶಲ್ಯಕ್ಕೆ ರಾವಣನೇ ಹೆದರಿ ಓಡಿಹೋದ. ಇನ್ನು ಅಸಹಾಯಶೂರನಾದ ರಾಮನನ್ನು ರಕ್ಷಿಸಲು ನಾವಾರೆಂದು ಚಿತ್ರಪದ, ಗಂಧರ್ವರು ಹೊರಟು ಹೋಗುತ್ತಾರೆ. ನಾಲ್ಕನೇ ದೃಶ್ಯದಲ್ಲಿ; ಮೂಲದಲ್ಲಿರುವ ಪ್ರಸಂಗವನ್ನು ತನ್ನ ನಾಟಕಕ್ಕೆ ಅನುಕೂಲವಾಗುವಂತೆ ಕಲ್ಪಿಸಿಕೊಂಡು ಒಂದು ಹೊಸ ವೇದಿಕೆಯನ್ನೇ ಸೃಷ್ಟಿಸಿದ್ದಾನೆ.

ಐದನೇ ದೃಶ್ಯದಲ್ಲಿ; ವಿಶ್ವಾಮಿತ್ರ ದಶರಥನ ಬಳಿಗೆ ಬರುತ್ತಾನೆ. ಉಭಯ ಕುಶಲೋಪರಿಯಾದ ಮೇಲೆ ದಶರಥನ ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ವಿಚಾರಿಸುತ್ತಾನೆ. ಮಂತ್ರದರ್ಶನವೊಂದನ್ನು ಬಿಟ್ಟು ಮತ್ತೆಲ್ಲ ಶಾಸ್ತ್ರಗಳಲ್ಲೂ ಗುರು ವಸಿಷ್ಠರ ಮುಖೇನ ಪಾರಂಗತರಾಗಿರುವರೆಂದೂ ದಶರಥನಿಂದಲೇ ಶಸ್ತ್ರವಿದ್ಯೆ ಕಲಿತಿದ್ದಾರೆಂದೂ ತಿಳಿದ ಮೇಲೆ ವಿಶ್ವಾಮಿತ್ರ ಆಶ್ಚರ್ಯ ವ್ಯಕ್ತಪಡಿಸುತ್ತಾನೆ. ಆದರೆ ಅವರಿಗೆ ಜೃಂಬಕಾಸ್ತ್ರ ಮತ್ತು ಬ್ರಹ್ಮಾಸ್ತ್ರಗಳ ಅಭ್ಯಾಸವಾಗಿಲ್ಲವೆಂದು ತಿಳಿದುಬರುತ್ತದೆ. ದಶರಥನು ನೀವೆ ಇಲ್ಲಿದ್ದುಕೊಂಡು ಅವರಿಗೆ ಆ ಎಲ್ಲ ದಿವ್ಯಾಸ್ತ್ರಗಳನ್ನು ಅಭ್ಯಾಸ ಮಾಡಿಸಿ ಎಂದು ವಿನಂತಿಸಿಕೊಳ್ಳುತ್ತಾನೆ. ವಿಶ್ವಾಮಿತ್ರನು ಅದಕ್ಕೊಪದೆ ಬಾಯಾರಿದವನು ಬಾವಿಯ ಬಳಿಗೆ ಹೋಗಬೇಕೆ ವಿನಾ ಬಾವಿಯು ಬಾಯಾರಿದವನ ಬಳಿಗೆ ಎಂದೂ ಬಾರದು ಎಂದು ಹೇಳಿ ನಾನು ಕೇಳುವುದು ವ್ಯರ್ಥವಾಗುವುದಿಲ್ಲವೆಂಬ ಮಾತುಕೊಟ್ಟರೆ ನಿನ್ನಲ್ಲೊಂದು ದಾನವನ್ನು ಬೇಡಬೇಕೆಂದಿದ್ದೇನೆ ಎಂದು ಹೇಳಿ ರಾಮನನ್ನು ನನ್ನೊಡನೆ ಕಳುಹಿಸು ಎನ್ನುತ್ತಾನೆ. ದಶರಥನು ಮಾತು ಕೊಟ್ಟಿದ್ದಾನೆ–ಮಾತು ತಪ್ಪುವಂತಿಲ್ಲ. ರಾಮನನ್ನು ಬಿಟ್ಟಿರುವುದಾಗುವುದಿಲ್ಲ. ಉಭಯಸಂಕಟಕ್ಕೆ ಒಳಗಾಗುತ್ತಾನೆ. ಆಗ ವಸಿಷ್ಠರೇ ಅವರ ಜೊತೆ ರಾಮ ಹೋದರೆ ಅಪಾಯವೇನೂ ಆಗದು. ನೀನು ಕೊಟ್ಟ ಮಾತಿಗೆ ತಪ್ಪದೇ ರಾಮನನ್ನು ಕಳುಹಿಸಿಕೊಡು ಎನ್ನುತ್ತಾರೆ. ದಶರಥ ಒಪ್ಪಿದಾಗ ಲಕ್ಷ್ಮಣ 'ಅಪ್ಪಾಜಿ, ನಾನು ಅಣ್ಣನ ಹಿಂದೆ ಹೋಗುತ್ತೇನೆ' ಎಂದು ಹೊರಡುತ್ತಾನೆ. ವಿಶ್ವಾಮಿತ್ರನು 'ನನ್ನ ಪ್ರಾರ್ಥನೆ ಈಡೇರಿತು ಇನ್ನು ಇವರಿಗೆ ದಿವ್ಯಾಸ್ತ್ರಗಳನ್ನು ಕಲಿಸಿ ರಾವಣನ ಬೆಂಬಲಿಗರನ್ನು ಕೊಲ್ಲಿಸುತ್ತೇನೆ. ನಂತರ ರಾವಣವಧೆ ಸುಲಭವೆಂದು ಕರೆದುಕೊಂಡು ಹೋಗುತ್ತಾನೆ.

ಆರನೇ ದೃಶ್ಯದಲ್ಲಿ; ರಾಮ ಲಕ್ಷ್ಮಣರು ತಾಟಕೆ ಸುಬಾಹುವನ್ನು ಕೊಂದು, ಮಾರೀಚನನ್ನು ತರಗೆಲೆಯಂತೆ ತೂರಿ ವಿಶ್ವಾಮಿತ್ರನ ಯಜ್ಞವನ್ನು ಸಫಲಗೊಳಿಸುತ್ತಾರೆ. ವಿಶ್ವಾಮಿತ್ರನು 'ನಿಮ್ಮಿಂದ ತಪೋವನದಲ್ಲಿ ಶಾಂತಿ, ನನ್ನ ಮನಸ್ಸಿಗೆ ನೆಮ್ಮದಿ ತಂದಿದೆ. ಆದರೆ ಪ್ರಬಲರಾದ ರಾಕ್ಷಸರನ್ನು ಘಾತಿಸಿರುವುದರಿಂದ ರಾವಣನ ರಾಜ್ಯಲಕ್ಷ್ಮಿ ವಿರೂಪಗೊಂಡಂತಾಗಿದೆ. ರಾಮ ನಿನ್ನ ಅಪಾರವಾದ ಬಲವನ್ನು ಕಂಡು ನಾನೇ ಆಶ್ಚರ್ಯಚಕಿತನಾಗಿದ್ದೇನೆಂದಾಗ' ಅದೆಲ್ಲ ನಿಮ್ಮ ತಪೋಮಹಿಮೆಯಿಂದಲೇ ಆದದ್ದು ಎಂದು ರಾಮ ತನ್ನ ವಿನಯವನ್ನು ವ್ಯಕ್ತಪಡಿಸಿ, ಈ ರಾಕ್ಷಸರನ್ನು ಘಾತಿಸಿದ್ದರಿಂದ ರಾವಣನ ರಾಜ್ಯಲಕ್ಷ್ಮಿ ಹೇಗೆ ವಿರೂಪಳಾದಳೆಂದು ಕೇಳುತ್ತಾನೆ. ವಿವಿಧಾಸ್ತ್ರ, ಶಸ್ತ್ರಸಜ್ಜಿತರೂ, ಮಾಯಾವಿಗಳು, ಮಹಾಬಾಲರೂ ಆದ ಸುಬಾಹು ಮಾರೀಚರು ಸೂರ್ಯವಂಶದವರ ಆಡಳಿತಕ್ಕೆ ಒಳಪಟ್ಟ ಈ

ಭೂಭಾಗದಲ್ಲಿ ಸೇನಾ ಶಿಬಿರಗಳನ್ನು ಸ್ಥಾಪಿಸಿಕೊಂಡಿದ್ದರು. ಅವರನ್ನು ಯಾವನು ಕೊಲ್ಲುವನೋ ಅವನಿಂದ ತನಗೂ ತೊಂದರೆ ತಪ್ಪಿದ್ದಲ್ಲವೆಂದೂ ರಾವಣನು ಚೆನ್ನಾಗಿ ಬಲ್ಲ.' ಎಂದು ವಿಶ್ವಾಮಿತ್ರ ನುಡಿಯುತ್ತಾನೆ. ರಾಮನು, ರಾವಣನು ನನ್ನನ್ನಾಗಲಿ, ನಾನು ಅವನನ್ನಾಗಲಿ ಕಂಡಿಲ್ಲ, ಅವಮಾನಗೊಳಿಸಿಲ್ಲ ಅಂದ ಮೇಲೆ ನಮ್ಮಿಬ್ಬರಿಗೂ ಯುದ್ಧವು ಹೇಗೆ ಸಂಭವಿಸೀತು? ಎಂದು ಪ್ರಶ್ನಿಸುತ್ತಾನೆ. ಉತ್ತರಕೊಡುತ್ತಾ ವಿಶ್ವಾಮಿತ್ರರು 'ನೀನು ವರ್ಣಾಶ್ರಮ ಧರ್ಮರಕ್ಷಕನಾದ ಇಕ್ಷ್ವಾಕು ವಂಶದವನು, ರಾವಣನು ರಾಕ್ಷಸಾಧಿಪ, ನೀನು ವಿನೀತ, ಧರ್ಮವೇ ಪ್ರಧಾನ, ಅವನಿಗಾದರೋ ಬಲಪ್ರಧಾನ, ಋಷಿಗಳನ್ನು ಕಂಡರಾಗದು, ನಿಮ್ಮಲ್ಲಿನ ಈ ಪರಸ್ಪರ ವೈಷಮ್ಯವೇ ನಿಮ್ಮಿಬ್ಬರ ಹೋರಾಟಕ್ಕೆ ಕಾರಣವಾಗುತ್ತದೆ. ಆ ಹೋರಾಟದಲ್ಲಿ ಅವನ ದುರ್ಗುಣದಿಂದಲೇ, ಅವನಿಗೆ ಅಪಜಯವೂ, ನಿನ್ನ ಸದ್ಗುಣದಿಂದ ನಿನಗೆ ಜಯವೂ ಸಿದ್ಧಿಸುತ್ತದೆ ಎಂದಾಗ ರಾಮ 'ತಮ್ಮ ಆಶೀರ್ವಾದ, ನಿಮ್ಮಿಂದ ಪಡೆದ ಮಂತ್ರಾಸ್ತ್ರಗಳ ಸಹಾಯ, ಪ್ರಜೆಗಳ ಪ್ರೀತಿ, ಲಕ್ಷ್ಮಣನ ಬೆಂಬಲ ಇಷ್ಟೆಲ್ಲ ಇದ್ದೂ ನನಗೆ ಹೇಗೆ ಜಯದೊರಕದು?' ಎಂದು ಮತ್ತೊಮ್ಮೆ ತನ್ನ ವಿನಯತೋರುತ್ತಾನೆ.

ನಂತರ ವಿಶ್ವಾಮಿತ್ರನು ಅರಣ್ಯದ ಮಡಿಲಲ್ಲಿರುವ ಒಂದು ಹಳ್ಳಿಗೆ ರಾಮ ಲಕ್ಷ್ಮಣರನ್ನು ಕರೆದೊಯ್ಯುತ್ತಾನೆ. ಹಳ್ಳಿ ಜನರ ಅತಿಥ್ಯ ಧರ್ಮವನ್ನು ಮೀರಿ ನಡೆಯದೇ ಇರುವ ಅವರ ಸಂಸ್ಕೃತಿ, ಅವರ ಹೊಲ, ದನಕರುಗಳು ಒಟ್ಟಾರೆ ಅವರ ಶ್ರಮದ ಬದುಕನ್ನು ಪರಿಚಯಿಸುತ್ತಾನೆ. ಅಷ್ಟರಲ್ಲಿ ಅವರಿಗೆ ಎದುರಾದ ಅಜ್ಜಿಗೆ ರಾಮಲಕ್ಷ್ಮಣರನ್ನು ಪರಿಚಯಿಸುತ್ತಾನೆ. ಅವರಿಬ್ಬರನ್ನು ಹರಸಿದ ಅಜ್ಜಿ, ಯಾಕ್ರಾಪ್ಪ ನೀವಿಬ್ರೂ ಬಿಲ್ಲೂ ಬಾಣ ಧರಿಸಿದ್ದೀರಿ? ಎಂದು ಕೇಳುತ್ತಾಳೆ. ವಿಶ್ವಾಮಿತ್ರರು 'ಧರ್ಮವನ್ನು ರಕ್ಷಿಸಲು ಕ್ಷತ್ರಿಯರು ಸದಾ ಧನುರ್ಬಾಣಧಾರಿಗಳಾಗಿರುತ್ತಾರೆ. ನನ್ನ ಯಜ್ಞಕ್ಕೆ ಅಡ್ಡಿ ಮಾಡುತ್ತಿದ್ದ ರಕ್ಕಸರನ್ನಿವರು ಕೊಂದರು' ಎಂದು ಹೇಳಿದರೆ ಅಜ್ಜಿ 'ಈ ಹಳ್ಳಿಯ ಸುತ್ತಮುತ್ತ ಕಾಡಿನಲ್ಲಿರೋ ಹುಲ್ಲೆಗಳ ಕೊಲ್ಲಬೇಡ್ರಪ್ಪ, ಪಾಪ! ಎನ್ನುತ್ತಾಳೆ. ನಿಮ್ಮ ಬೆಳೆಯಪೈರನ್ನು ನಾಶಮಾಡುವುದಿಲ್ಲವೇ ಅವು ಎಂದರೆ 'ಆದ್ರೂ ಕೊಲ್ಲಬಾರ್ದು; ಬಿಡಿ, ನಾವೆಲ್ಲ ಅವನ್ನ ಕಲ್ಲುಬೀಸಿ ಬೆದರಿಸುತ್ತೇವೆ. ಅವು ಬೆದರಿ ಓಡೋದನ್ನ ನೋಡೋದಕ್ಕೆ ಎರಡು ಕಣ್ಣು ಸಾಲದು! ಅವು ನಮ್ಮ ನೆಂಟರಂಗವೇ ಎನ್ನುತ್ತಾಳೆ. ವಿಶ್ವಾಮಿತ್ರರು 'ಇದು ಹಳ್ಳಿಯ ಹೃದಯ' ಎನ್ನುತ್ತಾರೆ. ಅಜ್ಜಿಯನ್ನು ಬೀಳ್ಕೊಡುತ್ತಾರೆ. ಈ ಪ್ರಸಂಗದಿಂದ ವೀರಪ್ಪಮೊಯಿಲಿಯವರು ಪ್ರೇರಿತರಾದಂತೆ ಕಂಡು ಬರುತ್ತದೆ. ಅವರು ಹಳ್ಳಿಯ ರೈತರ ಶ್ರಮಬದುಕನ್ನು ತಮ್ಮ ಕಾವ್ಯದಲ್ಲಿ ತರುತ್ತಾರೆ.

ವಿದೇಹ ರಾಜನಾದ ಜನಕನೂ ಒಂದು ವರ್ಷದಿಂದ ಮಾಡುತ್ತಿರುವ ಯಜ್ಞದ ಮುಕ್ತಾಯ ಸಮಾರಂಭಕ್ಕೆ ವಿಶ್ವಾಮಿತ್ರರನ್ನು ಆಹ್ವಾನಿಸಿರುತ್ತಾನೆ. ವಿಶ್ವಾಮಿತ್ರನು ಜನಕನಿಗಿರುವ ಮುದ್ದು ಮಗಳು ಸೀತೆಯನ್ನು ನೆನೆದು ರಾಮನಿಗಾಗಿಯೇ ಆಕೆ ಸೃಷ್ಟಿಯಾದಂತೆ ಇದ್ದಾಳೆ. ರಾಮನು ಶಿವಧನಸ್ಸನ್ನು ಬಾಗಿಸಿದರೆ ಯಜ್ಞದ ಫಲ ಸಫಲವಾಗುತ್ತದೆ. ಹಾಗೆಯೇ ದಶರಥನ ಋಣವನ್ನೂ ತೀರಿಸಿದಂತಾಗುತ್ತದೆಂದು ರಾಮ ಲಕ್ಷ್ಮಣರನ್ನು ವಿದೇಹ ರಾಜನ ಅರಮನೆಗೆ ಕರೆದೊಯ್ಯುತ್ತಾರೆ.

ಏಳನೇ ದೃಶ್ಯದಲ್ಲಿ ಜನಕನ ಅರಮನೆ, ಅಲ್ಲಿ ರಾಮ, ಸೀತೆಯನ್ನು ನೋಡಿ ವ್ಯಾಮೋಹಕ್ಕೆ ತುತ್ತಾಗಿದ್ದಾನೆ. ಸೀತೆಯ ಸ್ಥಿತಿಯು ಇದಕ್ಕಿಂತಲೂ ಭಿನ್ನವಾಗಿಲ್ಲ. ವಿಶ್ವಾಮಿತ್ರರು ಅದಕ್ಕೆ ತಕ್ಕಂತೆ ಉದ್ಯಾನವನದಲ್ಲಿ ರಾಮನನ್ನು ಬಿಟ್ಟು ಲಕ್ಷ್ಮಣನನ್ನು ಉಪದೇಶ ಮಾಡುತ್ತೇನೆಂದು ಅವನಿಂದ ಬಹಳ ದೂರ ಕರೆದುಕೊಂಡು ಹೋಗುತ್ತಾರೆ. ಸೀತೆ ತನ್ನ ಸಖಿಯರೊಡನೆ ಉದ್ಯಾನವನಕ್ಕೆ ಬರುವುದು ಅವರಿಬ್ಬರ ಪ್ರೇಮಕ್ಕೆ ಸಾಫಲ್ಯ ದೊರಕುವಂತೆ ಘಟನೆಗಳು ಘಟಿಸುವುದು ಸಹಜವೆನ್ನುವಂತೆ ನಾಟಕದ ದೃಶ್ಯ ಬೆಳೆಯುತ್ತಾ ಹೋಗುತ್ತದೆ. **ಕುವೆಂಪುರವರು ರಾಮಾಯಣದರ್ಶನಂ ಕಾವ್ಯದಲ್ಲಿ ಇದೇ ಘಟನೆಯನ್ನು ಸ್ವಲ್ಪ ಮಾರ್ಪಡಿಸಿಕೊಂಡಿದ್ದಾರೆ.**

ಎಂಟನೇ ದೃಶ್ಯದಲ್ಲಿ ಸೀತಾಸ್ವಯಂವರವಾಗಿದೆ. ದಶರಥ ತನ್ನ ಇತರ ಪುತ್ರರು, ಪರಿವಾರದೊಡನೆ ಬಂದಿದ್ದಾನೆ. ಜನಕನು 'ತಾನು ಒಂದು ವರ್ಷದಿಂದ ವಿಧಿಪೂರ್ವಕವಾಗಿ ಮಾಡುತ್ತಿದ್ದ ಯಜ್ಞ ಇಂದು ಮುಗಿದಿದೆ. ಅದರ ಫಲವಾಗಿ ರಸೋದ್ಭವೆಯಾದ ಸೀತೆಯನ್ನು ರಾಮಚಂದ್ರನಿಗೆ ಕೊಟ್ಟೆ ಮತ್ತು ರಾಮನಂತೆ ಗುಣವಂತರಾದ ಭರತ, ಲಕ್ಷ್ಮಣ, ಶತ್ರುಘ್ನರೆಂಬ ರಾಮನ ತಮ್ಮಂದಿರಿಗೆ ಮಾಂಡವಿ, ಊರ್ಮಿಳೆ, ಶ್ರುತಕೀರ್ತಿ ಎಂಬುವವರನು ಕೊಟ್ಟೆ. ಈ ಎರಡು ರಾಜವಂಶದ ಸಂಬಂಧವೂ ನಿಮ್ಮೆಲ್ಲರಿಗೂ ಒಪ್ಪಿಗೆಯಾದರೆ ಮೂರು ಸಲ 'ಸ್ವಸ್ತಿ' ಎನ್ನಿ ಎಂದು ವಿನಂತಿಸುತ್ತಾನೆ. ಮದುವೆ ಕಾರ್ಯ ಮುಗಿಸಿಕೊಂಡು ಹಿಂದಿರುಗಿ ಬರಬೇಕಾದರೆ ಯಥಾಪ್ರಕಾರ ಭಾರ್ಗವನ ಪ್ರಸಂಗವನ್ನು ಬದಲಾವಣೆ ಮಾಡದೆ ಕವಿ ಹಾಗೆಯೇ ಉಳಿಸಿಕೊಂಡಿದ್ದಾನೆ.

ಪ್ರತಿಮಾ ನಾಟಕವು ಆರಂಭವಾಗುವಾಗ ಶ್ರೀರಾಮಪಟ್ಟಾಭಿಷೇಕಕ್ಕೆ ಏರ್ಪಾಟು ನಡೆಯುತ್ತಿರುತ್ತದೆ. ಅರಮನೆಯ ಸಂಗೀತಶಾಲೆಯಲ್ಲಿ ಈ ಮಹೋತ್ಸವದ ಅಂಗವಾಗಿ ತಕ್ಕ

ನಾಟಕಾಭಿನಯವು ಸಿದ್ಧವಾಗುತ್ತಿದೆ. ನಟ ಪರಿವಾರದಲ್ಲಿದ್ದ ಅವದಾತಿಕೆಯೆಂಬವಳೊಬ್ಬಳು; ರಂಗಮಂಟಪದ ರೇವಮ್ಮ ಪೂಜೆ ಮುಗಿದ ಮೇಲೆ, ಉಳಿದ ಅಶೋಕದ ಚಿಗುರನ್ನು ಕೊಡಲಿಲ್ಲವೆಂದು ಅವಳಿಗೆ ಕಿರುಕುಳಕೊಡಲು ಒಂದು ನಾರುಮುಡಿಯನ್ನು ತರುತ್ತ ಸೀತೆಯ ಕಣ್ಣಿಗೆ ಬೀಳುವಳು. ಸೀತೆಯು ಅವಳನ್ನು ಗದರಿಸಿ; ನಾರುಮುಡಿಯನ್ನು ಹಿಂತಿರುಗಿ ಕೊಡುವಂತೆ ಕಳುಹಿಸುತ್ತ, ಕುತೂಹಲದಿಂದ ಆ ನಾರುಮುಡಿಯನ್ನು ಧರಿಸಿಕೊಂಡು ನೋಡುವಳು. ಅದರ ಸೌಂದರ್ಯವನ್ನು ಬಣ್ಣಿಸುತ್ತಿರುವಾಗ ರಾಮ ಪಟ್ಟಾಭಿಷೇಕದ ಸುದ್ದಿ ಬರುವುದು, ಆದರೆ ಸೀತೆ ಆ ವಿಷಯದಲ್ಲಿ ಉದಾಸೀನೆ; ರಾಮನಿಗೆ ಪಟ್ಟಾಭಿಷೇಕವಾಗಬೇಕಾದರೆ ದಶರಥನ ಯೋಗಕ್ಷೇಮವೇನೋ ಎಂತೋ ಎಂಬ ಕಳವಳ. ಸುದ್ದಿ ತಂದ ಚೇಟಿಯನ್ನು ಮಾವನವರು ಆರೋಗ್ಯತಾನೆ? ಎಂದು ಪ್ರಶ್ನಿಸುತ್ತಾಳೆ. ಅವರೇ ನಿಂತು ಎಲ್ಲವನ್ನೂ ಮಾಡುವರು ಎಂದಾಗ ಹಾಗಾದರೆ ಇದು ನನಗೆ ಎರಡನೇ ಶುಭವಾರ್ತೆ; ಎಂದು ಹೇಳಿ ಸುದ್ದಿ ತಂದವಳಿಗೆ ಆಭರಣವನ್ನು ಬಹುಮಾನವಾಗಿ ಕೊಡುತ್ತಾಳೆ. ಇದ್ದಕ್ಕಿದ್ದಂತೆ ಮಂಗಳವಾದ್ಯದ ಶಬ್ದ ನಿಂತು ಹೋದಾಗ 'ಅಭಿಷೇಕಕಕ್ಕಡ್ಡಿಯೇನು ಬಂತು ಕಾಣೆನಲ್ಲ! ಘಳಿಗೆಗೊಂದು ವೃತ್ತಾಂತ, ಅರಮನೆಯ ಹಣೆಯ ಬರಹವೇ ಇಷ್ಟು' ಎಂದವಳಿಗೆ ಚೇಟಿಯು ರಾಜಕುಮಾರಿ, ಮಹಾರಾಜರು ರಾಜಕುಮಾರನಿಗೆ ಪಟ್ಟಾಭಿಷೇಕ ಮಾಡಿಯಾದ ಮೇಲೆ ಕಾಡಿಗೆ ಹೋಗುವರಂತೆ ಎಂದಾಗ 'ಹಾಗಾದರೆ ಇದು ಪಟ್ಟಾಭಿಷೇಕವಲ್ಲ; ಕಣ್ಣೀರಿನಭಿಷೇಕ' ಎನ್ನುತ್ತಾಳೆ.

ಅಷ್ಟರಲ್ಲಿ ರಾಮ, 'ಅಬ್ಬಾ ನನಗೆ ಪಟ್ಟಾಭಿಷೇಕ ಮಾಡುವುದನ್ನು ನಿಲ್ಲಿಸಿ, ವಿಶ್ರಮಿಸಿಕೋ ಎಂದು ಸ್ವಯಂ ಮಹಾರಾಜನೇ ನನ್ನನ್ನು ಕಳುಹಿಸಿಕೊಟ್ಟರಲ್ಲ! ಈಗ ನನ್ನ ಮನಸ್ಸಿಗೆ ಹಗುರವಾಗಿದೆ. ಈಗ ಮೈಥಿಲಿಯನ್ನಾದರೂ ನೋಡೋಣ, ಎಂದು ಅಲ್ಲಿಗೆ ಬರುತ್ತಾನೆ. ತನ್ನ ಪಟ್ಟಾಭಿಷೇಕ ನಿಂತುಹೋದ ವರ್ತಮಾನವನ್ನು ವಿವರಿಸಿ, ಏನೂ ನಷ್ಟವೇ ಆಗದಿದ್ದವನಂತೆ ಸಮಾಧಾನಚಿತ್ತದಿಂದ, ತನ್ನ ಹೆಂಡತಿ ಒಡವೆಯನ್ನೇಕೆ ಇಟ್ಟುಕೊಂಡಿಲ್ಲ ಅಥವಾ ಇಟ್ಟುಕೊಂಡೇ ಇರಲಿಲ್ಲವೋ ಎಂದು ಸೂಕ್ಷ್ಮ ಪರಿಶೀಲನೆಗೆ ತೊಡಗುವನು. ಸೀತೆಗೂ ಪಟ್ಟಾಭಿಷೇಕ ತಪ್ಪಿದಕ್ಕೆ ಇನ್ನೂ ಸಂತೋಷವೆ. ಏಕೆಂದರೆ "ಮಹಾರಾಜನು ಮಹಾರಾಜನೆ; ಆರ್ಯಪುತ್ರನು ಆರ್ಯಪುತ್ರನೆ" ಅವಳಿಗೆ ಗಂಡ ಮಹಾರಾಜನಾಗಿ ಬಿಡಬೇಕೆಂಬ ಆತುರವಿಲ್ಲ. ಆ ವಿಷಯವನ್ನು ಅಲ್ಲಿಗೆ ಮರೆತು; ರಾಮನು ಕನ್ನಡಿ ಹಿಡಿದು, ಸೀತೆಗೆ ಅಲಂಕಾರ ಮಾಡಿಕೊಳ್ಳಲು ಸಹಾಯ ಮಾಡುವನು. ಆಗ ಅವಳು ಧರಿಸಿದ್ದ ನಾರುಮುಡಿ ಅವನ ಕಣ್ಣಿಗೆ ಬಿದ್ದು, ಅವನಿಗೂ ಅದರ ಮೇಲೆ ಆಸೆಯಾಗುವುದು. ಸೀತೆಗೆ ಇಷ್ಟವಾದದ್ದು ರಾಮನಿಗೂ ಇಷ್ಟ.

ಸೀತೆಗೆ ತಕ್ಕ ರಾಮ. ಆದರೆ ಅದು ಇಕ್ಷ್ವಾಕು ಕುಲದ ಅರಸರ ವೃದ್ಧಾಲಂಕಾರ; ಆದ್ದರಿಂದ ರಾಜ್ಯಾಭಿಷೇಕವನ್ನುಳಿದ ರಾಮನಿಗೆ ಇದು ಅಮಂಗಳವೆಂಬಂತೆ ಸೀತೆಗೆ ಭಾಸವಾಗುವುದು.

ಇಷ್ಟುಹೊತ್ತಿಗೆ ಅಂತಃಪುರದಲ್ಲಿ ಸರ್ವನಾಶವಾದಂತೆ ಗಂಡಸರು ಹೆಂಗಸರೆಲ್ಲರೂ ಹಾಹಾಕಾರ ಮಾಡುವರು. ಕಾರಣ ದಶರಥ, ಕೈಕೆಯ ವರವನ್ನು ಕೇಳಿಯೇ ಮೂರ್ಛೆ ಹೋಗಿದ್ದಾನೆ. ಆ ಧ್ವನಿಯನ್ನು ಕೇಳಿ ಏನೋ ಅನಾಹುತವಾಗಿದೆಯೆಂದು ರಾಮನು ಊಹಿಸುವನು. ಅಷ್ಟರಲ್ಲಿ ಕಂಚುಕಿಯು 'ರಾಜಕುಮಾರ ಮಹಾರಾಜರನ್ನು ರಕ್ಷಿಸು' ಎಂದು ಓಡೋಡಿ ಬರುವನು. ಯಾರಿಂದ ವಿಪತ್ತು ಒದಗಿದೆ ಎಂದರೆ ಸ್ವಜನರಿಂದಲೇ ಎನ್ನುವನು. ಯಾರು ಸ್ವಜನರು? ಎಂದರೆ ಕೈಕೆಯೇ ಅದಕ್ಕೆ ಮೂಲ ಎನ್ನುವನು. 'ಹಾಗಿದ್ದರೆ ಇದು ಕೆಡುಕಲ್ಲ, ಪುರೋಭಿವೃದ್ಧಿಯನ್ನುಂಟುಮಾಡುವ ಗುಣವೇ ಆಗಿರಬೇಕು. ಏಕೆಂದರೆ, ತಾಯಿ ಎಂದಿಗೂ ಅಮಂಗಳವನ್ನುಂಟುಮಾಡಲಾರಳು'-ಎಂದು ರಾಮ ನಿರ್ಧರಿಸುವನು. ಕೈಕೆಯ ವರ ಸ್ವರೂಪವನ್ನು ತಿಳಿದ ಮೇಲೂ "ತಾಯಿಯಾದವಳು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೆ ರಾಜ್ಯ ಬರಬೇಕೆಂದು ಆಶಿಸಿದರೆ ಅದು ಸ್ವಾಭಾವಿಕ; ಆ ರಾಜ್ಯ ನನಗೆ ಬರಲಿಲ್ಲವೆಂದು ಆಕ್ಷೇಪಿಸುವುದು ನಮ್ಮ ಲೋಭ. ಪಟ್ಟಾಭಿಷೇಕ ನಿಂತದ್ದೇ ಒಳ್ಳೆಯದಾಯಿತು! ದಶರಥ ಮಹಾರಾಜನು ಕಾಡಿಗೆ ಹೋಗುವುದು ತಪ್ಪಿತು. ನಾನು ಇನ್ನೂ ನಾಲ್ಕುದಿನ ತಂದೆಯ ಕಣ್ಣುಮುಂದಿನ ಮಗನಾಗಿ ರಾಜ್ಯದ ಭಾರವಿಲ್ಲದೆ ನಿಶ್ಚಿಂತೆಯಿಂದಿರಬಹುದು ಎಂದು ತರ್ಕಿಸುವನು. ಅಲ್ಲದೆ ಈ ವಿಷಯದಿಂದ ಕೋಪದಲ್ಲಿ ಕುದಿದ ಲಕ್ಷ್ಮಣನನ್ನು ಶಾಂತಗೊಳಿಸುವನು. ಲಕ್ಷ್ಮಣನ ಕೋಪಕ್ಕೆ ಕಾರಣ ರಾಜ್ಯಲೋಭವಲ್ಲ, ಅಣ್ಣನ ಮೇಲಿನ ಮಮತೆ, ಅನುರಾಗ, ಅವನು ಹದಿನಾಲ್ಕು ವರ್ಷ ವನವಾಸ ಮಾಡಿ ಶ್ರಮಪಡಬೇಕಲ್ಲಾ ಆ ಕಷ್ಟವನ್ನು ಅವನು ಹೇಗೆ ಸಹಿಸಿಯಾನು? ಎಂಬ ಚಿಂತೆ. ಅಷ್ಟರಲ್ಲಿ ಸೀತೆಯು ಮೈಲಿಗೆಯಾದ ನಾರುಮಡಿಯನ್ನುಟ್ಟ ವರ್ತಮಾನವು ರಂಗಮಂಟಪದ ರೇವಮ್ಮನಿಗೆ ತಿಳಿದು "ಅವದಾತಿಕೆಯು ಸಂಗೀತ ಶಾಲೆಯಿಂದ ಯಾರಿಗೂ ಕಾಣದಂತೆ, ಬಿಟ್ಟ ನಾರುಮಡಿಗಳನ್ನು ತಂದಿದ್ದಾಳೆ. ಅವು ಮೈಲಿಗೆಯಾಗಿವೆ. ಈ ನಾರುಮಡಿಗಳು ಯಾರೂ ಉಟ್ಟುಬಿಟ್ಟವಲ್ಲ, ಸ್ವೀಕರಿಸಿ ಬೇಕಾದರೆ ಉಪಯೋಗಿಸಿಕೊಳ್ಳಿ" ಎಂದು ಅರಿಕೆ ಮಾಡಿಕೊಂಡು ಚೇಟಿಯ ಮುಖಾಂತರ ಮತ್ತೆರಡು ನಾರುಮಡಿಗಳನ್ನು ಕಳುಹಿಸುತ್ತಾಳೆ.

ಕೈಕೆಯ ಕೋರಿಕೆಯಂತೆ; ರಾಮನಿಗೆ ಪಟ್ಟಾಭಿಷೇಕ ತಪ್ಪಿ ವನವಾಸ ಪ್ರಾಪ್ತವಾಯಿತೆಂದು; ಸೂಚಿತವಾಗಿದ್ದರೂ ರಾಮಾದಿಗಳು ವನವಾಸಕ್ಕೆ ಹೊರಡಲು ಕೈಕೆಯಾಗಲಿ, ಮಂಥರೆಯಾಗಲಿ ನಾರುಮಡಿಯನ್ನು ಕೊಡುವುದಿಲ್ಲ. ಸೀತಾ ರಾಮಾದಿಗಳಿಗೆ ಬೇರೆ ವಿಧವಾಗಿ ನಾರುಮಡಿಗಳನ್ನು ತಂದೊದಗಿಸಿ ಅವರು ಅವುಗಳನ್ನು ಸಮಾಧಾನದಿಂದಲೂ ಸಂತೋಷದಿಂದಲೂ ತಾವೇ ಧರಿಸುವಂತೆ ಕಲ್ಪಿಸಿರುವ ಸನ್ನಿವೇಶವೇ ಇಲ್ಲಿನ ಸಂವಿಧಾನದಲ್ಲಿ ಚಮತ್ಕಾರದ ಅಂಶವಾಗಿದೆ. ಆ ರೀತಿ ನಾರುಮಡಿ ಧರಿಸಿದವರಿಗೆ, ದಶರಥ ಮಹಾರಾಜ ತಮ್ಮನ್ನು ಹುಡುಕಿಕೊಂಡು ಬರುತ್ತಿದ್ದಾರೆ ಎಂದು ಹೇಳಿದರೂ ನಿಲ್ಲದೆ ವನವಾಸಕ್ಕೆ ಹೊರಟುಹೋಗುತ್ತಾರೆ. ತಡೆಯಬಹುದು ಅಥವಾ ದುಃಖ ಇಮ್ಮಡಿಯಾಗಬಹುದು ಎಂಬ ಕಾರಣವಿರಬೇಕು.

ಹತ್ತನೇ ದೃಶ್ಯ ಸಂಪೂರ್ಣ ಶೋಕಮಯವಾಗಿದ್ದರೂ ದಶರಥ ಒಂದೇ ಸಮನೆ ರಾಮಾದಿಗಳನ್ನು ಜಪಿಸುವುದರಿಂದ ಅದು ರಾಮಮಯವೂ ಆಗಿದೆ. ವನವಾಸಕ್ಕೆಂದು ತೆರಳಿದ ಮುದ್ದುಮಕ್ಕಳನ್ನು ಕೊನೆಯ ಸಾರಿ ನೋಡಬೇಕೆಂದರೂ ಮುಖ ಸಿಕ್ಕದೆ ಮುದುಕನು ಶೋಕಪರವಶನಾಗುವನು. ದಶರಥನ ಮನಸ್ಸಿನ ತುಂಬ ಸೀತಾರಾಮ ಲಕ್ಷ್ಮಣರೆ. "ಅಯ್ಯೋ; ರಾಮನು ಮತ್ತಾರ ಹೊಟ್ಟೆಯಲ್ಲಾದರೂ ಹುಟ್ಟಿ ಸುಖವಾಗಿರದೆ ನನ್ನ ಹೊಟ್ಟೆಯಲ್ಲೇಕೆ ಹುಟ್ಟಿ ಕಷ್ಟಕ್ಕೆ ಗುರಿಯಾದ" ಎಂದು ಕೊರಗುವನು. "ಈ ಕೈಕೆ ಹೆಣ್ಣು ಹುಲಿಯಾಗಿ ಹುಟ್ಟಿ ಕಾಡಿನಲ್ಲಿರಬೇಕಾಗಿತ್ತು!" ಎಂದು ಅವಳ ಕ್ರೌರ್ಯವನ್ನು ನಿಂದಿಸುವನು. ಯಾರೋ ಬಂದರೆ ತನ್ನ ಮಕ್ಕಳೇ ಬಂದರೆಂದು ಏಳಲು ಹೋಗಿ ಮತ್ತೇ ಬೀಳುವನು. ರಾಮಾದಿಗಳ ಜೊತೆ ಹೋಗಿದ್ದ ಸುಮಂತ್ರ ಬಂದರೆ, ರಾಮ ಏನೆಂದ, ಸೀತೆ ಏನೆಂದಳು. ಲಕ್ಷ್ಮಣ ಏನೆಂದ ಎಂದು ಕೇಳುವನು. ಸುಮಂತ್ರ ಕ್ರಮ ತಪ್ಪಿದರೆ, ಮೊದಲಿನಿಂದ ಹೇಳಿಸುವನು. ಮೊದಲು ರಾಮ ಆಮೇಲೆ ಸೀತೆ ನಂತರ ಲಕ್ಷ್ಮಣ ಇದೇ ಕ್ರಮದಲ್ಲಿ ಮತ್ತೊಮ್ಮೆ ಅವರು ಏನೆಂದರು; ಅದರ ಬಗ್ಗೆ ಹೇಳು ಎಂದು ಮತ್ತೆ ಮತ್ತೆ ಕೇಳುವನು.

ಹನ್ನೊಂದನೆಯ ದೃಶ್ಯದಲ್ಲಿ ಕವಿಯು ಭರತನನ್ನು ಪ್ರವೇಶಗೊಳಿಸಿ ಅವನು ದಶರಥನ ಮರಣವೃತ್ತಾಂತವನ್ನು ಅರಿತಬಗೆ, ಅದು ಅವನ ಮೇಲೆ ಉಂಟು ಮಾಡಿದ ಪರಿಣಾಮ- ಇವುಗಳನ್ನು ವಿವರಿಸುತ್ತಾನೆ. ದಶರಥನ ಮರಣದ ನಂತರ ಸೋದರಮಾವನ ಮನೆಯಲ್ಲಿದ್ದ ಭರತನನ್ನು ಕರೆತರಲು ಸೂತನು ರಥದೊಂದಿಗೆ ಹೋಗಿ 'ಮಹಾರಾಜನಿಗೆ ದೇಹದಲ್ಲಿ ಅಸ್ವಸ್ಥತೆ'ಯೆಂದು ಹೇಳಿ ಕರೆತರುವನು.

ಇಲ್ಲಿ ಭರತನ ಸ್ವಪ್ನದ ಸುಳಿವಿಲ್ಲ. ಆ ರೀತಿ ಕರೆತಂದವನನ್ನು ನಕ್ಷತ್ರ ಸರಿಯಿಲ್ಲವೆಂದು ಊರ ಹೊರಗೇ ಇರುವಂತೆ ತಡೆಯುವುದು. ಭರತನು ಅಲ್ಲೇ ಇದ್ದಂತಹ ಪ್ರತಿಮಾಗೃಹವನ್ನು ಹೋಗುವುದು, ಅಲ್ಲಿ ತನ್ನ ತಂದೆಯ ಮರಣದ ಸುದ್ದಿ ತಿಳಿದು ಮೂರ್ಛೆ ಹೋಗುವುದು, ಎಚ್ಚರಗೊಂಡ ನಂತರ ತನ್ನ ತಾಯಂದಿರನ್ನು ಭೇಟಿಯಾಗುವ ಕ್ರಮ ಎಲ್ಲ ಸೂಚಿತವಾಗಿದೆ. **ಕುವೆಂಪುರವರು ಈ ಪ್ರತಿಮಾಗೃಹ ಪ್ರಸಂಗದಿಂದ ಪ್ರೇರಿತರಾಗಿರುವುದು ಕಂಡು ಬರುತ್ತದೆ**. ಭರತ, ಶತ್ರುಘ್ನರು ಪ್ರತಿಮಗೃಹ ಪ್ರವೇಶ ಮಾಡಿ ಅಲ್ಲಿ ತಂದೆ ಮರಣದ ಸುಳಿವನ್ನು ಪಡೆದರು ಎನ್ನುವಂತೆ ಚಿತ್ರಿಸಿದ್ದಾರೆ.

ಪ್ರತಿಮಾಗೃಹಕ್ಕೆ ಸುಮಂತ್ರನು ಮೂವರೂ ರಾಣಿಯರನ್ನು ಕರೆದು ತರುತ್ತಾನೆ. ಆದರೆ ಭರತ ಅಷ್ಟರಲ್ಲಾಗಲೇ ಮೂರ್ಛಿತನಾಗಿರುತ್ತಾನೆ. ಸುಮಂತ್ರ ಅವರನ್ನು ಹೊರಗೆ ತಡೆದು ಯಾರೋ ಒಬ್ಬ ಯುವಕ ಮಲಗಿದ್ದಾನೆ ಯಾರದು? ಎನ್ನುತ್ತಿರುವಂತೆಯೇ ದೇವಕುಲಿಕನು ಆತ ಭರತಕುಮಾರನೇ ಅಲ್ಲವೇ ಎಂದಾಗ ಎಲ್ಲರೂ ಒಳಗೆ ಪ್ರವೇಶಿಸುವರು. ಎಚ್ಚರಗೊಂಡ ಭರತನು ಸುಮಂತ್ರನನ್ನು ಕುರಿತು 'ತಾತ, ತಾಯಂದಿರಗೆ ನಮಸ್ಕರಿಸುವ ಕ್ರಮವನ್ನು ನನಗೆ ಹೇಳಿಕೊಡು' ಎನ್ನುವನು. ಕ್ರಮವಾಗಿ ಕೌಸಲ್ಯೆಗೆ, ಅಮ್ಮ ನಿರಪರಾಧಿಯಾದ ನಾನು ನಮಸ್ಕರಿಸುತ್ತೇನೆ. ನಂತರ ಸುಮಿತ್ರೆಯನ್ನು ಕುರಿತು–ಅಮ್ಮ, ಅಣ್ಣನ ಹಿಂದೆ ತಾನೊಬ್ಬನೇ ಹೋದ ಲಕ್ಷ್ಮಣನಿಂದ ವಂಚಿತನಾಗಿರುವ ನಾನು ನಮಸ್ಕರಿಸುತ್ತೇನೆ ಎನ್ನುತ್ತಾನೆ. ಕೊನೆಯದಾಗಿ ಸುಮಂತ್ರನು ಈಕೆ ನಿನ್ನ ತಾಯಿ ಎಂದಾಗ ಭರತನು ರೋಷಗೊಂಡು 'ಆಃ ಪಾಪಿ; ನೀನು ಈ ನನ್ನ ಇಬ್ಬರು ತಾಯಂದಿರ ಮಧ್ಯನಿಲ್ಲಲು ಯೋಗ್ಯಳಲ್ಲ! ಗಂಗಾ, ಯಮುನಾ ನದಿಗಳ ಮಧ್ಯೆ ಕೊಚ್ಚೆಯ ಕಾಲುವೆಯಂತಿದ್ದೀಯೆ ನೀನು, ಎಂದು ನಿಂದಿಸಲಾರಂಭಿಸುತ್ತಾನೆ. ಕೌಸಲ್ಯೆ ಸಮಾಧಾನ ಹೇಳಿದರೂ ಒಪ್ಪುವುದಿಲ್ಲ. ನಿನಗೆ ಪಟ್ಟಾಭಿಷೇಕ ಮಾಡಲು ವಸಿಷ್ಠಾದಿಗಳು ಕಾಯುತ್ತಿರುವರೆಂದರೂ ನಿಲ್ಲದೆ ಹೊರಡುವನು. ಎಲ್ಲಿಗೆ ಹೊರಟೆ? ಎಂದರೆ ಭರತನು–'ಲಕ್ಷ್ಮಣನೆಲ್ಲಿರುವನೋ ಅಲ್ಲಿಗೆ ಹೋಗಿ ಅಲ್ಲಿಯೇ ಇರುವೆನು. ರಾಘವನೆಲ್ಲಿರುವನೋ ಅದೇ ನನಗೆ ಅಯೋಧ್ಯೆ!' ಎನ್ನುವನು.

ಹನ್ನೆರಡನೇ ದೃಶ್ಯದಲ್ಲಿ ಭರತ ಸುಮಂತ್ರನೊಡನೆ ಅರಣ್ಯಕ್ಕೆ ಹೊರಡುವನು. ಅಲ್ಲಿಂದ ರಾಮನನ್ನು ಹಿಂತಿರುಗಿ ಕರೆತರುವುದೇ ಅವನ ಉದ್ದೇಶ. ಅಲ್ಲಿ ಸುಮಂತ್ರನಿಂದ ದಶರಥನ ಮರಣವೃತ್ತಾಂತವನ್ನು ಕೇಳಿದ ರಾಮನಿಗೆ ದುಃಖವು ಉಕ್ಕಿ ಬರುವುದು. ಸಮಾಧಾನ ಮಾಡಿಕೊಳ್ಳಲು

ಕುಡಿಯಲು ನೀರು ಬೇಕು ಎನ್ನುವನು. ಎಂದಿನಂತೆ ಲಕ್ಷ್ಮಣನು ಹೊರಡಲು, ಭರತನು ಅವನ ಕೈಯಿಂದ ಪಾತ್ರೆಯನ್ನು ಕಿತ್ತುಕೊಂಡು ತಾನು ತಂದುಕೊಡುವನು. ಇದನ್ನು ರಾಮನು ಗ್ರಹಿಸಿ 'ಹೀಗೆ ಬೆಳೆಯಗೊಟ್ಟರೆ ಅವನೂ ಕಾಡಿನಲ್ಲಿ ನಿಂತುಬಿಟ್ಟಾನೆಂದು ಯೋಚಿಸಿ, ನಗುತ್ತಾ ಸೀತೆಯನ್ನು ಕುರಿತು "ಜಾನಕಿ, ಲಕ್ಷ್ಮಣನ ಸೇವಾ ಕಾರ್ಯವು ಸಡಿಲವಾಗುತ್ತಾ ಬಂತು" ಎನ್ನುವನು. ಸೀತೆಯು ಅವನೂ ಲಕ್ಷ್ಮಣನಂತೆ ಸೇವೆ ಮಾಡಲಿ, ಎಂದಾಗ ರಾಮ ಬಿಡದೆ ಇಲ್ಲ; ಅವನು ತಾಯಿ ಕೈಕೆಯ ಮಾತಿನಂತೆ, ರಾಜ್ಯ ಸೇವೆಯಲ್ಲಿ ನಿಲ್ಲಲೇಬೇಕೆಂದು ಕಳುಹಿಸುವನು. ಉಳಿದದ್ದೆಲ್ಲಾ ಮೂಲದಲ್ಲಿದ್ದಂತೆ.

ಹದಿಮೂರನೇ ದೃಶ್ಯದಲ್ಲಿ; ಶ್ರೀರಾಮನು ಭರತನ ನಿಸ್ವಾರ್ಥ ನಡವಳಿಕೆಯನ್ನು ನೆನೆಯುತ್ತಾ ಆ ಚಿಕ್ಕಹುಡುಗನಿಗೆ ರಾಜ್ಯದ ಭಾರವನ್ನು ಹೊರೆಸಿ ಕಳುಹಿಸಿದೆನಲ್ಲಾ ಎಂದು ದುಃಖ ಪಡುತ್ತಾ ತಮ್ಮ ಕುಟೀರದ ಕಡೆ ಸೀತೆಯನ್ನು ಹುಡುಕಿಕೊಂಡು ಬರುತ್ತಾನೆ. ರಾಮನ ಶೋಕದ ಮುಖವನ್ನು ಗಮನಿಸಿ ನಿಮ್ಮ ಚಿಂತೆ ಏನು ಎನ್ನುವಳು. ಅದಕ್ಕೆ ರಾಮನು 'ನಾಳೆ ತಂದೆಯವರ ಶ್ರಾದ್ಧ. ಶ್ರಾದ್ಧ ಕಲ್ಪದ ವಿಧಿಗನುಸಾರವಾಗಿ ಪಿತೃಗಳಿಗೆ ಪಿಂಡ ಪ್ರದಾನಮಾಡಬೇಕಾಗಿದೆ ಅದನ್ನು ಹೇಗೆ ಮಾಡಬೇಕೆನ್ನುವುದೆ ಚಿಂತೆಯಾಗಿದೆ ಎನ್ನುತ್ತಾನೆ. 'ಭರತನು ಶ್ರಾದ್ಧವನ್ನು ವಿಜೃಂಭಣೆಯಿಂದ ಮಾಡಿಯೇ ಮಾಡುತ್ತಾನೆ. ಇಲ್ಲಿನ ಸ್ಥಿತಿಗತಿಗನುಸಾರವಾಗಿ ಫಲೋದಕದಿಂದಲೇ ನೀವು ಶ್ರಾದ್ಧ ಮಾಡಿ ಮುಗಿಸಿ ಅಷ್ಟರಿಂದಲೇ ಮಾವನವರು ಸಂತೃಪ್ತರಾಗುತ್ತಾರೆ' ಎನ್ನುವ ಸೀತೆಯ ಈ ಮಾತುಗಳು ಮಧ್ಯಮ ವರ್ಗದ ಗೃಹಿಣಿ ಹೇಳಿದಂತೆ ಭಾಸವಾಗುತ್ತದೆ.

ಅದೇ ಸಂದರ್ಭಕ್ಕೆ ರಾವಣನು ಸನ್ಯಾಸಿಯ ವೇಷಧರಿಸಿ ರಾಮನಾಶ್ರಮಕ್ಕೆ ಬರುತ್ತಾನೆ. ರಾಮ ಅವನನ್ನು ಸ್ವಾಗತಿಸುತ್ತಾನೆ. ಸೀತೆ ಅರ್ಘ್ಯಕೊಡಲು ಹೋದರೆ ಮಾತಿನ ಅತಿಥಿ ಸತ್ಕಾರವೇ ಸಾಕು ಎನ್ನುತ್ತಾನೆ. ತನ್ನ ಮಾಯೆಯೆಲ್ಲಿ ಬಯಲಾಗುವುದೊ ಎಂಬ ಭಯ, ನಂತರ ರಾಮನನ್ನು ಕುರಿತು 'ಅಯ್ಯ ನನ್ನದು ಕಾಶ್ಯಪಗೋತ್ರ. ವೇದವನ್ನು ಸಾಂಗೋಪಾಂಗವಾಗಿ ಅಧ್ಯಯನ ಮಾಡಿದ್ದೇನೆ. ಮನುವಿನ ಧರ್ಮಶಾಸ್ತ್ರ, ಮಹೇಶ್ವರನ ಯೋಗಶಾಸ್ತ್ರ, ಬೃಹಸ್ಪತಿಯ ಅರ್ಥಶಾಸ್ತ್ರ, ಮೇಧಾತಿಥಿಯ ನ್ಯಾಯಶಾಸ್ತ್ರ, ಪ್ರಚೇತಸನನ ಶ್ರಾದ್ಧಕಲ್ಪ–ಎಲ್ಲವನ್ನೂ ಬಲ್ಲೆ ನಾನು, ಎಂದು ಪರಿಚಯಿಸಿಕೊಳ್ಳುತ್ತಾನೆ. ಶ್ರಾದ್ಧಕಲ್ಪ ಎಂದೊಡನೆ ರಾಮನು 'ಶ್ರಾದ್ಧಕಲ್ಪದಲ್ಲಿ ಯಾವುದರಿಂದ ಪಿತೃಗಳು ತೃಪ್ತರಾಗುವರು? ಎಂದು ಪ್ರಶ್ನಿಸುತ್ತಾನೆ. ರಾವಣನು ಗೊತ್ತಿರುವ, ಗೊತ್ತಿಲ್ಲದಿರುವ ಯಾವ ಯಾವುದನ್ನೋ ಹೇಳಿ ಕೊನೆಗೆ

ಕಾಂಚನ ಪಾರ್ಶ್ವ ಎಂಬ ಒಂದು ವಿಧವಾದ ಜಿಂಕೆಯಿದೆ. ಅದು ಹಿಮಾಲಯದ ಏಳನೇ ಶಿಖರದಲ್ಲಿದೆ. ಅದನ್ನು ಬಲಿಯಾಗಿ ಅರ್ಪಿಸಿದರೆ ತೃಪ್ತರಾಗುವರು ಎಂದು ಹೇಳಿ ಸೀತೆಯನ್ನು ಅಪಹರಿಸಲು ಸಂಚು ಹೂಡುತ್ತಾನೆ. ರಾಮನು, 'ಹಿಮವಂತನು ಅದನ್ನು ಕಾಣಿಕೆಯಾಗಿ ಕೊಡದಿದ್ದರೆ ಹಿಮವತ್ಪರ್ವತವನ್ನೇ ಎರಡಾಗಿ ಸೀಳಿ ಬಿಡುತ್ತೇನೆ ಎಂದು ಶೌರ್ಯದಿಂದ ಹೇಳಿದಾಗ ರಾವಣ ಕೆಲಸ ಕೆಟ್ಟಿತೆಂದು ತಿಳಿದು ಅಲ್ಲೇ ಸ್ವಲ್ಪದೂರದಲ್ಲಿ ಮಾಯಾಜಿಂಕೆಯು ಸುಳಿದಾಡುವಂತೆ ಸೃಷ್ಟಿಸಿ 'ಅದೋ ನೋಡು ಕಾಂಚನಪಾರ್ಶ್ವ! ನೀನಿಲ್ಲಿರುವಂತೆಯೇ ಹಿಮವಂತನು ಗೌರವಿಸಿದ್ದಾನೆ' ಎನ್ನುತ್ತಾನೆ. ಅದನ್ನು ಹಿಡಿದು ತರಲು ಲಕ್ಷ್ಮಣನನ್ನು ಕೂಗಿದರೆ, ಆತ ತೀರ್ಥಯಾತ್ರೆಯಿಂದ ಹಿಂದಿರುಗಿ ಬರುವ ಕುಲಪತಿಗಳನ್ನು ಸ್ವಾಗತಿಸಲು ಹೋಗಿದ್ದಾನೆಂದು ತಿಳಿಯುತ್ತದೆ. ಸೀತೆಗೆ ನೀನೇ ಅತಿಥಿಗಳ ಸೇವೆಯಲ್ಲಿರು ನಾನೀಗ ಹಿಡಿದು ತರುತ್ತೇನೆಂದು ಹೋದಾಗ ರಾವಣ ತನ್ನ ನಿಜರೂಪವನ್ನು ತೋರಿ ಸೀತೆಯನ್ನು ಅಪಹರಿಸುತ್ತಾನೆ. ಸೀತೆಯ ರೋದನವನ್ನು ಆಲಿಸಿ ಕಾಪಾಡಲು ಬಂದ ಜಟಾಯುವಿನ ರೆಕ್ಕೆಗಳನ್ನು ಕತ್ತರಿಸಿ ರಾವಣ ಹೊರಟುಹೋಗುತ್ತಾನೆ. ಕವಿ ಮೂಲಕ್ಕಿಂತ ಭಿನ್ನವಾಗಿ ಕಲ್ಪಿಸಿಕೊಂಡಿದ್ದಾನೆ ಈ ದೃಶ್ಯವನ್ನು.

ಹದಿನಾಲ್ಕನೇ ದೃಶ್ಯದಲ್ಲಿ; ಅಯೋಧ್ಯೆಯಿಂದ ಜನಸ್ಥಾನಕ್ಕೆ ಹೋಗಿದ್ದ ಸುಮಂತ್ರನು ದುಃಖದ ಸಂಗತಿಯನ್ನು ಹೊತ್ತು ತಂದಿದ್ದಾನೆ. ಸುಮಂತ್ರನು 'ಭರತನಿಗೆ ಮಾಯಾವಿಯಾದ ರಾವಣನು ಮೋಸದಿಂದ ಸೀತೆಯನ್ನು ಅಪಹರಿಸಿದ್ದಾನೆಂದೂ, ರಾಮನು ತನ್ನಂತೆಯೇ ದುಃಖಿಯಾಗಿದ್ದ ಸುಗ್ರೀವನಿಗೆ ವಾಲಿಯನ್ನು ವಧಿಸಿ ರಾಜ್ಯವನ್ನೂ ದೊರಕುವಂತೆ ಮಾಡಿ ಸೀತೆಯ ಪಡೆಯಲು ಸುಗ್ರೀವನ ಸಹಕಾರ ಬೇಡಿದ್ದಾನೆಂದೂ' ತಿಳಿಸುತ್ತಾನೆ. ಆಗ ಭರತನು ಮತ್ತೆ ತನ್ನ ತಾಯಿ ಕೈಕೆಯನ್ನು ನಿಂದಿಸತೊಡಗುತ್ತಾನೆ. ಇದಕ್ಕೆಲ್ಲ ನೀನೆ ಕಾರಣ ಎಂದು ಆರೋಪಿಸುತ್ತಾನೆ. ಆಗ ಆಕೆಯು ನನ್ನದೇನೂ ತಪ್ಪಿಲ್ಲ. ಈ ಎಲ್ಲಾ ಕಷ್ಟ ಪರಂಪರೆಗೆ ನಾನು ನಿಮಿತ್ತ ಮಾತ್ರಳು. ಇದೆಲ್ಲ ಮಹಾರಾಜನಿಗೆ ಬಂದಿದ್ದ ಶಾಪ. ಸುಮಂತ್ರ, ಎಲ್ಲವನ್ನೂ ವಿಸ್ತರಿಸಿ ಕುಮಾರನಿಗೆ ಹೇಳು ಎಂದಾಗ ಆತ ಶ್ರವಣಕುಮಾರನ ಪ್ರಸಂಗವನ್ನೂ ಆತನ ತಂದೆ 'ನನ್ನಂತೆಯೇ ನೀನೂ ಪುತ್ರಶೋಕದಿಂದ ಸಾಯಿ'ಎಂದು ಪುತ್ರಶೋಕದಿಂದ ಕೊಟ್ಟ ಶಾಪವನ್ನು ಹೇಳುತ್ತಾನೆ. ಆಗ ಭರತ ತಾಯಿಯಲ್ಲಿ ಕ್ಷಮೆಯಾಚಿಸುತ್ತಾನೆ.

ಹದಿನೈದನೇ ದೃಶ್ಯದಲ್ಲಿ; ರಾಮನು ಸಪ್ತಸಾಲವೃಕ್ಷಗಳನ್ನು ಭೇದಿಸುತ್ತಾನೆ. ಅಂತೆಯೇ ವಾಲಿಯ ಎದೆಯನ್ನು ಸೀಳುತ್ತಾನೆ. ರಕ್ತಸಿಕ್ತನಾದ ವಾಲಿ, ರಾಮನನ್ನು ಕುರಿತು 'ಅಯ್ಯಾ ರಾಮ ನೀನೆ ಹೀಗೆ ರಣರಂಗದಲ್ಲಿ ನನಗೆ ಮೋಸ ಮಾಡಬಹುದೇ? ನಾರುಬಟ್ಟೆಯನ್ನುಟ್ಟುಕೊಂಡು ವೇಷ ಬದಲಾಯಿಸಿದ ಮಾತ್ರಕ್ಕೆ ನಿನಗೆ ಬುದ್ಧಿಯು ಬದಲಾಯಿಸಿತೇ? ಅದಕ್ಕೆ ರಾಮನು 'ಮರೆಯಲ್ಲಿ ನಿಂತು ಮೃಗಗಳನ್ನು ಕೊಲ್ಲಬೇಕು. ನೀನು ವಧ್ಯನೂ ಆಗಿ, ನಿನ್ನಲ್ಲಿ ಮೃಗತ್ವವೂ ಇದ್ದುದರಿಂದ ನಿನ್ನನ್ನು ಮರೆಯಲ್ಲಿ ನಿಂತು ದಂಡಿಸಬೇಕಾಯಿತು. ವಾಲಿಯು 'ನಾನು ದಂಡನೆಗೆ ಅರ್ಹನೆಂದು ಭಾವಿಸುವೆಯಾ?

ರಾಮ–ಸಂಶಯವೇನು?

ವಾಲಿ–ಯಾವ ಕಾರಣಕ್ಕಾಗಿ?

ರಾಮ–ತಮ್ಮನ ಹೆಂಡತಿಯೊಡನೆ ಕೂಡಿದ ಕೂಟಕ್ಕಾಗಿ

ವಾಲಿ–ಅದು ನಮ್ಮ ಪದ್ಧತಿ

ರಾಮ–ಅದು ಸರಿಯಲ್ಲವಯ್ಯಾ–ನೀನು ವಾನರೇಂದ್ರ, ಧರ್ಮಾಧರ್ಮಗಳನ್ನು
ಬಲ್ಲವನು; ಹೀಗಿದ್ದೂ ಹಾಗೆ ಮಾಡಿದ್ದು ಸರಿಯಲ್ಲ.

ಆಗ ವಾಲಿಯು–'ಸೋದರನ ಹೆಂಡತಿಯೊಡನೆ ಸಂಗಮಿಸಿದ ದೋಷವು ಅಣ್ಣತಮ್ಮಂದಿರಾದ ನಮ್ಮಿಬ್ಬರಲ್ಲೂ ಉಂಟು...'ಎನ್ನುತ್ತಾನೆ. **ಮಾಸ್ತಿಯವರು ಇದೇ ಪ್ರಸಂಗವನ್ನು ಬುಡಕಟ್ಟು ಜನಾಂಗವನ್ನು ಸಮಾಜಶಾಸ್ತ್ರೀಯ ಹಿನ್ನೆಲೆಯಲ್ಲಿ ತಾರೆಯಿಂದ ಹೇಳಿಸುತ್ತಾರೆ.** ಮತ್ತು ಈ ಪ್ರಸಂಗದಲ್ಲಿನ ರಾಮ–ವಾಲಿಯರ ವಾದವನ್ನೂ, ವಾಲಿಯನ್ನೂ ಕೊಂದಿದಕ್ಕೆ ರಾಮ ಸಮರ್ಥಿಸಿಕೊಳ್ಳುವ ಬಗೆಯನ್ನು ಕುವೆಂಪುರವರು ತಮ್ಮ ಕಾವ್ಯಕ್ಕೆ ತಕ್ಕಂತೆ ಅಳವಡಿಸಿಕೊಂಡಿರುವುದನ್ನು ಮನಗಾಣಬಹುದು.

ಹದಿನಾರನೇ ದೃಶ್ಯದಲ್ಲಿ; ಅಶೋಕವನದಲ್ಲಿ ಸೀತೆ ಆರ್ಯಪುತ್ರನ ಅಗಲಿಕೆಯಿಂದ ಪರಿತಪಿಸುತ್ತಿರುವಳು. ಹನುಮಂತನು ಸಂಪಾತಿಯಿಂದ ಸೀತೆಯ ವೃತ್ತಾಂತವನ್ನು ತಿಳಿದು, ಮಹೇಂದ್ರ ಪರ್ವತವನ್ನೇರಿ ಅಲ್ಲಿಂದ ಲಂಕೆಗೆ ಹಾರಿಬಂದು ಎಲ್ಲಾಕಡೆಯೂ ಹುಡುಕಿ ಸೀತೆಯನ್ನು ಕಾಣದೆ ಕೊನೆಗೆ ಪ್ರಮದವನದಲ್ಲಿ ಅಶೋಕವೃಕ್ಷದ ಕೆಳಗೆ ಕುಳಿತ ಸೀತೆಯನ್ನು ಕಾಣುತ್ತಾನೆ. ಅಷ್ಟರಲ್ಲಿ ರಾವಣ ತನ್ನ ಪರಿವಾರದೊಡನೆ ಅಲ್ಲಿಗೆ ಬಂದು 'ತನ್ನನ್ನು ವರಿಸು ತನ್ನಲ್ಲಿ ರಮಿಸು'ಎಂದು ಸೀತೆಯನ್ನು ಪೀಡಿಸಿ ಹೋಗುತ್ತಾನೆ. ನಂತರ ಹನುಮಂತ ರಾಮನ ಉಂಗುರವನ್ನು ಸೀತೆಗೆ ಕೊಟ್ಟು ವಿರಹತಪ್ತನಾದ

ರಾಮನ ಸ್ಥಿತಿಯನ್ನು ವಿವರಿಸುತ್ತಾನೆ. ನಂತರ ತಾಯಿ, ಚಿಂತೆ ಬೇಡ. ರಾಮನು ಮಹಾಧನಸ್ಸು ಹಿಡಿದು ವಾನರಸೇನೆಯಿಂದ ಪರಿವೃತನಾಗಿ ದಶಗ್ರೀವನನ್ನು ಸಂಹರಿಸಲು ಲಂಕೆಗೆ ಬರುತ್ತಾನೆಂದು ಹೇಳಿ ಅಲ್ಲಿಂದ ಹೊರಡುತ್ತಾನೆ. ಹೋಗುವಾಗ ಉದ್ಯಾನವನವನ್ನೂ, ತ್ರಿಕೂಟವನ್ನೂ ಕರಚರಣಾಘಾತದಿಂದ ನಾಶ ಮಾಡುತ್ತಾನೆ, ತನ್ನ ಬಗ್ಗೆ ರಾವಣನಿಗೆ ತಿಳಿಯಲೆಂದು.

ಹದಿನೇಳನೆ ದೃಶ್ಯದಲ್ಲಿ; ಶಂಕುಕರ್ಣ, ಜಯೆ ಎಂಬುವವಳಿಗೆ 'ಒಂದು ಮಹಾಬಲಶಾಲಿಯಾದ ಕೋತಿಯು ಅಶೋಕವನವನ್ನು ಹಾಳು ಮಾಡಿದ್ದಲ್ಲದೆ ಅದನ್ನು ರಕ್ಷಿಸಲು ಹೋದ ಅಕ್ಷಕುಮಾರನು ಹತನಾದನೆಂದು' ರಾವಣನಿಗೆ ತಿಳಿಸೆಂದು ಕಳುಹಿಸುತ್ತಾನೆ. ವಿಷಯ ತಿಳಿದ ರಾವಣ ವಿಭೀಷಣನನ್ನು ಕರೆಸುತ್ತಾನೆ. ಆದರೆ ವಿಭೀಷಣ ರಾವಣನಿಗೆ ಬುದ್ಧಿವಾದ ಹೇಳುತ್ತಾನೆ. ಕೋಪಗೊಂಡ ರಾವಣ ವಿಭೀಷಣನನ್ನು ಹೊರಗಟ್ಟುತ್ತಾನೆ. ಹನುಮಂತನ ಬಾಲಕ್ಕೆ ಬೆಂಕಿ ಹಚ್ಚಿಸುತ್ತಾನೆ. ಹನುಮಂತ ತನ್ನ ಸುಟ್ಟ ಬಾಲದಿಂದ ಲಂಕೆಯನ್ನೇ ಸುಡುತ್ತಾನೆ.

ಹದಿನೆಂಟನೇ ದೃಶ್ಯದಲ್ಲಿ; ಹನುಮಂತನಿಂದ ಸೀತೆಯ ವೃತ್ತಾಂತ ತಿಳಿಯಿತು. ಶ್ರೀರಾಮ ವಾನರಸೈನ್ಯ ಸಮೇತನಾಗಿ ಸಮುದ್ರತೀರವನ್ನು ಸೇರಿದ್ದಾನೆ. ಅಲ್ಲಿಗೆ ವಿಭೀಷಣ ರಾಮನಿಗೆ ಶರಣಾಗತನಾಗಿ ಬರುತ್ತಾನೆ. ಲಂಕೆಯಲ್ಲಿಯೇ ಹನುಮಂತ ವಿಭೀಷಣನನ್ನು ನೋಡಿದ್ದರಿಂದ; ಅವನ ರಾಮಭಕ್ತಿಯನ್ನು ರಾಮ ಲಕ್ಷ್ಮಣರಿಗೆ ಹೇಳಿದಾಗ ರಾಮನು ಒಪ್ಪಿಕೊಂಡು, ವಿಭೀಷಣನನ್ನೇ ಸಮುದ್ರದಾಟಲು ಏನು ಮಾಡಬೇಕೆಂದು ಕೇಳುತ್ತಾನೆ. 'ದಾರಿ ಕೊಡದಿದ್ದರೆ ಸಮುದ್ರಕ್ಕೆ ದಿವ್ಯಾಸ್ತ್ರ ಪ್ರಯೋಗಿಸು'ಎನ್ನುತ್ತಾನೆ. ರಾಮ ದಿವ್ಯಾಸ್ತ್ರ ತೆಗೆಯಬೇಕೆನ್ನುವಷ್ಟರಲ್ಲಿ ವರುಣದೇವನು ಪ್ರತ್ಯಕ್ಷನಾಗಿ ದಾರಿ ಮಾಡಿಕೊಡುತ್ತಾನೆ. ವಿಸ್ಮಯದಿಂದ ಸಾಗರ ದಾಟಿ ಲಂಕೆ ಸೇರುತ್ತಾರೆ.

ಹತ್ತೊಂಭತ್ತನೆಯ ದೃಶ್ಯದಲ್ಲಿ; ಯುದ್ಧ ಪ್ರಾರಂಭವಾಗಿ ಲಂಕೆಯ ಅನೇಕ ವೀರರು-ಪ್ರಹಸ್ತ, ಕುಂಭಕರ್ಣ, ಇಂದ್ರಜಿತು ಮುಂತಾದವರು ಹತರಾಗಿದ್ದಾರೆ. ಲಂಕೆಯ ಅನೇಕ ಸಾಧನ ಸಾಮಗ್ರಿಗಳು ನಾಶವಾಗಿವೆ. ಆದರೂ ರಾವಣ ಯುದ್ಧಕ್ಕೆ ಸೆಣಸುತ್ತಿದ್ದಾನೆ. ವಿದ್ಯುಜ್ಜಿಹ್ವನನ್ನು ಕರೆದು ಶ್ರೀರಾಮಲಕ್ಷ್ಮಣರ ಶಿರಃ ಪ್ರತಿಕೃತಿಗಳನ್ನು ತಾರೆಂದು ಹೇಳಿ ಅವುಗಳನ್ನು ಅಶೋಕವನದಲ್ಲಿದ್ದ ಸೀತೆಗೆ ತೋರಿಸಿ ಇನ್ನವರು ನಿನ್ನ ಪಾಲಿಗಿಲ್ಲ, ನನ್ನ ವಶವಾಗು ಎಂದಾಗ ಸೀತೆ ರೋದಿಸುತ್ತಾಳೆ. ಇತ್ತ ರಾವಣನ ರಾಜಲಕ್ಷ್ಮಿಯು

ಅವನನ್ನು ತ್ಯಜಿಸಿ ಹೊರಟುಹೋಗುತ್ತಾಳೆ. ರಾವಣ ಖಡ್ಗವಿಡಿದು ತಾನೇ ಯುದ್ಧಸನ್ನದ್ಧನಾಗಿ ಬರುತ್ತಾನೆ.

ಇಪ್ಪತ್ತನೆಯ ದೃಶ್ಯದಲ್ಲಿ; ರಾಮ–ರಾವಣರ ಘೋರಯುದ್ಧ ನಡೆದು, ರಾವಣ ಹತನಾದ ಮೇಲೆ ವಿಭೀಷಣನಿಗೆ ಪಟ್ಟಕಟ್ಟುತ್ತಾನೆ. ವಿಭೀಷಣ ಸೀತೆಯನ್ನು ಕರೆತಂದು ಒಪ್ಪಿಸಲು ಹೋದರೆ ಆಕೆ ನನ್ನನ್ನು ನೋಡುವುದು ಬೇಡವೆನ್ನುತ್ತಾನೆ. ಸೀತೆ ಅಗ್ನಿಪ್ರವೇಶ ಮಾಡುತ್ತಾಳೆ. ಸ್ವತಃ ಅಗ್ನಿಯೇ ಬಂದು ಸೀತೆ ಮಹಾಪತಿವ್ರತೆ ಎಂದು ಹೇಳಿ ಶ್ರೀರಾಮನಿಗೆ ಒಪ್ಪಿಸುತ್ತಾನೆ. ಲಂಕೆಯಿಂದ ಹಿಂದಿರುಗಬೇಕಾದರೆ ಉಂಟಾದ ಘಟನೆಗಳನ್ನೆಲ್ಲ ನೆನಪಿಸುತ್ತಾನೆ. ಸೀತೆ ಅದಕೇಳಿಯೇ ಹೆದರಿದಾಗ ಭಯಬೇಡ ಆ ಕಾಲ ಕಳೆದುಹೋಯಿತು ಎಂದು ಸಮಾಧಾನ ಮಾಡುತ್ತಾನೆ. ಅಷ್ಟರಲ್ಲಿ ಭರತನು ಸೈನ್ಯಸಮೇತನಾಗಿ ತಾಯಂದಿರೊಡಗೂಡಿ ಶ್ರೀರಾಮನನ್ನು ಕಾಣಲು ಬರುತ್ತಾನೆ. ನಂತರ ಆತನಿಗೆ ರಾಜ್ಯವನ್ನು ಒಪ್ಪಿಸಿ ಪಟ್ಟಾಭಿಷೇಕವಾಗುತ್ತದೆ.

**ಇ) ಕಾಳಿದಾಸನ ರಘುವಂಶದ ರಾಮಕಥೆಯ ರಾಮಕಥಾಸ್ವರೂಪ:–**

ಕಾಳಿದಾಸ ಸಂಸ್ಕೃತ ಕಾವ್ಯದ ಅತ್ಯುನ್ನತ ಶಿಖರವಾಗಿದ್ದಾನೆ. ಅವನಿಗೆ ಕೈಮುಗಿಯದ ಕವಿಯಿಲ್ಲ, ಅವನನ್ನು ಮೆಚ್ಚದ ವಿಮರ್ಶಕನಿಲ್ಲ, ಅವನ ಕಾವ್ಯ ಸೃಷ್ಟಿ ಅಭಿನವವಷ್ಟೇ ಅಲ್ಲ, ಅಭಿರಾಮವೂ ಹೌದು. ಆತ ರಚಿಸಿದ ಕೃತಿಗಳು ಒಟ್ಟು ಏಳು; ಮಾಲವೀಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಶಾಕುಂತಲ ನಾಟಕಗಳು; ಋತುಸಂಹಾರ, ಮೇಘದೂತ ಇವು ಖಂಡಕಾವ್ಯಗಳು; ಕುಮಾರಸಂಭವ, ರಘುವಂಶ ಇವೆರಡೂ ಮಹಾಕಾವ್ಯಗಳು.

ಕಾಳಿದಾಸನ 'ರಘುವಂಶ' ಮಹಾಕಾವ್ಯವು ೧೯ ಸರ್ಗಗಳಿಂದ ಕೂಡಿದ್ದು ೧೫೬೯ ಶ್ಲೋಕಗಳನ್ನು ಒಳಗೊಂಡಿದೆ. ವಾಲ್ಮೀಕಿ ರಾಮಾಯಣವು ಪೂರ್ವಪ್ರಸಿದ್ಧರಾದ ರಾಜರಲ್ಲಿ ದಶರಥ ಮತ್ತು ರಾಮನ ವಿಸ್ತೃತವರ್ಣನೆಯಿಂದಲೇ ಕೀರ್ತಿ ಪಡೆದಿತ್ತು. ಅಂತಹ ಇಪ್ಪತ್ತು ಧೀರೋದಾತ್ತ ನಾಯಕರನ್ನಾಗಿ ಮಾಡಿದರೆ, ವಾಲ್ಮೀಕಿಯೂ ತೋರಿಸದೆ ಬಿಟ್ಟ ಮುಖ್ಯ ಜೀವನತತ್ವಗಳನ್ನು ಪ್ರತಿಪಾದಿಸುವುದು ಶಕ್ಯವೆಂದು ಕವಿ ಕಾಳಿದಾಸ ಭಾವಿಸಿದಂತೆ ಕಾಣುತ್ತದೆ. ತನ್ನ ಕಾವ್ಯಕ್ಕೆ ರಘುವಂಶ

ಎಂದು ಹೆಸರಿಸಿದ್ದರೂ ಆದಿಕವಿಯ ವರ್ಣನೆಯಲ್ಲಿ ಶ್ರೀರಾಮನ ಪಾತ್ರ ಚಿತ್ರಣ ಸರ್ವಾಂಗಸುಂದರವಾಗಿ ಬಂದಾಗಿದ್ದುದರಿಂದ ಆ ಚಿತ್ರವನ್ನು ಕಾವ್ಯದ ಕೇಂದ್ರದಲ್ಲಿಟ್ಟುಕೊಂಡು ಅದಕ್ಕೆ ಪೂರಕವಾಗುವಂತೆ ದಿಲೀಪ, ರಘು, ಅಜರ ಚರಿತ್ರೆಯನ್ನು ದಶರಥ ಮತ್ತು ರಾಮನ ನಂತರ ಕುಶ, ಅತಿಥಿ, ನಿಷಧ, ನಳ, ನಭ, ಪುಂಡರೀಕ, ಕ್ಷೇಮಧನ್ವರೇ ಮೊದಲಾದ ಇಪ್ಪತ್ತೊಂದು ರಾಜರ ಚರಿತ್ರೆಯನ್ನು ಕಾಳಿದಾಸನು ಒಂದೇ ಸೂತ್ರದಿಂದ ಸಂಯೋಜಿಸಿದ್ದಾನೆ. ಆದರೆ ರಾಮನವರೆಗೆ ಹರಿದ ಸೂರ್ಯವಂಶದ ಆದರ್ಶಗಳು ಕ್ರಮ ಕ್ರಮವಾಗಿ ಶಿಥಿಲವಾಗುತ್ತ ಬಂದು ಕಡೆಗೆ ಅಗ್ನಿವರ್ಣನ ತಲೆಗೆ ಶೂನ್ಯಾವಸ್ಥೆಗೆ ಬಂದಿತೆಂಬಂತೆ ಕವಿ ತನ್ನ ರಘುವಂಶವನ್ನು ಮುಗಿಸುತ್ತಾನೆ. ಅಗ್ನಿವರ್ಣನ ಹಿಂದಿನವರಾದ ಅತಿಥಿ ಮುಂತಾದ ರಾಜರ ಕಥೆಯನ್ನೆಲ್ಲಾ ಬಹಳ ಚುರುಕಾಗಿ ಓಡಿಸಿಬಿಡುತ್ತಾನೆ.

ಅಜಕುಮಾರನಾದ ದಶರಥನು ಧನುರ್ವಿದ್ಯೆಯಲ್ಲಿ ಚತುರನಾಗಿದ್ದನು. ಒಂದು ದಿನ ಬೇಟೆಯಾಡಲು ಹೋಗಿದ್ದಾಗ ಕೊಳದ ಕಡೆಯಿಂದ ಶಬ್ದ ಕೇಳಿಸಿತು. ಅದನ್ನು ಗಜವೆಂದರಿತ ದಶರಥನು 'ಶಬ್ಧವೇಧಿ' ಪ್ರಯೋಗಿಸಿದನು. ಅದು ಮುನಿಕುಮಾರನೊಬ್ಬನನ್ನು ಕೊಂದಿತು. ಪುತ್ರ ಮರಣದಿಂದ ಸಂತಪ್ತನಾದ ಮುನಿಕುಮಾರನ ತಂದೆ "ನೀನೂ ಸಹ ನಿನ್ನ ವೃದ್ಧಾಪ್ಯದಲ್ಲಿ ನನ್ನಂತೆ ಪುತ್ರಶೋಕದಿಂದಲೇ ಮೃತನಾಗು" ಎಂದು ಶಪಿಸಿದನು. ದಶರಥನಿಗೆ ಮೂವರು ಹೆಂಡತಿಯರಿದ್ದರೂ ಮಕ್ಕಳೇ ಆಗಿರಲಿಲ್ಲ. ಪುತ್ರಶೋಕದಿಂದ ಮೃತಪಡಬೇಕೆಂದ ಮೇಲೆ ಪುತ್ರ ಜನನವಾಗುವುದು ನಿಶ್ಚಿತವಾಯಿತೆಂದು ಭಾವಿಸಿ ಉತ್ಸಾಹಗೊಂಡನು. ಅದೇ ವೇಳೆಗೆ ರಾವಣನ ಹಿಂಸೆಯನ್ನು ತಾಳಲಾರದೆ ಆ ಲೋಕಕಂಟಕನ ವಧೋಪಾಯವನ್ನು ಯೋಜಿಸಿಬೇಕೆಂದು ದೇವತೆಗಳೆಲ್ಲ ಮಹಾವಿಷ್ಣುವಿನಲ್ಲಿ ಮೊರೆಯಿಟ್ಟರು. ಆತನು ದಶರಥನ ಮಗನಾಗಿ ಭೂಲೋಕದಲ್ಲಿ ಅವತರಿಸುವುದಾಗಿಯೂ, ತನ್ನ ಅಂಶದಿಂದಲೇ ದಶರಥನಿಗೆ ಮತ್ತೆ ಮೂವರು ಪುತ್ರರು ಜನಿಸುವರು. ಆ ರಾಮನಿಂದಲೇ ರಾವಣ ಸಂಹಾರವಾಗುತ್ತದೆ ಎಂದು ಹೇಳಿದನು. ಇತ್ತ ದಶರಥನು ಕುಲಗುರು ವಸಿಷ್ಠರ ಸಲಹೆಯಂತೆ ಪುತ್ರಕಾಮೇಷ್ಟಿಯಾಗ ಮಾಡಿದನು. ಅದರ ಫಲವಾಗಿ ರಾಮ, ಭರತ, ಲಕ್ಷ್ಮಣ ಶತ್ರುಘ್ನರೆಂಬ ಮಕ್ಕಳು ಕ್ರಮವಾಗಿ ಜನಿಸಿದರು. ದಶರಥನು ಬಾಲ್ಯದಲ್ಲಿಯೇ ರಾಜಕುಮಾರರಿಗೆ ಶಸ್ತ್ರ-ಶಾಸ್ತ್ರಾಭ್ಯಾಸಗಳನ್ನು ಮಾಡಿಸಿದನು.

ಹೀಗಿರಲು ಒಮ್ಮೆ ವಿಶ್ವಾಮಿತ್ರನು ದಶರಥನ ಆಸ್ಥಾನಕ್ಕೆ ಬಂದನು. ರಾಜನ ಒಪ್ಪಿಗೆ ಪಡೆದು ಇನ್ನೂ ಹದಿನಾರು ವರ್ಷಗಳು ತುಂಬಿರದ ರಾಮಲಕ್ಷ್ಮಣರನ್ನು ಯಾಗ ರಕ್ಷಣೆಗಾಗಿ ಕರೆದೊಯ್ದನು. ಅವರಿಗೆ ಬಲ, ಅತಿಬಲ ಎಂಬ ಎರಡು ಮಂತ್ರವಿದ್ಯೆಗಳನ್ನು ಉಪದೇಶ ಮಾಡುವನು. ದಾರಿಯಲ್ಲಿಯೇ ತಾಟಕಿಯೆಂಬ ರಾಕ್ಷಸಿಯನ್ನು ರಾಮನು ವಧಿಸಿದನು. ಆಶ್ರಮದಲ್ಲಿ ವಿಶ್ವಾಮಿತ್ರ ಯಾಗದೀಕ್ಷೆ ಕೈಗೊಂಡಾಗ, ಸುಬಾಹು ಮಾರೀಚರೆಂಬ ರಾಕ್ಷಸರು ಯಾಗವನ್ನು ಕೆಡಿಸಲು ಬಂದರು. ರಾಮನು, ಸುಬಾಹುವನ್ನು ಆಗ್ನೇಯಾಸ್ತ್ರದಿಂದ ಸಂಹರಿಸಿ, ಮಾರೀಚನನ್ನು ವಾಯವ್ಯಾಸ್ತ್ರದಿಂದ ಘಾಸಿಗೊಳ್ಳುವಂತೆ ಮಾಡಿದನು. ಯಾಗ ನಿರಾತಂಕವಾಗಿ ನಡೆಯಿತು. ನಂತರ ಮಹರ್ಷಿ; ಕುಮಾರರನ್ನು ಜನಕರಾಜನ ಮಿಥಿಲಾಪುರಕ್ಕೆ ಕರೆದೊಯ್ದನು. ಮಾರ್ಗಮಧ್ಯದಲ್ಲಿ ಪಾಳುಬಿದ್ದ ಗೌತಮಾಶ್ರಮದಲ್ಲಿ ಸಂಜೆ ತಂಗಬೇಕಾಯಿತು. ಆ ಬಳಿಕ ಜನಕನ ಆಸ್ಥಾನವನ್ನು ಸೇರಿದರು. ಅಲ್ಲಿ ರಾಮನು, ಇತರರಿಗೆ ಎತ್ತಲೂ ಅಸಾಧ್ಯವಾಗಿದ್ದ ಶಿವಧನುವನ್ನು ಬಗ್ಗಿಸಿ, ಹೆದೆಯನ್ನು ಕಟ್ಟಿದನು. ಅವನು ಶಿಂಜಿನಿಯನ್ನು ಎಳೆದ ಬಿರುಸಿಗೆ ಆ ಧನುವೇ ಮುರಿದು ಬಿದ್ದಿತು. ಜನಕನು ಅಲ್ಲಿಗೆ ದಶರಥಾದಿಗಳನ್ನು ಕರೆಯಿಸಿಕೊಂಡು ರಾಮ, ಲಕ್ಷ್ಮಣ, ಭರತ, ಶತ್ರುಘ್ನರಿಗೆ ಕ್ರಮವಾಗಿ ಸೀತೆ, ಊರ್ಮಿಳಾ, ಮಾಂಡವೀ, ಶ್ರುತಕೀರ್ತಿಯೆಂಬ ತನ್ನ ಮತ್ತು ತನ್ನ ತಮ್ಮನ ಮಕ್ಕಳನ್ನು ಕೊಟ್ಟು ಸಂಭ್ರಮದಿಂದ ಮದುವೆ ಮಾಡಿದನು.

ದಶರಥ ಚಕ್ರವರ್ತಿಯು ತನ್ನ ನಾಲ್ವರು ಪುತ್ರರ ವಿವಾಹದ ನಂತರ ಪರಿವಾರ ಸಮೇತನಾಗಿ ಮಿಥಿಲಾನಗರದಿಂದ ಅಯೋಧ್ಯೆಗೆ ಪ್ರಯಾಣ ಬೆಳೆಸಿದನು. ಮಾರ್ಗಮಧ್ಯದಲ್ಲಿ ಪರಶುರಾಮನು, ರೌದ್ರಮೂರ್ತಿಯಾಗಿ ಅವರೆದುರಿಗೆ ಬಂದನು. ರಾಮನನ್ನು ಕುರಿತು "ನನಗೆ ಇಬ್ಬರು ಶತ್ರುಗಳು, ನಮ್ಮ ತಂದೆಯ ಹಸುವನ್ನು ಕದ್ದ ಕಾರ್ತವೀರ್ಯನೊಬ್ಬನು, ನನ್ನ ಕೀರ್ತಿಯನ್ನು ಅಪಹರಿಸಿರುವ ನೀನೊಬ್ಬನು. ಮಿಥಿಲೆಯ ಧನುವನ್ನು ಮುರಿದೆಯಂತೆ! ಇದೋ ಈ ಧನುವನ್ನು ಬಗ್ಗಿಸಿ ಇದಕ್ಕೆ ಹೆದೆಯನ್ನು ಕಟ್ಟು, ನೀನಿದನ್ನು ಸಾಧಿಸಿದರೆ ನನ್ನನ್ನು ಗೆದ್ದಂತೆಯೇ ಭಾವಿಸುವೆನು" ಎಂದು ಹೇಳಿ ತನ್ನಲ್ಲಿದ್ದ ಬಿಲ್ಲನ್ನು ಒಡ್ಡಿದನು. ಶ್ರೀರಾಮನು ಮರು ಮಾತನಾಡೆ ಬಿಲ್ಲನ್ನು ತೆಗೆದುಕೊಂಡು ಹೆದೆ ಕಟ್ಟಿ ಬಾಣವನ್ನು ಹೂಡಿ, ಪರಶುರಾಮನನ್ನು ಕುರಿತು "ನೀನು ಸೋತೆ, ವಿಪ್ರನೆಂದು ನಿನ್ನನ್ನು ಹೊಡೆಯುವುದಿಲ್ಲ. ಆದರೆ ನಾನು ಹೂಡಿದ ಬಾಣವು ವ್ಯರ್ಥವಾಗುವಂತಿಲ್ಲ. ಆದಕಾರಣ, ನೀನು ಯಜ್ಞದಿಂದ ಗಳಿಸಿಕೊಂಡಿರುವ ಸ್ವರ್ಗಭೋಗದ ಅಧಿಕಾರವನ್ನು ನಾಶಗೊಳಿಸಲೇ?

ಹೇಳು" ಎಂದನು. ಪರಶುರಾಮನು ಒಪ್ಪಿದಾಗ ಆ ಉತ್ತಮಗತಿಗಳೆಲ್ಲ ರಾಮ ಬಾಣಕ್ಕೆ ಗುರಿಯಾದವು. ನಂತರ ಆತ ರಾಮನನ್ನು ಹರಸಿ ಹೊರಟುಹೋದನು. ರಾಮಾದಿಗಳು ಅಯೋಧ್ಯೆಗೆ ಬಂದರು.

ದಶರಥನು ತನಗೆ ಮುಪ್ಪು ಬಂದಿತೆಂದು ರಾಮನಿಗೆ ಪಟ್ಟಾಭಿಷೇಕ ಮಾಡಲು ಯತ್ನಿಸಿದನು. ದಶರಥನ ಕಿರಿಯ ಹೆಂಡತಿಯೂ ಪ್ರೇಮಪುತ್ಥಳಿಯೂ ಆದ ಕೈಕೆಯು ಅಡ್ಡ ಬಂದು "ನನಗೆ ಹಿಂದೆ ಕೊಟ್ಟಿರುವ ಎರಡು ವರಗಳನ್ನು ಈಗ ಕೋರುವೆನು. ಒಂದರಿಂದ ರಾಮನಿಗೆ ಹದಿನಾಲ್ಕು ವರ್ಷ ವನವಾಸವಾಗಲಿ, ಇನ್ನೊಂದರಿಂದ ಭರತನಿಗೆ ಯುವರಾಜ ಪಟ್ಟಾಭಿಷೇಕವಾಗಲಿ" ಎಂದಳು. ಇಲ್ಲಿ ಕೈಕೆಗೆ ಚಾಡಿಮಾತನ್ನು ಹೇಳುವ ಮಾತುಗಳಾಗಲಿ, ಕೌಸಲ್ಯಾರಾಮರ ಮತ್ತು ಸೀತಾರಾಮರ ಹೃದಯ ವೇಧಕವಾದ ಸಂಭಾಷಣೆ, ಕೌಸಲ್ಯಾ ಸೀತೆಯರ ಸಂಭಾಷಣೆ, ಲಕ್ಷ್ಮಣನು ತಂದೆ ಬಗ್ಗೆ ಆಡುವ ಕಿಡಿನುಡಿಗಳನ್ನೆಲ್ಲಾ ಕವಿ ಕೈಬಿಟ್ಟಿದ್ದಾನೆ. ದಶರಥನಿಗೆ ಸಮ್ಮತವಿಲ್ಲವಾದರೂ ರಾಮನು ಸೀತಾಲಕ್ಷ್ಮಣರೊಡನೆ ವನಕ್ಕೆ ಹೊರಟು ಹೋಗುತ್ತಾನೆ. ಕೈಕೆಯು; ಸೀತೆ ಮಾತ್ರ ವನವಾಸಕ್ಕೆ ಹೋಗುವುದು ಬೇಡ ಎಂದು ಕೋರುತ್ತಾಳೆ. ಬಹುಶಃ ತಾನು ಒಂದು ಹೆಣ್ಣಾಗಿ ಮತ್ತೊಬ್ಬ ಹೆಣ್ಣಿನ ಬಗ್ಗೆ ಕ್ರೌರ್ಯವನ್ನು ತೋರಿಸದೆ ಸಹಾನುಭೂತಿ ತೋರಿದಳೆಂದು ಕಾಣುತ್ತದೆ.

ದಶರಥನು ಪುತ್ರಶೋಕದಿಂದ ಇಹಲೋಕವನ್ನು ತ್ಯಜಿಸಿದನು. ಮಂತ್ರಿಗಳು ಭರತನನ್ನು ಸೋದರಮಾವನ ಮನೆಯಿಂದ ಕರೆಸಿ ಅರಸಾಗು ಎಂದರು. "ಅಣ್ಣನ ರಾಜ್ಯವು ನನಗೇಕೆ?" ಎಂದು ಅವನು ಅಣ್ಣನನ್ನು ಹುಡುಕಿ ಕರೆತರಲು ಹೋದನು. ಎಷ್ಟು ಕೇಳಿಕೊಂಡರೂ ರಾಮನು ರಾಜ್ಯವನ್ನು ಅಂಗೀಕರಿಸದಿರಲು; ಭರತನು ರಾಮನ ಪಾದುಕೆಗಳನ್ನು ಪಡೆದು ರಾಜಧಾನಿಗೆ ಹಿಂದಿರುಗದೆ ನಂದಿಗ್ರಾಮದಲ್ಲಿ ವಾಸಿಸುತ್ತ, ನ್ಯಾಸದಂತೆ ರಾಜ್ಯವನ್ನು ಪಾಲಿಸುತ್ತಿದ್ದನು.

ಇತ್ತ ವನವಾಸದಲ್ಲಿ ಒಂದು ದಿನ ರಾಮನು ಸೀತೆಯ ತೊಡೆಯ ಮೇಲೆ ತಲೆಯಿರಿಸಿ ಮಲಗಿರುವಾಗ ಕಾಕಾಸುರನು ಬಂದು ಆಕೆಯ ಮೈಯಲ್ಲಿ ಗಾಯ ಮಾಡಿದನು. ರಾಮನು ಅವನ ಮೇಲೆ ಒಂದು ಹುಲ್ಲುಕಡ್ಡಿಯನ್ನು ಮಂತ್ರಿಸಿ ಎಸೆದನು. ಅದು ಅವನ ಕಣ್ಣನ್ನು ಕೊಕ್ಕಿತು. ಮೂಲದಲ್ಲಿ ಈ ಪ್ರಸಂಗಕ್ಕೆ ಮೊದಲೇ ಬರುವ ಗುಹನ ಸಂಗತಿಯನ್ನೂ, ಭರದ್ವಾಜ ಆಶ್ರಮದ ಸಂಗತಿಯನ್ನೂ, ಕಾಳಿದಾಸ ಬಿಟ್ಟಿದ್ದಾನೆ. ಚಿತ್ರಕೂಟವು ಅಯೋಧ್ಯೆಗೆ ಸಮೀಪವೆಂದು ಅದನ್ನು ಬಿಟ್ಟು ದಕ್ಷಿಣಾಪಥಕ್ಕೆ

ಬಂದರು. ದಾರಿಯಲ್ಲಿ ವಿರಾಧನೆಂಬ ರಕ್ಕಸನು ಸೀತೆಯನ್ನು ಎತ್ತಿಕೊಂಡು ಹೋಗಲೆತ್ನಿಸಿ ರಾಮ-ಲಕ್ಷ್ಮಣರ ಕೈಯಿಂದ ಹತನಾದನು. ನಂತರ ಅಗಸ್ತ್ಯ ಮುನಿಗಳ ಸಲಹೆಯಂತೆ ಪಂಚವಟಿಯಲ್ಲಿ ಪರ್ಣಕುಟಿಯನ್ನು ನಿರ್ಮಿಸಿಕೊಂಡಿದ್ದರು.

ರಾವಣನ ತಂಗಿ ಶೂರ್ಪನಖಿಯು ಶ್ರೀರಾಮನನ್ನು ಮೋಹಿಸಿ ಪಂಚವಟಿಗೆ ಬಂದು ಸೀತೆಯೆದುರಿಗೇ ಅವನೊಡನೆ ತನ್ನ ಪ್ರೇಮಾಲಾಪವನ್ನು ಆರಂಭಿಸುವಳು. ಆಗ ರಾಮನು "ಬಾಲೆ! ನನಗೆ ಪತ್ನಿಯಿದ್ದಾಳೆ. ನನ್ನ ತಮ್ಮ ಲಕ್ಷ್ಮಣನ ಬಳಿಗೆ ಹೋಗು" ಎಂದು ಹೇಳುತ್ತಾನೆ. ಅವಳು ಲಕ್ಷ್ಮಣನ ಬಳಿಗೆ ಹೋಗಿ ಅವನು ತನ್ನನ್ನು ನಿರಾಕರಿಸಿದ ಮೇಲೆ ಮತ್ತೆ ರಾಮನ ಬಳಿಗೆ ಬರುತ್ತಾಳೆ. ಎರಡು ದಡಗಳನ್ನೂ ಆಶ್ರಯಿಸಿರುವ ನದಿಯಂತೆ. ಅವಳ ಸ್ಥಿತಿಯನ್ನು ನೋಡಿ ಜಾನಕಿ ನಗುತ್ತಾಳೆ. ರಾಕ್ಷಸಿಯಾದ ಶೂರ್ಪನಖಿಯು ಕೆರಳಿ "ಈ ಉಪಹಾಸ್ಯದ ಫಲವನ್ನು ಇಷ್ಟರಲ್ಲೇ ಅನುಭವಿಸುತ್ತೀಯೆ, ನನ್ನಲ್ಲಿ ನಿನ್ನ ಕೃತ್ಯವು, ವ್ಯಾಘ್ರಿಯನ್ನು ಹೆಣ್ಣು ಜಿಂಕೆಯು ಹಾಸ್ಯ ಮಾಡಿದಂತಿದೆ" ಎಂದು ಗುಡುಗುತ್ತಾಳೆ. ಸೀತೆಯ ಈ ಅಪಹಾಸ್ಯದ ನಗೆಯೇ; ಶೂರ್ಪನಖಿಯ ಹೃದಯದಲ್ಲಿ ದ್ವೇಷದ ಹೊಗೆಯಾಡುವಂತೆ ಮಾಡಿ, ಪರಿಣಾಮದಲ್ಲಿ ರಾವಣನಿಂದ ಸೀತಾಪಹರಣವು ನಡೆಯಲು ಕಾರಣವಾಗುತ್ತದೆ. ಅವಳು ಹೋಗಿ ಖರದೂಷಣ, ತ್ರಿಶಿರರನ್ನು ಯುದ್ಧಕ್ಕೆ ಕರೆತಂದಳು. ಅವರೆಲ್ಲರೂ ರಾಮಬಾಣಕ್ಕೆ ಸಿಕ್ಕಿ ಹತರಾದರು. ಅದೇ ಕಾರಣವಾಗಿ ರಾವಣನು ಬಂದು ಮೃಗದ ನೆಪದಿಂದ ರಾಮಲಕ್ಷ್ಮಣರನ್ನು ವಂಚಿಸಿ ಸೀತೆಯನ್ನು ಹೊತ್ತುಕೊಂಡು ಹೋದನು. ಜಟಾಯುವು ತಡೆಯಲು ಹೋಗಿ ರಾವಣನಿಂದ ರೆಕ್ಕೆ ಕತ್ತರಿಸಿಕೊಂಡು ನೆಲದ ಮೇಲುರುಳಿದನು. ಇಲ್ಲಿ ಮಾಯಾಮೃಗ ರೂಪವನ್ನು ಧರಿಸುವಂತೆ ರಾವಣನು ಮಾರೀಚನನ್ನು ಪ್ರಚೋದಿಸುವಾಗ ನಡೆಯುವ ಸಂಭಾಷಣೆಯಿಲ್ಲ.

ರಾಮಲಕ್ಷ್ಮಣರು ಹಿಂತಿರುಗಿ ಬಂದು ಜಟಾಯುವಿನಿಂದ ನಡೆದ ಸಂಗತಿಯನ್ನೆಲ್ಲ ತಿಳಿದು ಸೀತೆಯನ್ನು ಹುಡುಕಿಕೊಂಡು ಹೊರಟರು. ದಾರಿಯಲ್ಲಿ ಕಬಂಧನನ್ನು ಸಂಹರಿಸಿ ಅವನ ಶಾಪವನ್ನು ಕಳೆದರು. ಅವನು ಮುಂದಿನ ಕಾರ್ಯದ ಗತಿಯನ್ನು ಸೂಚಿಸಿದನು. ಅದರಂತೆ ಹೋಗಿ ಸುಗ್ರೀವನ ಸ್ನೇಹ ಸಂಪಾದಿಸಿದರು. ವಾಲಿಯನ್ನು ಸಂಹರಿಸಿ, ಸುಗ್ರೀವನಿಗೆ ರಾಜ್ಯಾಭಿಷೇಕ ಮಾಡಿದರು. ರಾಮ ಬಾಣದಿಂದ ಮೃತನಾದ ವಾಲಿಯ ಪತ್ನಿ ತಾರೆಯ ವಿಲಾಪವಾಗಲಿ, ಸಂಭಾಷಣೆಯಾಗಲಿ, ಅದಕ್ಕೂ

ಮುನ್ನ ನಡೆಯುವ ಸುಗ್ರೀವ-ರಾಮರ ಸಂಭಾಷಣೆಯಾಗಲಿ ಈ ಎಲ್ಲವನ್ನು ಸಂಪೂರ್ಣವಾಗಿ ಕಾಳಿದಾಸ ಬಿಟ್ಟಿದ್ದಾನೆ.

ಸುಗ್ರೀವನು, ತನ್ನ ಭಟರನ್ನು ಸೀತೆಯನ್ನು ಹುಡುಕಲು ದಿಕ್ಕು ದಿಕ್ಕಿಗೂ ಅಟ್ಟಿದನು. ಅವರಲ್ಲಿ ಹನುಮಂತನು ದಕ್ಷಿಣ ದಿಕ್ಕಿಗೆ ಹುಡುಕುತ್ತಾ ಹೊರಟು ಸಂಪಾತಿಯಿಂದ ಸುದ್ದಿ ತಿಳಿದು ಸಮುದ್ರವನ್ನು ದಾಟಿದನು. ಲಂಕೆಯಲ್ಲಿ ರಾಕ್ಷಸಿಯರ ನಡುವಿದ್ದ ಸೀತೆಯನ್ನು ಕಂಡು ರಾಮನ ಉಂಗುರವನ್ನು ಕೊಟ್ಟನು. ನಂತರ ರಾವಣನ ಮಗ ಅಕ್ಷಯಕುಮಾರನನ್ನು ಸಂಹರಿಸಿ ಲಂಕೆಯನ್ನು ಅಗ್ನಿಗೆ ಆಹುತಿಗೈದು, ಆಕೆಯು ಕೊಟ್ಟ ಗುರುತನ್ನು ತಂದು ರಾಮನಿಗೆ ಕೊಟ್ಟು ಸಂತೋಷಪಡಿಸಿದನು. ಕವಿಯು ಇಲ್ಲಿ ಅಂಗಧನ ನೇತೃತ್ವದಲ್ಲಿ ಸೀತೆಯನ್ನು ಹುಡುಕಲು ಹೊರಟ ವಾನರಸೇನೆಯ ಸಾಹಸಕಾರ್ಯಗಳನ್ನಾಗಲೀ ಸ್ವಯಂಪ್ರಭೆಯ ಪ್ರಸಂಗವನ್ನಾಗಲಿ ವರ್ಣಿಸಿಲ್ಲ.

ರಾಮನು ಸೈನ್ಯದೊಡನೆ ಲಂಕೆಯ ಮೇಲೆ ದಂಡೆತ್ತಿ ಹೊರಟನು. ಸಮುದ್ರತೀರದಲ್ಲಿ ವಿಭೀಷಣನು ಬಂದು ಕೂಡಿಕೊಂಡನು. ರಾವಣನ ಪರಾಕ್ರಮ, ಮಾಯೆ, ಯಾವುದೂ ಫಲನೀಡಲಿಲ್ಲ. ಅವನ ಪರಿವಾರವೆಲ್ಲವೂ ನಾಶವಾಯಿತು. ಮಕ್ಕಳು ಅಣ್ಣ ತಮ್ಮಂದಿರೆಲ್ಲರೂ ಮಡಿದರು. ರಾವಣನೂ ರಾಮನ ಬ್ರಹ್ಮಾಸ್ತ್ರಕ್ಕೆ ತನ್ನ ತಲೆಗಳನ್ನು ಒಪ್ಪಿಸಿದನು. ರಾಮನು ವಿಭೀಷಣನಿಗೆ ಲಂಕಾರಾಜ್ಯದ ಪಟ್ಟವನ್ನು ಕಟ್ಟಿದನು. ನಂತರ ಅಗ್ನಿಯು; ಪರಮಪಾವನೆಯೆಂದೊಪ್ಪಿಸಿದ ಸೀತೆಯನ್ನು ಅಂಗೀಕರಿಸಿ, ಪುಷ್ಪಕವಿಮಾನವನ್ನು ಏರಿ ಪರಿವಾರ ಸಮೇತನಾಗಿ ಅಯೋಧ್ಯೆಯ ಕಡೆ ಹಿಂತಿರುಗಿದನು.

ಇಲ್ಲಿಯವರೆಗೂ ಕವಿ, ವರ್ಣನೆಯ ಬಗ್ಗೆ ಅಷ್ಟು ಆಸಕ್ತಿತೋರದೆ ಕಥೆಯನ್ನು ಚುಟುಕಾಗೇ ಚುರುಕಿನಿಂದ ಮುಗಿಸುತ್ತಿದ್ದವನು, ಹದಿಮೂರನೇ ಸರ್ಗದಲ್ಲಿ ತನ್ನ ವರ್ಣನಾ ಸಾಮರ್ಥ್ಯದಿಂದ ಹೃದಯಂಗಮ ಗೊಳಿಸುತ್ತಾನೆ. ಲಂಕೆಯಿಂದ ಪುಷ್ಪಕ ವಿಮಾನದಲ್ಲಿ ಅಯೋಧ್ಯೆಗೆ ಹಿಂತಿರುಗುತ್ತಿದ್ದಾಗ ಶ್ರೀರಾಮನು ಸಮುದ್ರ ಶೋಭೆಯನ್ನೂ, ತಾನು ವಾನರ ಸೇನೆಯ ಸಹಾಯದಿಂದ ನಿರ್ಮಿಸಿದ ನೂರು ಯೋಜನದುದ್ದದ ಸಮುದ್ರ ಸೇತುವೆಯನ್ನೂ ತೋರಿಸಿ ವರ್ಣಿಸುತ್ತಾನೆ. ದಕ್ಷಿಣಭಾರತದ ಫಲಭರಿತವಾದ ಮರಗಳ ಸೊಗಸನ್ನು ವರ್ಣಿಸುವನು. ಮಾಲ್ಯವತ್ ಎಂಬ ಬೆಟ್ಟದ ಮೇಲೆ ನಿಂತಾಗ ಸೀತಾವಿರಹದ ದೆಸೆಯಿಂದ ತನ್ನ ಕಣ್ಣುಗಳಿಂದ ನೀರು ಬಂದಿದ್ದನ್ನು ಹೇಳುವನು. ಪಂಪಾಸರೋವರದ

ಸೊಬಗನ್ನೂ ಅದೇ ಸ್ಥಳದಲ್ಲಿ ಹನುಮಂತನು ಭೇಟಿಯಾದುದ್ದನ್ನೂ ವಿವರಿಸುವನು. ಗೋದಾವರಿಯ ಪಂಚವಟಿ, ಋಷ್ಯಾಶ್ರಮಗಳು, ಗಂಗಾ ಯಮುನಾ ಸಂಗಮಗಳು, ಹೀಗೆ ಸೀತೆಯೊಡನೆ ವನವಾಸ ಮಾಡಿದಾಗಿನ ತನ್ನ ಜೀವನದ ಸುಖಸಂತೋಷಗಳನ್ನೂ, ಸೀತಾವಿರಹದ ಅವಧಿಯಲ್ಲಿಯ ತನ್ನ ದುರ್ಭರ ಜೀವನದ ದುಃಖಾತಿಶಯವನ್ನೂ ಶ್ರೀರಾಮನು ಅವಳಿಗೆ ವಿವರಿಸಿ ಹೇಳುವನು.

ರಾಮನು ಬರುತ್ತಿರುವ ಸುದ್ದಿಯನ್ನು ಹನುಮಂತನಿಂದ ಮುಂಚಿತವಾಗಿ ತಿಳಿದ ಭರತನು ಸಪರಿವಾರನಾಗಿ ಬಂದು ರಾಮಾದಿಗಳಿಗೆ ಸ್ವಾಗತ ಕೋರಿದನು. ನಂತರ ರಾಮನು ರಾಜ್ಯಭಾರವನ್ನು ವಹಿಸಿಕೊಂಡು ತನ್ನೊಡನೆ ಬಂದಿದ್ದವರೆಲ್ಲರಿಗೂ ಗೌರವ–ಮರ್ಯಾದೆಗಳೊಡನೆ ತಮ್ಮ ತಮ್ಮ ಊರಿಗೆ ಕಳುಹಿಸಿಕೊಟ್ಟನು. ಹೀಗೆ ರಘುವಂಶದ ಕಥೆ ಅಗ್ನಿವರ್ಣನ ತಲೆಮಾರಿನವರಿಗೂ ಬೆಳೆಯುತ್ತಾ ಹೋಗುತ್ತದೆ. ಮುಖ್ಯವಾಗಿ ರಾಮನ ಕಥೆ ಎನ್ನುವುದು ವಾಲ್ಮೀಕಿ ರಾಮಾಯಣದಲ್ಲಿ ಇಪ್ಪತ್ತುನಾಲ್ಕುಸಾವಿರ ಶ್ಲೋಕಗಳಲ್ಲಿ ವರ್ಣಿತವಾಗಿದ್ದರೆ, ರಘುವಂಶದಲ್ಲಿ ಅದು ಮುಖ್ಯಸಂಗತಿಗಳನ್ನು ಆಧರಿಸಿ ಕೇವಲ ಐನ್ನೂರ ಅರವತ್ತೇರಡು ಶ್ಲೋಕಗಳಲ್ಲಿ ವರ್ಣಿತವಾಗಿದೆ. ಉಳಿದಂತೆ ಕವಿ ರಾಮನಿಗಿಂತ ಪೂರ್ವದ ಮತ್ತು ನಂತರದ ರಾಜರುಗಳ ಚರಿತ್ರೆಯನ್ನು ವರ್ಣಿಸುತ್ತಾ ಹೋಗಿದ್ದಾನೆ.

**ಈ) ತುಲಸೀದಾಸರ ಶ್ರೀರಾಮಚರಿತ ಮಾನಸ ಕಥಾಸ್ವರೂಪ :–**

ಹಿಂದೀ ಸಾಹಿತ್ಯಚರಿತ್ರೆಯಲ್ಲಿ ಸ್ವರ್ಣಯುಗವಾದ ಭಕ್ತಿಕಾಲದ ಮಹತ್ವ ಹೆಚ್ಚು. ಹಿಂದೀ ಸಾಹಿತ್ಯದಲ್ಲಿ 'ಭಕ್ತಿಯುಗ' ಎನ್ನುವುದು ಸುಮಾರು ಕ್ರಿ.ಶ.೧೩೧೮ರಿಂದ ಕ್ರಿ.ಶ.೧೬೪೩ರವರೆಗೆ ವಿಸ್ತರಿಸಿದೆ. ಈ ಯುಗದ ಭಕ್ತಿಕವಿಗಳಲ್ಲಿ ಕಬೀರದಾಸ, ಸೂರದಾಸ ಮತ್ತು ತುಲಸೀದಾಸರು ಅತ್ಯಂತ ಪ್ರಮುಖರೆನಿಸಿದ್ದಾರೆ. ತುಲಸೀದಾಸರನ್ನಂತೂ ವಾಲ್ಮೀಕಿ ಪ್ರತಿರೂಪವೆಂದೇ ಪರಿಗಣಿಸಲಾಗುತ್ತದೆ. ಭಾರತೀಯರ ಹೃದಯವನ್ನು ರಾಮಮಂತ್ರದಿಂದ ಪುನೀತರಾಗಿಸಿದ ಕೀರ್ತಿ ಸಂತ ತುಲಸೀದಾಸರಿಗೆ ಸಲ್ಲುತ್ತದೆ. ಅವರು 'ಅವಧೀ'ಭಾಷೆಯಲ್ಲಿ ರಚಿಸಿರುವ 'ಶ್ರೀರಾಮಚರಿತ ಮಾನಸ' ಮಹಾಕಾವ್ಯವು ಹಿಂದೀ ಭಾಷಿಕರಿಗೆ ವೇದ ಉಪನಿಷತ್ತು ಇದ್ದಂತೆ.

ತುಲಸೀದಾಸರು ಒಬ್ಬಕವಿ, ಹರಿಕಥಾದಾಸ ಅಷ್ಟೇ ಅಲ್ಲ ಓರ್ವ ಜನನಾಯಕ, ದೇಶಭಕ್ತ ಎಲ್ಲಕ್ಕಿಂತ ಹೆಚ್ಚಾಗಿ ಶ್ರೀರಾಮನ ಭಾವುಕಭಕ್ತ. ಅಂತೆಯೇ ಅವರು ಶ್ರೀರಾಮನ ಕಥೆ ಹೇಳುತ್ತಾ ಜನರ ಪಾಪ ತೊಳೆದು ದೈವಭಕ್ತಿ, ರಾಷ್ಟ್ರಭಕ್ತಿಗಳಿಂದ ಸಮಾಜವನ್ನು ಉತ್ತೇಜಿಸಿದರು. ದಾರಿಕಾಣದಾಗಿದ್ದ ಅಂದಿನ ಹಿಂದೂ ಸಮಾಜದ ಸಂಘಟಕರಾಗಿ ಮೌಢ್ಯ, ಅಕರ್ಮಕತೆಗಳನ್ನು ಉಚ್ಚಾಟಿಸಿದರು. ದೇಶೀಯ ರಾಜರಲ್ಲಿ ಪರಸ್ಪರ ಕಲಹ, ವಿಧರ್ಮಿಗಳ ಉಪಟಳ ಮತ್ತು ಮುಸಲ್ಮಾನ ದೊರೆಗಳ ದಬ್ಬಾಳಿಕೆಗಳಿಂದ ಪೀಡಿತರಾಗಿ ಕಂಗೆಟ್ಟ ಕಾಲದಲ್ಲಿ ಪರಿಹಾರವಾಗಿ ತುಲಸೀದಾಸರು ನೀಡಿದ್ದು "ರಾಮತ್ವ"ದ ತಾರಕಮಂತ್ರ. ಧರ್ಮಗ್ಲಾನಿಯಾದಾಗ, ದುಷ್ಟರ ನಾಶಕ್ಕಾಗಿ ಭಗವಂತನು ಅವತಾರ ಮಾಡುತ್ತಾನೆಂದು ಗೀತೆಯ ಸೂತ್ರವನ್ನೇ ಹಿಡಿದು, ರಾಮಚರಿತೆಯನ್ನು ಹಾಡಿ ಜನಮನವನ್ನು ಎಚ್ಚರಿಸಿದರು.

ಗೋಸ್ವಾಮಿ ತುಲಸೀದಾಸರು ಜನಿಸಿದ್ದು ಕ್ರಿ.ಶ.೧೪೯೭ರಲ್ಲಿ. ಸರಯೂಪಾರೀಣ ಬ್ರಾಹ್ಮಣ ದಂಪತಿಗಳಾದ ಆತ್ಮಾರಾಮದುಬೆ ಮತ್ತು ಹುಲಸೀದೇವಿಯರು ತುಲಸೀದಾಸರ ತಂದೆ ತಾಯಿಗಳು. ತುಲಸೀದಾಸರ ಹುಟ್ಟಿದ ಊರಿನ ಬಗ್ಗೆ ವಿದ್ವಾಂಸರಲ್ಲಿ ಒಮ್ಮತ ಅಭಿಪ್ರಾಯವಿಲ್ಲ. ಕೆಲವರು ಉತ್ತರಪ್ರದೇಶದ ಬಾಂದಾ ಜಿಲ್ಲೆಯ 'ರಾಜಾಪುರ'ವೆಂದೂ ಮತ್ತೆ ಕೆಲವರು ಏಟಾ ಜಿಲ್ಲೆಯ ಸೂಕರಕ್ಷೇತ್ರವೆಂದೂ ವಾದಿಸಿರುವರು.

"ತುಲಸೀದಾಸರ ಜನ್ಮದ ವಿಷಯದಲ್ಲಿ ಒಂದು ಪ್ರತೀತಿ"[೧] ಹೀಗಿದೆ: ಅವರು ಅಭುಕ್ತ ಮೂಲಾನಕ್ಷತ್ರದಲ್ಲಿ ಹುಟ್ಟಿದರು. ಹುಟ್ಟುವಾಗಲೇ ಅವರ ಬಾಯಿಯಲ್ಲಿ ಐದು ವರ್ಷದ ಮಗುವಿಗಿರುವಂತೆ ಹಲ್ಲುಗಳು ಮತ್ತು ತಲೆಯಲ್ಲಿ ಕೂದಲೂ ಬೆಳೆದಿದ್ದವು. ಹುಟ್ಟಿದಾಗ ಸಾಮಾನ್ಯ ಮಕ್ಕಳಂತೆ ಅಳದೆ ತುಲಸೀದಾಸರು ರಾಮನಾಮವನ್ನು ಉಚ್ಚರಿಸಿದರು. ಇದನ್ನು ಅಪಶಕುನವೆಂದು ಭಾವಿಸಿ ಅವರ ತಂದೆ ತಾಯಿಯರು ತುಲಸೀದಾಸರನ್ನು ತ್ಯಜಿಸಲು ನಿರ್ಧರಿಸಿದರು. ಚುನಿಯಾ ಎಂಬ ದಾಸಿಯ ಕೈಯಲ್ಲಿ ತಾಯಿ ಮಗುವನ್ನಿತ್ತು ತನ್ನ ತವರಿಗೆ ಕೊಟ್ಟು ಕಳುಹಿದಳು. ಮರುದಿನವೇ ತಾಯಿ ಹುಲಸೀದೇವಿ ಇಹಲೋಕವನ್ನು ತ್ಯಜಿಸಿದಳು. ಚುನಿಯಾ ಎಂಬ ದಾಸಿಯೇ ಮಗುವನ್ನು ಪ್ರೀತಿಯಿಂದ ಸಾಕಿದಳು. ತುಲಸೀದಾಸರಿಗೆ ಅಂದಾಜು ಐದುವರೆ ವರ್ಷಗಳಾಗುತ್ತಲೇ ಸಾಕುತಾಯಿಯಾಗಿದ್ದ ಚುನಿಯಾ ಕೂಡ ಮರಣಿಸಿದಳು. ತುಲಸೀದಾಸರು ಅನಾಥರಾದರು. ಈ ವಿಚಾರದಲ್ಲಿ ತುಲಸೀದಾಸರ

ಕೃತಿಯಲ್ಲೇ ಒಂದು ಉಲ್ಲೇಖ ಹೀಗಿದೆ: "ಮಾತಾ ಪಿತಾ ಜಗ ಜಾಯ ತಜ್ಯೋ, ವಿಧಿ ಹೂ ನ ಲಿಖೀ ಕುಛು ಭಾಲ ಭಲಾಯೀ"[೧] "ತಂದೆ ತಾಯಿಯರು ಜಗತ್ತಿನಲ್ಲಿ, ಹೆತ್ತು ಬಿಟ್ಟುಬಿಟ್ಟರು. ವಿಧಿಯೂ ಸಹ ಹಣೆಯಲ್ಲಿ ಏನೊಂದು ಒಳ್ಳೆಯದನ್ನು ಬರೆಯಲಿಲ್ಲ". ಬಾಲಕ ತುಲಸೀದಾಸ ಮನೆ ಮನೆಗೆ ಹೋಗಿ ರಾಮ ರಾಮ ಎಂದು ಭಿಕ್ಷೆ ಬೇಡುತ್ತಿದ್ದರಿಂದ ಅವನಿಗೆ 'ರಾಮಬೋಲಾ' ಎಂದು ಹೆಸರಾಯಿತು ಎಂಬುದು ಒಂದು ವಾದ, ಬಾಲಕನಲ್ಲಿದ್ದ ಪ್ರಖರಬುದ್ಧಿಯನ್ನು ಗಮನಿಸಿ, ಶ್ರೀಅನಂತಾನಂದಜಿಯವರ ಪ್ರಿಯಶಿಷ್ಯರಾದ ಶ್ರೀ ನರಹರಿಸ್ವಾಮಿಗಳು ತುಲಸೀದಾಸನಿಗೆ 'ರಾಮಬೋಲಾ' ಎಂದು ನಾಮಕರಣ ಮಾಡಿದರು ಎಂಬುದು ಇನ್ನೊಂದು ವಾದ. ಶ್ರೀನರಸಿಂಹಸ್ವಾಮಿಗಳು ತಮ್ಮೊಡನೆ ಅಯೋಧ್ಯೆಗೆ ಕರೆದುಕೊಂಡು ಹೋದರು. ಅಲ್ಲಿ ಪ್ರಾರಂಭಿಕ ವಿದ್ಯಾಭ್ಯಾಸ ಮಾಡಿಸಿದರು. ಅನಂತರ ಕಾಶೀಕ್ಷೇತ್ರಕ್ಕೆ ತಮ್ಮ ಶಿಷ್ಯನನ್ನು ಕರೆದುತಂದರು. ಅಲ್ಲಿ ಶ್ರೀಶೇಷಸನಾತನಸ್ವಾಮಿಗಳ ಹತ್ತಿರ ಸುಮಾರು ಹದಿನೈದು ವರ್ಷಗಳ ಕಾಲ ವೇದ-ವೇದಾಂಗಗಳನ್ನು ಅಧ್ಯಯನ ಮಾಡಿಸಿದರು.

ತುಲಸೀದಾಸರು ಕಾಶೀಕ್ಷೇತ್ರದಿಂದ ತಮ್ಮೂರಿಗೆ ಹಿಂದಿರುಗಿ, ಅಲ್ಲಿ ರತ್ನಾವಲಿ ಎಂಬ ಕನ್ಯೆಯನ್ನು ವಿವಾಹವಾದರು. ಆ ನವದಂಪತಿಗಳು ಸುಖ-ಸಂತೋಷದಿಂದಲೇ ಜೀವಿಸುತ್ತಿದ್ದರು. ತುಲಸೀದಾಸರಿಗೆ ಹೆಂಡತಿಯೆಂದರೆ ಪಂಚಪ್ರಾಣ! ಆದರೆ ಒಮ್ಮೆ ಹೆಂಡತಿ ರತ್ನಾವಲಿಯು; ತುಲಸೀದಾಸರು ಮನೆಯಲ್ಲಿ ಇಲ್ಲದ ವೇಳೆಯಲ್ಲಿ, ತನ್ನ ತವರಿಗೆ ಹೊರಟುಹೋದಳು. ತಿಳಿಸುವಷ್ಟು ವ್ಯವಧಾನವಿಲ್ಲದ ಕಾರಣ ಅವಸರವಾಗಿಯೇ ತವರುಮನೆಗೆ ತೆರಳಿದ್ದಳು. ಮನೆಗೆ ಬಂದ ತುಲಸೀದಸರಿಗೆ ಮಡದಿಯನ್ನು ಕಾಣದೆ ಇದ್ದಾಗ, ಅವರೂ ಹೆಂಡತಿಯ ತವರುಮನೆಗೆ ಹೋದರು. ಅವರು ಅಲ್ಲಿಗೆ ಹೋದಾಗ ಮಧ್ಯರಾತ್ರಿಯಾಗಿತ್ತು. ಜಡಿಮಳೆ ಸುರಿಯುತ್ತಿತ್ತು. ಮಳೆಯಲ್ಲಿ ನೆನೆದುಕೊಂಡು ಅವೇಳೆಯಲ್ಲಿ ಬಂದಿರುವ ಪತಿಯನ್ನು ನೋಡಿ ರತ್ನಾವಲಿ ನಾಚಿಕೆಯಿಂದಲೂ ಮತ್ತು ತಿರಸ್ಕಾರ ಭಾವನೆಯಿಂದಲೂ ಹೀಗೆ ನುಡಿದಳು.

**ಲಾಜ ನ ಆವತ ಆಪಕೋ ದೌರೇ ಆಯುಹು ಸಾಥ್।**
**ಧಿಕ್ ಧಿಕ್ ಐಸೇ ಪ್ರೇಮಕೋ ಕಹಾಕಹೌಂ ಮೈ ನಾಥ್॥**
**ಅಸ್ತಿ ಚರ್ಮಮಯ ದೇಹಮಮ ತಾಮಜೈಸೀ ಪ್ರೀತಿ!**
**ತೈಸೀ ಜೋ ಶ್ರೀರಾಮ ಮಹ ಹೋತಿ ನ ತೌ ಭವಭೀತಿ।**[೨]

"ನನ್ನ ಹಿಂದೆಯೇ ಓಡಿಬರುವುದಕ್ಕೆ ನಿಮಗೆ ನಾಚಿಕೆಯಾಗಲಿಲ್ಲವೇ? ಹೇ ನಾಥ, ನಾನೇನನ್ನಲಿ! ಇಂತಹ ಪ್ರೇಮಕ್ಕೆ ಧಿಕ್ಕಾರ. ಅಸ್ತಿ, ಚರ್ಮಮಯವಾದ ನನ್ನ ಈ ದೇಹದಲ್ಲಿಟ್ಟ ಪ್ರೀತಿಯಲ್ಲಿ ಒಂದಂಶ ಪ್ರೀತಿಯನ್ನು ಶ್ರೀರಾಮಚರಣದಲ್ಲಿ ಇಟ್ಟಿದ್ದರೆ ಭವಸಾಗರದಿಂದ ಪಾರಾಗಿ ಹೋಗುತ್ತಿದ್ದೀರಲ್ಲಾ! ಪತ್ನಿಯ ಮಾತುಗಳು ತುಲಸೀದಾಸರ ಮನಸ್ಸಿಗೆ ನಾಟಿದವು. ಅವಳ ಮರ್ಮಾಘಾತವಾದ ಮಾತಿನಿಂದ ಮಮಕಾರದಿಂದ ಮುಚ್ಚಿದ್ದ ಅವರ ಕಣ್ಣು ತೆರೆಯಿತು. ಕೂಡಲೇ ಮನೆಯನ್ನು ತೊರೆದು ಪ್ರಯೋಗಕ್ಕೆ ಹೊರಟುಹೋದರು. ಪತ್ನಿಯ ಉಪದೇಶದಿಂದಲೇ ನಾನು ಹೀಗಾದೆ ಎಂದು ಅವರೇ ಒಂದೆಡೆ ಹೀಗೆ ಹೇಳಿಕೊಂಡಿದ್ದಾರೆ–

**ಕಟೇ ಏಕ ರಘುನಾಥ ಸಂಗ, ಬಾಂಧೀ ಜಟಾ ಸಿರಕೇಸ!**

**ಹಮತೋ ಚಾಖಾ ಪ್ರೇಮರಸ ಪತಿನಿಕೇ ಉಪದೇಶ॥"**

ಹೀಗೆ ವಿರಕ್ತರಾದ ಗೋಸ್ವಾಮಿ ತುಲಸೀದಾಸರು ಸುಮಾರು ೩೭ ಕಾವ್ಯಗಳನ್ನು ಬರೆದಿರುವರೆಂದು ಪ್ರತೀತಿ. ಆದರೆ ಕಾಶಿ ನಾಗರೀ ಪ್ರಚಾರಣೀಸಭೆಯವರು ಪ್ರಕಟಿಸಿರುವ ಹನ್ನೆರಡು ಕೃತಿಗಳು ಮಾತ್ರ ಪ್ರಾಮಾಣಿಕವೆಂದು ವಿದ್ವಾಂಸರ ಅಭಿಪ್ರಾಯ. ಇವುಗಳಲ್ಲಿ ರಾಮಚರಿತ ಮಾನಸ, ವಿನಯಪತ್ರಿಕಾ, ಕವಿತರಾಮಾಯಣ, ಗೀತಾವಲಿ, ದೋಹಾವಲಿ ಇವು ಐದೂ ದೊಡ್ಡ ಕೃತಿಗಳು. ರಾಮಲಲಾ ನಹುಛೂ, ಬರವೈರಾಮಾಯಣ, ರಾಮಾಜ್ಞಪ್ರಶ್ನ, ಜಾನಕೀಮಂಗಲ, ಪಾರ್ವತೀಮಂಗಲ, ವೈರಾಗ್ಯಸಂದೀಪಿನೀ, ಕೃಷ್ಣ–ಗೀತಾವಲಿ ಇವು ಅವರ ಇನ್ನಿತರ ಕೃತಿಗಳು. ಅವರ ಕೃತಿಗಳಲ್ಲಿ ಅತ್ಯಂತ ಪ್ರಮುಖವಾದದೂ, ಅಪಾರ ಜನಪ್ರಿತಿಯನ್ನೂ ಮನ್ನಣೆಯನ್ನೂ ಗಳಿಸಿರುವ 'ಶ್ರೀರಾಮಚರಿತ ಮಾನಸ' ಕೃತಿಯ ಕಥಾಸ್ವರೂಪವನ್ನು ನೋಡೋಣ.



ಪರಮೇಶ್ವರನು ಪಾರ್ವತಿಗೆ ಹೇಳಿದ ರೀತಿಯಲ್ಲಿ ಕಥೆ ಚಿತ್ರಿತವಾಗಿದೆ. ಅದನ್ನು ಯಜ್ಞವಲ್ಕ್ಯರು ಭರದ್ವಾಜನಿಗೆ ಹೇಳುತ್ತಿರುವ ರೀತಿಯಲ್ಲಿ ತುಲಸೀದಾಸರು ಬಣ್ಣಿಸಿದ್ದಾರೆ. ತುಲಸೀದಾಸರು ಶ್ರೀರಾಮನನ್ನು ಮನುಷ್ಯನೆಂದು ಪರಿಗಣಿಸದೆ ಅವತಾರ ಪುರಷನೆಂದೇ ಚಿತ್ರಿಸಿರುವುದು. ಅದಕ್ಕಾಗಿ ಅವರು ಪೌರಾಣಿಕ ಪ್ರಸಂಗಗಳನ್ನೇ ಕಟ್ಟಿಕೊಡುತ್ತಾರೆ. ಭಗವಾನ್ ವಿಷ್ಣುವು ಈ ಭೂಮಿಯಲ್ಲಿ ಅವತರಿಸಲು ಅವರು ಕೊಡುವ ಕಾರಣಗಳು.

೧. ನಾರದನಿಗೆ ತನ್ನ ಜ್ಞಾನ ವೈರಾಗ್ಯಗಳ ಬಗ್ಗೆ ಬಹಳ ಗರ್ವವಿತ್ತು. ಅದನ್ನು ಭಂಗಿಸಬೇಕೆಂದು ನಾರಾಯಣನು ತನ್ನ ಮಾಯಾಜಾಲ ಹರಡಿದ. ದಾರಿಯಲ್ಲಿ ಬರುತ್ತಿರುವ ನಾರದನಿಗೆ, ನೂರು

ಯೋಜನಗಳ ನಗರ ಕಾಣಿಸಿತು. ಆ ನಗರದ ರಾಜನ ಮಗಳು ತ್ರಿಲೋಕ ಸುಂದರಿಯಾದ ವಿಶ್ವಮೋಹಿನಿ ನಾರದನ ಕಣ್ಣಿಗೆ ಬಿದ್ದಳು. ನಾರದನ ವೈರಾಗ್ಯ ಮಾಯವಾಯಿತು. ಆ ಹೆಣ್ಣನ್ನು ವರಿಸಲು ಅನುಕೂಲವಾಗುವಂತ ರೂಪವನ್ನು ನೀಡು ಎಂದು ನಾರದ ನಾರಾಯಣನನ್ನೆ ಮೊರೆಹೊಕ್ಕ. ಆತ 'ನಿನಗೆ ಹಿತವಾದ ವರವನ್ನೇ ಕೊಡುತ್ತೇನೆ ಎಂದು ಆಶ್ವಾಸನೆ ನೀಡಿದ. ಆದರೆ ಮಾಯೆಯ ಪ್ರಭಾವದಿಂದ ನಾರದ ಹೆಣ್ಣಿನ ಕಣ್ಣಿಗೆ ಕೋಡಗದಂತೆ ಕಾಣಿಸಿದ. ಆ ವಧು; ವಿಶ್ವಮೋಹಿನಿ, ರಾಜನ ರೂಪಧರಿಸಿ ಬಂದಿದ್ದ ವಿಷ್ಣುವನ್ನೇ ವರಿಸಿದಳು. ನಾರದನಿಗೆ ಮುಖಭಂಗವಾಯಿತು. ಅಲ್ಲದೆ ಶಿವಗಣಗಳು "ಸ್ವಾಮಿ ನಿಮ್ಮ ಮುಖ ಕನ್ನಡಿಯಲ್ಲಿ ನೋಡಿಕೊಳ್ಳಿ" ಎಂದವು. ಈ ರೀತಿ ಶಿವಗಣಗಳು ಪರಿಹಾಸ್ಯ ಮಾಡಿದ್ದರಿಂದ ಅವರನ್ನು ಭೂಮಿಯಲ್ಲಿ ರಾಕ್ಷಸರಾಗಿ ಹುಟ್ಟಿ, ಎಂದು ಶಾಪವಿತ್ತ ಅವರೇ ರಾವಣ–ಕುಂಭಕರ್ಣರಾಗಿ ಹುಟ್ಟಿದರು. ನಂತರ ನಾರದ ಕನ್ನಡಿಯಲ್ಲಿ ನೋಡಿಕೊಂಡರೆ ಕೋಡಗ ಮುಖ. ಇಷ್ಟೆಲ್ಲ ಅನಾಹುತಕ್ಕೆ ವಿಷ್ಣುವೇ ಕಾರಣವೆಂದು, ನಾರದನಿಗೆ ಕೋಪ ಬಂತು. ವಿಷ್ಣುವನ್ನು ಮನಸಾರೆ ನಿಂದಿಸಲು ಹೋದರೆ, ತಾನು ಬಯಸಿದ್ದ ವಿಶ್ವಮೋಹಿನಿ ಅವನ ಪಕ್ಕದಲ್ಲೇ ಇದ್ದಳು. ನಾರದನಿಗೆ ಮತ್ತೂ ಕೋಪವೇರಿತು. "ಯಾವ ರಾಜನ ರೂಪ ಧರಿಸಿದ್ದೆಯೋ, ಆ ಮನುಷ್ಯನಾಗಿ ನೀನು ಹುಟ್ಟಿ ಬಾ. ನನಗೆ ಕೋಡಗದ ಮುಖಕೊಟ್ಟು ವಂಚಿಸಿದಕ್ಕಾಗಿ ಕೋಡಗದ ಸಹಾಯವನ್ನೇ ಪಡೆ" ಅಂದರೆ 'ನೀನು ಕಪಿಗಳ ಸಹಾಯ ಪಡೆಯುವಂತಾಗಲಿ' ಎಂದು ನಾರದರು ವಿಷ್ಣುವಿಗೆ ಶಾಪವಿತ್ತದ್ದರಿಂದ ರಾಮಾವಾತಾರಕ್ಕೆ ಮೊದಲನೆಯ ಕಾರಣ ಎನ್ನುತ್ತಾರೆ.

ಸ್ವಾಯಂಭುವ ಮನುವಿನ ಮಗನಾದ ಉತ್ತಾನಪಾದರಾಜನು ತಪಸ್ಸು ಮಾಡಿ ವಿಷ್ಣುವನ್ನು ಒಲಿಸಿಕೊಂಡನು. 'ನಿನ್ನ ಮಗನಾಗಿ ಹುಟ್ಟುವೆನೆಂಬ' ಆಶ್ವಾಸನೆಯನ್ನು ವಿಷ್ಣುವಿನಿಂದಲೇ ಪಡೆದನು. ಇದು ಎರಡನೆಯ ಕಾರಣ ಎನ್ನುತ್ತಾರೆ ಕವಿ. ಕಾಮರೂಪಿಗಳೂ, ಮಾಯಾವಿಗಳೂ, ದಯೆ, ದಾಕ್ಷಿಣ್ಯ, ಧರ್ಮ ಇವುಗಳು ಗೊತ್ತೇ ಇರದವರಾದ ರಾವಣ ಮತ್ತು ಅವನ ಸಹಚರರು ಭೂಲೋಕ, ಸುರಲೋಕಗಳೆಡೆಗೆ ದಾಳಿಯಿಟ್ಟು ಧೂಳೀಪಟ ಮಾಡಲಾರಂಭಿಸಿದರು. ಎಲ್ಲೆಡೆ ಅರಾಜಕತೆ ಉಂಟಾಯಿತು. ಇವರ ಉಪಟಳವನ್ನು ತಾಳಲಾರದೆ ಭೂದೇವಿ ಗೋವಿನ ರೂಪ ತಳೆದು ದೇವತೆಗಳೆಡೆಗೆ ಹೋದಳು. ದೇವತೆಗಳೆಲ್ಲರೂ ಒಟ್ಟಾಗಿ ಬ್ರಹ್ಮನ ಬಳಿಗೆ ಹೋದರು. ಬ್ರಹ್ಮ ಅವರನ್ನೆಲ್ಲ ವೈಕುಂಠಕ್ಕೆ ಕರೆದೊಯ್ದು, ಹೀಗೆ ಎಲ್ಲರೂ ಹೋಗಿ ವಿಷ್ಣುವನ್ನು ಪ್ರಾರ್ಥಿಸಿದ್ದರಿಂದ, ವಿಷ್ಣು ರಾಮನಾಗಿ ಭೂಲೋಕದಲ್ಲಿ ಹುಟ್ಟಿಬಂದ ಎನ್ನುತ್ತಾರೆ.

ಶಿವ ಭವಾನಿಗೆ ಹೇಳುತ್ತಾನೆ. "ಪ್ರಿಯೆ, ಹಿಂದೆ ವಿಷ್ಣುವಿನ ದ್ವಾರಪಾಲಕರಾಗಿದ್ದ ಜಯವಿಜಯರು ಸನಕಸನಂದನರ ಶಾಪದಿಂದ ಹಿರಣ್ಯಾಕ್ಷ, ಹಿರಣ್ಯಕಶಿಪುಗಳಾಗಿ ಜನಿಸಿ, ನರಸಿಂಹಾವತಾರ ತಳೆದ ವಿಷ್ಣುವಿನಿಂದ ಹತರಾದರು. ಅವರೆ ಎರಡನೇ ಜನ್ಮದಲ್ಲಿ ರಾವಣ–ಕುಂಭಕರ್ಣರಾಗಿ ಜನಿಸಿದರು. ಅವರನ್ನು ಕೊಲ್ಲಲು ಮನುಷ್ಯರೂಪವೇ ಬೇಕಾದ್ದರಿಂದ ವಿಷ್ಣುವು ಮನುಷ್ಯನಾಗಿ– ರಾಮನಾಗಿ ಜನ್ಮ ತಾಳಿದ್ದಾನೆ."

ಕಶ್ಯಪ ಅದಿತಿಗಳು ವಿಷ್ಣುವನ್ನು ಕುರಿತು ತಪಸ್ಸು ಮಾಡಿ; ಆ ಸರ್ವಶಕ್ತನೇ ತನ್ನ ಮಗನಾಗಿ ಹುಟ್ಟಬೇಕೆಂದು ಕೇಳಿಕೊಂಡಿದ್ದರು. ವಿಷ್ಣು ಆಗಲಿ ಎಂಬ ವರ ಕೊಟ್ಟಿದ್ದ. ಈಗ ಆ ದಂಪತಿಗಳೇ ದಶರಥ ಕೌಸಲ್ಯೆಯರಾಗಿ ಹುಟ್ಟಿದ್ದರು. ಅವರ ಸೂರ್ಯವಂಶದ ಕುಡಿಯಾಗಿ ಹುಟ್ಟಬರಲು ವಿಷ್ಣು ನಿರ್ಧರಿಸಿದ್ದು ಇನ್ನೊಂದು ಕಾರಣವೆನ್ನುತ್ತಾರೆ.

'ತುಲಸೀ ರಾಮಾಯಣವನ್ನು ಮೊದಲಿಗೆ ಶಿವನು ಉಮೆಗೆ ಹೇಳಿದ, ಅದನ್ನೇ ನಾನು ಬಾಲಭಾಷೆಯಲ್ಲಿ ಬರೆದೆ'ಎನ್ನುತ್ತಾರೆ ತುಲಸೀದಾಸರು. ಧನುರ್ಭಂಗ ಪ್ರಸಂಗದಲ್ಲಿ ರಾಮನನ್ನು ಈ ರೀತಿ ವರ್ಣಿಸುತ್ತಾರೆ. ಜನಕನ ಧನುರ್ಯಜ್ಞ ಆರಂಭವಾಯಿತು. ಆ ಸಭೆಗೆ ವಿಶ್ವಾಮಿತ್ರರೊಡನೆ ರಾಮ–ಲಕ್ಷ್ಮಣರು ಬಂದರು. ತುಂಬಿದ ಸಭೆ ಅವರನ್ನು ಗಮನಿಸಿತು. ಸಭೆಯಲ್ಲಿದ್ದ ಜನರಿಗೆ ರಾಮ ಕಂಡು ಬಂದ ಬಗೆ ಹೀಗಿದೆ–

**ದೇಖಹಿ ರೂಪ ಮಹಾ ರನಧೀರಾ। ಮನಹು ಬೀರ ರಸು ಧರೇ ಸರೀರಾ॥**
**ಡರೇ ಕುಟಿಲ ನೃಪ ಪ್ರಭುಹಿ ನಿಹಾರೀ। ಮನಹು ಭಯಾನಕ ಮೂರತಿ ಭಾರೀ॥**
**ರಹೇ ಅಸುರ ಛಲ ಛೋನಿಪ ಭೇಷಾ। ತಿನ್ಹ ಪ್ರಭು ಪ್ರಗಟ ಕಾಟಸಮ ದೇಖಾ॥**
**ಪುರಬಾಸಿನ್ಹ ದೇಖೇ ದೊಉ ಭಾಈ। ನರಭೂಷನ ಲೋಚನ ಸುಖದಾಈ॥**[೨]

(ಮಹಾ ರಣವೀರರಿಗೆ ಮೈವೆತ್ತ ವೀರರಸದಂತೆಯೂ, ಕುಟಿಲರಿಗೆ ಭಯಾನಕವಾಗಿಯೂ, ಅಸುರರಿಗೆ ಕಾಲನಂತೆಯೂ ಸ್ತ್ರೀಯರಿಗೆ ಶೃಂಗಾರದ ಪ್ರತಿರೂಪದಂತೆಯೂ ಯೋಗಿಗಳಿಗೆ ಶಾಂತ ಶುದ್ಧನಾಗಿಯೂ ರಾಮ ಆ ಕ್ಷಣದಲ್ಲಿ ಕಾಣಿಸಿಕೊಂಡ) ಈ ವರ್ಣನೆಯನ್ನು ಓದುವಾಗ ನಮ್ಮ ರೂಪಕ ಚಕ್ರವರ್ತಿ ಕುಮಾರವ್ಯಾಸ ನೆನಪಾಗುತ್ತಾನೆ. ಕುಮಾರವ್ಯಾಸ, ತುಲಸೀದಾಸ ಇವರಿಬ್ಬರೂ ಭಕ್ತಿಕವಿಗಳೇ.

ರಾವಣ, ಕುಂಭಕರ್ಣ, ವಿಭೀಷಣ ಈ ಮೂವರೂ ಬ್ರಹ್ಮ ಮತ್ತು ಶಿವನನ್ನು ಕುರಿತು ತಪಸ್ಸು ಮಾಡುತ್ತಾರೆ. ಮೊದಲು ರಾವಣನಿಗೆ ಬ್ರಹ್ಮ-ಶಿವರು ಪ್ರತ್ಯಕ್ಷವಾಗಿ ಬೇಕಾದ ವರವನ್ನು ಬೇಡು ಎಂದಾಗ ರಾವಣನು 'ನರ-ವಾನರ ಈ ಎರಡು ಜಾತಿ ಬಿಟ್ಟು ಬೇರೆಯಾರಿಂದಲೂ ನನಗೆ ಮರಣವಾಗದಂತೆ ವರವನ್ನು ಕರುಣಿಸು ಎಂದು ಬೇಡಿಕೊಂಡ. ನಂತರ ಬ್ರಹ್ಮನು ಕುಂಭಕರ್ಣನ ಬಳಿಗೆ ಹೋದನು. ಅವನನ್ನು ನೋಡಿ ಬ್ರಹ್ಮನಿಗೇ ಆಶ್ಚರ್ಯವಾಯಿತು. 'ಈ ದುಷ್ಟನು ನಿತ್ಯ ಉಂಡರೆ ಇಡೀ ಜಗತ್ತೇ ಹಾಳುಬಿದ್ದುಹೋದೀತು' ಹೀಗೆ ಯೋಚಿಸಿ ಅವನ ಬುದ್ಧಿಯು ವಿಕಲ್ಪವಾಗುವಂತೆ ಸರಸ್ವತಿಯನ್ನು ಪ್ರೇರೇಪಿಸಿದನು. ಅದರಂತೆ ಅವನು ವರ್ಷದಲ್ಲಿ ಆರು ತಿಂಗಳು ನಿದ್ದೆಯನ್ನು ಬೇಡಿದನು. ಬ್ರಹ್ಮನು ಷಣ್ಮಾಸಿಕ ನಿದ್ದೆಯ ವರವನ್ನು ಕರುಣಿಸಿದನು. ಆ ಬಳಿಕ ವಿಭೀಷಣನ ಬಳಿಗೆ ಹೋದಾಗ ಆತ 'ಭಗವಂತನ ಚರಣಕಮಲಗಳಲ್ಲಿ ಅನನ್ಯ ನಿಷ್ಕಾಮಭಕ್ತಿಯು ಇರುವಂತೆ ಕರುಣಿಸೆಂದು ಬೇಡಿದ.

ಅಯೋಧ್ಯೆಯಲ್ಲಿ ರಾಮನಿಗೆ ಪಟ್ಟಗಟ್ಟುವ ಉತ್ಸಾಹವಿದ್ದರೆ, ಅತ್ತ ಸ್ವರ್ಗದಲ್ಲಿ ದೇವತೆಗಳಿಗೆ ಅಯೋಧ್ಯೆಯಲ್ಲಿನ ಆನಂದೋತ್ಸವವನ್ನು ನೋಡಿ ಸಹಿಸಲಾಗಲಿಲ್ಲ ದೇವತೆಗಳೆಲ್ಲರೂ ಸರಸ್ವತಿ ದೇವಿಯನ್ನು ಬರಮಾಡಿಕೊಂಡು, ಆಕೆಯ ಕಾಲಿಗೆ ಬಿದ್ದು ಪದೇ ಪದೇ ವಿನಯದಿಂದ ಬೇಡಿಕೊಂಡರು. "ಅಮ್ಮಾ ನಮ್ಮ ಆಪತ್ತನ್ನು ನೋಡು, ಶ್ರೀರಾಮಚಂದ್ರನು ರಾಜ್ಯತ್ಯಾಗಗೈದು ಕಾಡಿಗೆ ಹೋಗುವಂತೆ ಮಾಡು. ಇದರಿಂದ ದೇವತೆಗಳ ಎಲ್ಲ ಕಾರ್ಯಗಳೂ ಸಿದ್ಧಿಸುತ್ತವೆ. ಸರಸ್ವತಿಯು ದೇವತೆಗಳ ಬಿನ್ನಹವನ್ನು ಆಲಿಸಿದಳು. ಅಯ್ಯೋ ಎಂದು ಮರುಗಿದಳು. ಹಾಗೆಯೇ ಮನಸ್ಸಿನಲ್ಲಿ 'ದೇವತೆಗಳು ಲಘುವಾದ ಬುದ್ಧಿಯನ್ನು ಹೊಂದಿರುವರು. ಅವರ ನಿವಾಸ ಮಾತ್ರ ಉನ್ನತವಾದದು, ಆದರೆ ಅವರ ಕೃತ್ಯಗಳು ಅಲ್ಪವಾದವುಗಳು. ಇತರರ ಉನ್ನತಿಯನ್ನು ಸಹಿಸಲಾರರು ಎಂದುಕೊಂಡಳು. ಮುಂದಿನದನ್ನು ನೆನೆದು ಪುನಃ ಯೋಚಿಸಿದಳು- "ಶ್ರೀರಾಮನು ಕಾಡಿಗೆ ಹೋಗುವುದರಿಂದ ರಾಕ್ಷಸರ ವಧೆಯಾಗುತ್ತದೆ. ಇದರಿಂದ ಜಗತ್ಕಲ್ಯಾಣವಾಗುತ್ತದೆ. ಚತುರಕವಿಗಳು ನನ್ನನ್ನು ಆಹ್ವಾನಿಸುವರು. ನಾನು ಎಲ್ಲರ ನಾಲಿಗೆಯನ್ನು ಸೇರಿ, ಶ್ರೀರಾಮನ ಚರಿತ್ರೆಯನ್ನು ತಿಳಿಸುವೆನು. ಇದರಿಂದ ನನ್ನ ಪ್ರತಿಷ್ಠೆ ಇಮ್ಮಡಿಗೊಂಡೀತು. ಈ ಪ್ರಕಾರ ಸರಸ್ವತಿಯು ಆಲೋಚಿಸಿ ಮನದಲ್ಲೇ ಹಿಗ್ಗಿ, ದುಃಸಹವಾದ ದುಃಖವನ್ನುಂಟು ಮಾಡುವ ಯಾವುದೋ ಒಂದು ಕೆಟ್ಟ ಗ್ರಹವು ಬರುವಂತೆ ಅಯೋಧ್ಯೆಗೆ ಬಂದಳು.

**ನಾಮು ಮಂಥರಾ ಮಂದಮತಿ ಚೇರೀ ಕೈಕಇ ಕೇರಿ।**

**ಅಜಸ ಪೆಟಾರೀ ತಾಹಿ ಕರಿ ಗಈ ಗಿರಾ ಮತಿ ಫೇರಿ॥**[೬]

ಭರತನ ತಾಯಿಯಾದ ಕೈಕೇಯಿಯ ಬಳಿ ಮಂಥರೆ ಎಂಬ ತಿಳಿಗೇಡಿ ದಾಸಿಯಿದ್ದಳು. ಸರಸ್ವತಿಯು ಅವಳ ಬುದ್ಧಿಯು ಭ್ರಂಶವಾಗುವಂತೆ ಮಾಡಿ, ಅವಳನ್ನು ಅಪಕೀರ್ತಿಗೆ ಗುರಿಯಾಗಿಸಿ ಹೊರಟುಹೋದಳು.

ಶ್ರೀರಾಮನನ್ನು ಅಯೋಧ್ಯೆಗೆ ಹಿಂದಿರುಗುವಂತೆ ಬೇಡಲು ಭರತ ತನ್ನ ಪರಿವಾರ ಸಮೇತನಾಗಿ ಬಂದ ಸಂದರ್ಭದಲ್ಲಿ, ಭರತನು ವಸಿಷ್ಠರನ್ನು ಕುರಿತು ಶ್ರೀರಾಮನೇ ಪಟ್ಟಕಟ್ಟಿಕೊಳ್ಳುವಂತೆ ಅದಕ್ಕೆ ಒಪ್ಪುವಂತೆ ಏನಾದರೊಂದು ಉಪಾಯವನ್ನು ಮಾಡಲೇಬೇಕು ಎನ್ನುತ್ತಾನೆ. ಅವನ ರಾಮಭಕ್ತಿಯನ್ನು ಕಂಡು ವಸಿಷ್ಠ ಒಂದು ಉಪಾಯವನ್ನು ಸೂಚಿಸುತ್ತಾನೆ. "ನೀವಿಬ್ಬರೂ (ಭರತ-ಶತ್ರುಘ್ನ) ವನವಾಸಕ್ಕೆ ಹೊರಡುವುದು; ಸೀತಾರಾಮಲಕ್ಷ್ಮಣರು ಮರಳಿ ಅಯೋಧ್ಯೆಗೆ ಹೋಗುವುದು" ಎಂದಾಗ ಇಬ್ಬರೂ ಸಂತೋಷದಿಂದ ಒಪ್ಪುತ್ತಾರೆ. ಭರತನಂತೂ ರಾಮ ಅಯೋಧ್ಯೆಗೆ ಹಿಂದಿರುಗುವುದಾದರೆ ಹದಿನಾಲ್ಕು ವರ್ಷವೇಕೆ ಜೀವನವಿಡೀ ವನವಾಸಕ್ಕೆ ನಾನು ಸಿದ್ಧ ಎನ್ನುತ್ತಾನೆ. ಭರತನ ಈ ಮಾತನ್ನು ವಸಿಷ್ಠ ಹಾಗೂ ಜನಕರು ರಾಮನ ಮುಂದಿಡುತ್ತಾರೆ. ನಂತರ ವಸಿಷ್ಠರು, 'ಮಗು ರಾಮಾ! ನಿನ್ನ ಆಜ್ಞೆಯಂತೆ ಎಲ್ಲರೂ ನಡೆಯಲಿ ಇದೇ ನನ್ನ ಅಭಿಪ್ರಾಯ' ಎನ್ನುತ್ತಾರೆ. ಅದಕ್ಕೆ ರಾಮನು ನೀವು ಮತ್ತು ಮಿಥಿಲೇಶರು ಇರುವಾಗ ನಿಮ್ಮ ಮಾತಿಗೆ ಎದುರು ಮಾತಾನಾಡಿದರೆ ಅನುಚಿತವಾದೀತು. ನಿಮ್ಮ ಆಜ್ಞೆಯೇ ಎಲ್ಲರಿಗೂ ಶಿರೋಧಾರ್ಯವಾಗುವುದು. ನಿಮ್ಮ ಆಜ್ಞೆಯನ್ನು ಶಪಥಪೂರ್ವಕ ಪಾಲಿಸುತ್ತೇನೆ ಎನ್ನುತ್ತಾನೆ. ಇದನ್ನು ಗಮನಿಸಿದ ದೇವತೆಗಳು; 'ಕೆಲಸ ಕೆಟ್ಟಿತಲ್ಲಾ ಎಂದು ಮತ್ತೆ ಸರಸ್ವತಿಯನ್ನು ಪ್ರಾರ್ಥಿಸಿ ಭರತನ ಬುದ್ಧಿಯನ್ನು ತಿರುಗುವಂತೆ ಮಾಡು; ಈ ಮೂಲಕ ದೇವಕುಲವನ್ನು ಕಾಪಾಡು ಎಂದು ವಿನಂತಿಸುತ್ತಾರೆ. ಈ ಸಲ ಸರಸ್ವತಿ ಇದಕ್ಕೆ ಸಮ್ಮತಿಸದೆ ಬ್ರಹ್ಮಲೋಕಕ್ಕೆ ಹೊರಟು ಹೋಗುತ್ತಾಳೆ. ದೇವತೆಗಳು ಚಿಂತೆಗೀಡಾಗುತ್ತಾರೆ. ರಾತ್ರಿಯೆಲ್ಲ ಯೋಚಿಸಿ ದೇವೇಂದ್ರನ ಮೂಲಕ ಇಡೀ ಅಯೋಧ್ಯೆಗೆ ಮಾಯಾಜಾಲವನ್ನು ಹರಡಿ ಅಯೋಧ್ಯೆಯ ಪ್ರಜೆಗಳಲ್ಲಿ ಭಯ, ಭ್ರಮೆ, ವಿರಕ್ತಿ ಉದ್ವೇಗವನ್ನು ಉಂಟುಮಾಡುತ್ತಾರೆ. ಆದರೆ ರಾಮನ ನಿರ್ಧಾರ ಮತ್ತು ಶಪಥವನ್ನು ಕೇಳಿ ಮುನೀಶ್ವರರೂ, ಜನಕನೂ, ಸಭಿಕರೆಲ್ಲರೂ ಸಂದಿಗ್ಧಾವಸ್ಥೆಯಲ್ಲಿ ಸಿಕ್ಕಿಕೊಂಡು ಸ್ತಂಭೀಭೂತರಾಗುತ್ತಾರೆ. ಇಡೀ ಸಭೆ ಸ್ತಂಭೀತವಾಗಿದ್ದನ್ನು ಕಂಡು ಭರತ ಧೈರ್ಯವನ್ನು ವಹಿಸಿ

ಇದೇನೊ ಕೆಟ್ಟ ಸಮಯವೆಂದು ಭಾವಿಸಿ ಎಲ್ಲರಿಗೂ ನಮಸ್ಕರಿಸಿ ಮಾತನಾಡುವ ಮುನ್ನ ಒಮ್ಮೆ ಸರಸ್ವತಿದೇವಿಯನ್ನು ಸ್ಮರಿಸುತ್ತಾನೆ. ಆ ಕೂಡಲೇ ಅವಳು ಅವನ ಮನಸ್ಸೆಂಬ ಮಾನಸಸರೋವರದಿಂದ ಇಳಿದು, ಅವನ ಮುಖಕಮಲದಲ್ಲಿ ವಿರಾಜಿಸಿದಳು. ಅಲ್ಲಿಗೆ ಮುಗಿಯಿತು. ಭರತನ ಮಾತುಗಳೇ ಬೇರೆಯಾದವು. ರಾಮನನ್ನು ಕುರಿತು, ನನ್ನಂತಹ ಅಪರಾಧಿಯು ಬೇರೆ ಯಾರೂ ಇರಲಾರರು ತಂದೆಯವರ ಆಜ್ಞೆಯನ್ನು ಉಲ್ಲಂಘಿಸಿ, ಮೋಹವಶನಾಗಿ ಪ್ರಜಾಜನರೊಂದಿಗೆ ಇಲ್ಲಿಗೆ ಬಂದಿರುವ ನನ್ನನ್ನು ಮನ್ನಿಸು. ನಿನ್ನ ಆಜ್ಞೆಯಂತೆ ನಡೆಯುವೆನು ಎಂದುಬಿಡುತ್ತಾನೆ.

ಈ ಮೇಲಿನ ಮೂರು ಪ್ರಸಂಗಗಳಲ್ಲಿ ಸರಸ್ವತಿಯ ಕೈವಾಡದಿಂದ ಇಡೀ ರಾಮಾಯಣ ಎಂತಹ ತಿರುವನ್ನು ಪಡೆಯುತ್ತದೆ ಎಂಬುದನ್ನು ಹೇಳಲೇಬೇಕಾಗಿಲ್ಲ. ತುಲಸೀದಾಸರು ಹೊಸದೇನನ್ನೂ ರಾಮಕಥೆಯಲ್ಲಿ ಹೇಳಲು ಹೋಗಲಿಲ್ಲ. ಹಳೆಯ ಕಥೆಯನ್ನೇ ಹೊಸ ರೀತಿ ಹೇಳಿದರು ಅಷ್ಟೆ. ಆ ರೀತಿ ಹೇಳುವಾಗ ಕೆಲವು ಅಂಶಗಳನ್ನು ಹೊಸದಾಗಿ ಕಲ್ಪಿಸಿಕೊಂಡರು.

ತುಲಸೀದಾಸರು ರಾವಣನ ಪಾತ್ರ ನಿರೂಪಣೆಯಲ್ಲಿ ಹೆಚ್ಚಿನ ಕುಶಲತೆಯನ್ನು ತೋರಿಸಿಲ್ಲ. ರಾವಣ ಇಲ್ಲಿ ನಿಜವಾದ ಸೀತೆಯನ್ನು ಅಪಹರಿಸುವುದಿಲ್ಲ. ಸೀತೆಯ ಛಾಯಾ ರೂಪವನ್ನೇ ನಿಜವಾದ ಸೀತೆಯೆಂದು ಭ್ರಮಿಸಿ ಅಪಹರಿಸಿಬಿಡುತ್ತಾನೆ. ರಾಮನೊಬ್ಬನಿಗೆ ಮಾತ್ರ ಈ ವಿಷಯ ಗೊತ್ತಿರುತ್ತದೆ. ಆತನೇ ಸೀತೆಯನ್ನು ಅಗ್ನಿಯಲ್ಲಿ ಬಚ್ಚಿಟ್ಟು ಸೀತೆಯ ಛಾಯಾರೂಪಕ್ಕೆ ಜೀವ ಕೊಟ್ಟಿರುತ್ತಾನೆ. ತುಲಸೀದಾಸರ ಕಾವ್ಯದಲ್ಲಿ ಲಕ್ಷ್ಮಣನ ಪಾತ್ರಕ್ಕಿಂತ ಭರತನ ಪಾತ್ರಕ್ಕೆ ಹೆಚ್ಚು ಮನ್ನಣೆ ಕೊಡಲಾಗಿದೆ.

**ತುಲಸೀದಾಸರ ಶ್ರೀರಾಮಚರಿತ ಮಾನಸ ಕೃತಿಯಿಂದ ಕನ್ನಡದ ಕವಿಗಳು ಪ್ರೇರಣೆ ಪ್ರಭಾವಗಳಿಗೆ ಒಳಗಾಗಿದ್ದಾರೆ ಎಂಬುದಕ್ಕೆ ಒಂದೆರಡು ಪ್ರಸಂಗಗಳನ್ನು ಇಲ್ಲಿ ಗಮನಿಸೋಣ.**

ಶಿವಧನುಸ್ಸು ಮುರಿಯಲು ರಾವಣ ಮತ್ತಿತರ ಅನೇಕ ರಾಜರು ಬಂದರು. ಆದರೆ ಧನಸ್ಸು ಎತ್ತಲು ಸಾಧ್ಯವಾಗದೆ ಸೋತು ಸುಣ್ಣವಾದರು. ದೇವದನುಜರೂ ಮನುಷ್ಯವೇಷ ಧರಿಸಿ ಧನುಸ್ಸೇರಿಸಲು ಬಂದರೂ ದಕ್ಕಲಿಲ್ಲ. ಆಗ ಜನಕ 'ಈ ಭೂಮಿ ವೀರಶೂನ್ಯವೆಂಬುದು ಅರ್ಥವಾಯಿತು ನನ್ನ ಮಗಳು ಕನ್ಯೆಯಾಗಿಯೇ ಉಳಿಯಲಿ ಎಂದುಬಿಟ್ಟ' ಆಗ ವಿಶ್ವಾಮಿತ್ರರು "ರಾಮ ಶಿವಧನುಸ್ಸು ಮುರಿದು ಜನಕನ

ದುಃಖವನ್ನು ದೂರಮಾಡು" ಎಂದು ಆಜ್ಞಾಪಿಸಿದರು. ಆಗ ಜನಕಪುರಿಯ ನಾರಿಯರು ದೇವರಲ್ಲಿ ಈ ರೀತಿ ಬೇಡುತ್ತಾರೆ.

**ಬಂದಿ ಪಿತರ ಸುರ ಸುಕೃತ ಸಂಭಾರೇ। ಜೌ ಕಛು ಪುನ್ಯ ಪ್ರಭಾಉ ಹಮಾರೇ॥**

**ತೌ ಸಿವಧನು ಮೃನಾಲ ಕೀ ನಾಈ। ತೋರಹು ರಾಮು ಗನೇಸ ಗೊಸಾಈ॥[7]**

("ಓ ಸ್ವಾಮಿ ಗಣಪತಿಯೇ। ನಮ್ಮ ಪೂರ್ವದ ಪುಣ್ಯಫಲ ಏನಾದರೂ ಇದ್ದರೆ ಶ್ರೀರಾಮನು ಶಿವಧನುಸ್ಸನ್ನು ಕಮಲದ ದಂಟಿನಂತೆ ಮುರಿದುಬಿಡಲಿ") ಹಾಗೆಯೇ ಸೀತೆಯು ಹೀಗೆ ಶಿವನಲ್ಲಿ ಪ್ರಾರ್ಥಿಸಿಕೊಳ್ಳುತ್ತಾಳೆ.

**ಮನಹೀ ಮನ ಮನಾವ ಅಕುಲಾನೀ। ಹೋಹು ಪ್ರಸನ್ನ ಮಹೇಸ ಭವಾನೀ**

**ಕರಹು ಸಫಲ ಆಪನಿ ಸೇವಕಾಈ। ಕರಿ ಹಿತು ಹರಹು ಚಾಪ ಗರುಆಈ॥**

**ಗನನಾಯಕ ಬರದಾಯಕ ದೇವಾ॥ ಆಜು ಲಗೇ ಕೀನ್ಹಿಉ ತುಅ ಸೇವಾ॥**

**ಬಾರ ಬಾರ ಬಿನತೀ ಸುನಿ ಮೋರಿ। ಕರಹು ಚಾಪ ಗುರುತಾ ಅತಿ ಥೋರೀ॥[8]**

ಕಂಡ ಕಂಡ ದೇವರಿಗೆಲ್ಲ ಕೈಮುಗಿದು, ಮನದಲ್ಲೇ ಹರಕೆ ಹೊತ್ತಿದ್ದ ಸೀತೆಯು "ಪಾರ್ವತೀ, ಪರಮೇಶ್ವರರೇ ನನಗೆ ಒಲಿಯಿರಿ ನಾನು ಮಾಡಿದ ಸೇವೆಗೆ ಪ್ರಸನ್ನರಾಗಿ, ನನ್ನ ಮೇಲೆ ಕೃಪೆಗೈದು ಶಿವಧನುಸ್ಸಿನ ಭಾರವನ್ನು ತಗ್ಗಿಸಿಬಿಡಿ. 'ಓಗಣನಾಯಕಾ। ವರದಾಯಕಾ। ಇಂದಿನ ದಿನದ ನಿರೀಕ್ಷೆಯಲ್ಲೇ ನಿನ್ನನ್ನು ನಾನು ಸೇವಿಸುತ್ತಾ ಬಂದಿರುವೆನು. ನನ್ನ ಪ್ರಾರ್ಥನೆಯನ್ನು ಮನ್ನಿಸಿ ಧನುಸ್ಸಿನ ಭಾರವನ್ನು ಹಗುರಮಾಡು"

ಹೀಗೆ ತುಲಸೀದಾಸರ ಕಾವ್ಯದಲ್ಲಿ ಧನುರ್ಯಜ್ಞ ಪ್ರಸಂಗದಲ್ಲಿ ಪುರನಾರಿಯರೂ, ಸೀತೆಯೂ "ರಾಮನಿಗೆ ಶಿವಧನುಸ್ಸು ಬಾಗಲಿ" ಎಂದು ದೇವತೆಗಳನ್ನು ಪ್ರಾರ್ಥಿಸಿಕೊಂಡರೆ ಕುವೆಂಪು ಅವರ ಕಾವ್ಯದಲ್ಲಿ ಸೀತೆಯೊಬ್ಬಳೇ ಪ್ರಾರ್ಥಿಸುವ ಪ್ರಸಂಗ ಇನ್ನೂ ಚೆನ್ನಾಗಿ ಮೂಡಿಬಂದಿದೆ. ಕುವೆಂಪು ಅವರ ಕಾವ್ಯದಲ್ಲಿ ತುಲಸೀದಾಸರ ಶಿವಧನುರ್ಭಂಗ ಪ್ರಸಂಗದ ಪ್ರಭಾವವಿರುವುದನ್ನು ಗಮನಿಸಬಹುದು. ಅದೇ ರೀತಿ ತುಲಸೀದಾಸರ 'ಶ್ರೀರಾಮಲಕ್ಷ್ಮಣರ ಪುಷ್ಪವಾಟಿಕಾ ಸಂದರ್ಶನ' ಎಂಬ ಭಾಗದಲ್ಲಿ ಸೀತೆಯು ಉದ್ಯಾನವನದಲ್ಲಿ ರಾಮನನ್ನು ಕಾಣುವ ಪ್ರಸಂಗವಿದೆ. ಕುವೆಂಪು ಅವರು ಈ ಪ್ರಸಂಗದಿಂದಲೂ ಪ್ರೇರಣೆಗೊಂಡಿದ್ದಾರೆ.

ಇನ್ನೊಂದು ಪ್ರಸಂಗ ಹೀಗಿದೆ. ವನವಾಸಕ್ಕೆ ಹೊರಟ ಸೀತಾರಾಮಲಕ್ಷ್ಮಣರು ಗಂಗಾನದಿಯ ದಡಕ್ಕೆ ಬರುತ್ತಾರೆ. ಅಲ್ಲಿ ಶೃಂಗಿಭೇರಿಪುರದ ನಿಷಾಧದೊರೆ ಗುಹ ರಾಮಾದಿಗಳಿಗೆ ಆತಿಥ್ಯ ನೀಡುತ್ತಾನೆ. ಸುಮಂತ್ರನನ್ನು ರಥ ಕುದುರೆಗಳೊಂದಿಗೆ ಅಯೋಧ್ಯೆಗೆ ಹಿಂದಿರುಗಲು ಹೇಳಿದ ರಾಮನು, ಗಂಗೆಯನ್ನು ದಾಟಲು ಅಂಬಿಗನಿಗೆ ದೋಣಿ ತರಲು ಹೇಳುತ್ತಾನೆ. ಆಗ ಅಂಬಿಗ ರಾಮನನ್ನು ಕುರಿತು ಹೇಳುವ ಮಾತುಗಳು ಇವು–

ಕಹಇ ತುಮ್ಹಾರ ಮರಮು ಮೈ ಜಾನಾ॥
ಚರನ ಕಮಲ ರಜ ಕಹು ಸಬು ಕಹಈ । ಮಾನುಷ ಕರನಿ ಮೂರಿ ಕಛು ಅಹಈ॥
ಛುಅತ ಸಿಲಾ ಭಇ ನಾರಿ ಸುಹಾಈ। ಪಾಹನ ತೇ ನ ಕಾಠ ಕಠಿನಾಈ॥
ತರನಿಉ ಮುನಿ ಘರಿನೀ ಹೊಇ ಜಾಈ। ಬಾಟ ಪರಇ ಮೊರಿ ನಾವ ಉಡಾಈ॥
ಎಹಿ ಪ್ರತಿಪಾಲಉ ಸಬು ಪರಿವಾರೂ। ನಹೀ ಜಾನಉ ಕಛು ಅಉರ ಕಬಾರೂ॥
ಜೌ ಪ್ರಭು ಪಾರ ಅವಸಿ ಗಾ ಚಹಹೂ। ಮೊಹಿ ಪದ ಪದುಮ ಪಖಾರನ ಕಹಹೂ॥[೯]

ಇದೇ ಪ್ರಸಂಗವನ್ನು ಮೊಯಿಲಿಯವರು ತಮ್ಮ ಕಾವ್ಯದಲ್ಲಿ ಯಥಾವತ್ತಾಗಿ ಹೀಗೆ ಬಳಸಿದ್ದಾರೆ. ವ್ಯತ್ಯಾಸವೆಂದರೆ ಶ್ರೀರಾಮಮಾನಸ ಚರಿತದಲ್ಲಿ ಯಾರೋ ಅಂಬಿಗ ನದಿ ದಾಟಿಸಿದರೆ ಮೊಯಿಲಿಯವರ ಕಾವ್ಯದಲ್ಲಿ ನಿಷಾದದೊರೆ ಗುಹನೇ ನದಿ ದಾಟಿಸುತ್ತಾನೆ. ಹಾಗೆ ದಾಟಿಸುವ ಮುನ್ನ ಗುಹ ಹೇಳುವ ಈ ಮಾತುಗಳು

"ನಿಲ್ಲುನಿಲ್ಲೆಲೆ ದೊರೆಯೆ.
ಬಡವನಾ ನಾವೆಯಿದು, ಮುಟ್ಟದಿರು ಪಾದದಲಿ.
ಪಾದಧೂಳಿಯ ಗುಣವ ನಾನೆಂತು ಬಣ್ಣಿಸಲಿ
ಶಿಲೆಯೆ ಬಾಲೆಯಾಗಿತ್ತೆಂದೆಲ್ಲರೂ ಪೇಳುವರು
ಮರದ ನಾವೆಯು ಮೃದುವು, ನಾನಾರ ಮರೆಹೊಗಲಿ!
ದೋಣಿ ಪೆಣ್ಣಾದೊಡೇಗಯ್ಯಲಿ, ಮನೆಯೊಳಗೆ
ಮಡದಿಯಿಹಳು. ಇರ್ಪೆಂಡಿರಾದೊಡೆಂತು ಬಾಳ್ವೆ;
ಜೀವನಾಧಾರವೆನಿಸಿಹ ನಾವೆಯೂ ಇಲ್ಲದಿರೆ।"[೧೦]
ಎಂದು ಪೇಳಿದನು ಗುಹನು.

ಅ) ವಿಮಲಸೂರಿಯ 'ಪಉಮಚರಿಯ' ಕಥಾ ಸ್ವರೂಪ:-

ಗೌತಮಗಣಧರರು ಮಹಾವೀರ ತೀರ್ಥಂಕರನ ಸಮವಸರಣದಲ್ಲಿ ಈ ರಾಮಕಥೆಯನ್ನು ಮಗಧ ರಾಜ್ಯದ ಅಧಿಪತಿಯಾದ ಸಾಮ್ರಾಟ್ ಶ್ರೇಣಿಕ ಮಹಾರಾಜನಿಗೆ ವಿವರಿಸಿದಂತಿದೆ. ಕಾವ್ಯದ ಪ್ರಾರಂಭದಲ್ಲಿಯೇ ಅಯೋಧ್ಯೆಯ ಇಕ್ಷ್ವಾಕು ವಂಶದ ಬಗ್ಗೆ ಸೂಚಿತವಾದರೂ ಕಥೆ ಯಾವ ಯಾವ ದೇಶದ ರಾಜರಿಗೋ ತಳುಕುಹಾಕಿಕೊಂಡು, ವಿದ್ಯಾಧರ ವಂಶವನ್ನು ವರ್ಣಿಸಿಕೊಂಡು ಹೋಗುತ್ತದೆ. ಇನ್ನು ರಘುವಂಶ ಪ್ರಾರಂಭವಾಗುವುದೇ ರಾಕ್ಷಸ ವಂಶದ ವರ್ಣನೆಯ ನಂತರ. ಇಲ್ಲಿಯ ರಾವಣನ ಪಾತ್ರ ವೈದಿಕ ಪರಂಪರೆಯ ರಾಮಾಯಣಗಳಿಗಿಂತ ತೀರಿ ಭಿನ್ನವಾಗಿ ಚಿತ್ರಿತವಾಗಿದೆ. ಆದ್ದರಿಂದ ವಿಮಲಸೂರಿಯ ಕಾವ್ಯದಲ್ಲಿ ರಾಮಕಥೆಗೆ ಸಂಬಂಧಪಟ್ಟ ಮುಖ್ಯ ಅಂಶಗಳನ್ನು ಮಾತ್ರ ಇಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

ರಾಕ್ಷಸ ವಂಶದ ರತ್ನಶ್ರವ ಹಾಗೂ ಕೇಕಸಿಯರಿಗೆ ರಾವಣ, ಭಾನುಕರ್ಣ, ವಿಭೀಷಣ ಮತ್ತು ಚಂದ್ರನಖಾ ಎಂಬ ನಾಲ್ವರು ಮಕ್ಕಳು. ಇಲ್ಲಿನ ರಾವಣನಿಗೆ ಹತ್ತು ತಲೆಗಳಿಲ್ಲ. ಆತ ಕೊರಳಲ್ಲಿ ಧರಿಸಿದ್ದ ರತ್ನಹಾರದಲ್ಲಿನ ನವರತ್ನಗಳಲ್ಲಿ ಶಿಶುರಾವಣನ ಮುಖದ ಒಂಬತ್ತು ಪ್ರತಿಬಿಂಬಗಳು ಪ್ರಜ್ವಲಿಸಿದ್ದರಿಂದ ದಶಾನನಾದ. ಅಂಥ ರಾವಣನು ತನ್ನ ದಾಯಾದಿಯಾದ ವೈಶ್ರವಣನಂತೆ (ವೈದಿಕ ರಾಮಾಯಣದಲ್ಲಿನ ಕುಬೇರ) ತಾನೂ ಆಗಬೇಕೆಂದು ಅನೇಕ ಮಂತ್ರ ವಿದ್ಯೆಗಳನ್ನು ಸಂಪಾದಿಸಿದ. ಮಂಡೋದರಿ ಹಾಗೂ ಇತರ ಆರು ಸಾವಿರ ವಿದ್ಯಾಧರ ಕನ್ಯೆಯರೊಡನೆ ಮದುವೆಯಾಗಿ ವೈಶ್ರವಣನನ್ನು ಗೆದ್ದು ಲಂಕೆಯನ್ನು ಪ್ರವೇಶಿಸಿದ.

ಕಿಷ್ಕಿಂಧೆಯ ಅರಸನಾದ ವಾಲಿ; ಮತ್ತವನ ತಮ್ಮ ಸುಗ್ರೀವರಿಗೆ, ಶ್ರೀಪ್ರಭೆಯೆಂಬ ಒಬ್ಬಳು ತಂಗಿಯಿದ್ದಳು. ರಾವಣನು ಅರಸನಾದ ವಾಲಿಗೆ 'ನಿನ್ನ ತಂಗಿಯಾದ ಶ್ರೀಪ್ರಭೆಯನ್ನು ತನಗೆ ಕೊಟ್ಟು ಲಗ್ನ ಮಾಡಿ ತನ್ನ ಪ್ರಭುತ್ವವನ್ನು ಒಪ್ಪಿಕೊಳ್ಳಬೇಕೆಂದು' ದೂತನನ್ನು ಕಳುಹಿಸಿ ಕೇಳುತ್ತಾನೆ. ವಾಲಿಯು ಜಿನನನ್ನಲ್ಲದೆ ಅನ್ಯರಿಗೆ ತಲೆಬಾಗುವುದಿಲ್ಲವೆನ್ನುತ್ತಾನೆ. ರಾವಣ ಯುದ್ಧ ಸಾರುತ್ತಾನೆ. ವಾಲಿ ಸೋತು ರಾಜ್ಯ ಪದವಿಯನ್ನು ತಮ್ಮ ಸುಗ್ರೀವನಿಗೆ ವಹಿಸಿ ತಾನು ಸಂನ್ಯಾಸ ಸ್ವೀಕರಿಸುತ್ತಾನೆ. ಸುಗ್ರೀವನು ತನ್ನ ತಂಗಿ ಶ್ರೀಪ್ರಭೆಯನ್ನು ರಾವಣನಿಗೆ ವೈಭವದಿಂದ ಧಾರೆಯೆರೆದುಕೊಟ್ಟು ಅವನ ಪ್ರಭುತ್ವವನ್ನು ಒಪ್ಪಿಕೊಳ್ಳುತ್ತಾನೆ.

ಒಮ್ಮೆ ರಾವಣನು ನರ್ಮದಾ ನದಿಯ ಪವಿತ್ರ ಪರಿಸರದಲ್ಲಿ ಕುಳಿತು ಜಿನಮೂರ್ತಿಯನ್ನು ಪೂಜಿಸುತ್ತಿರುತ್ತಾನೆ. ಅದೇ ನದಿಗೆ ಜಲಕೇಳಿಗೆಂದು ಬಂದಿದ್ದ ಸಹಸ್ರಕಿರಣನು, ಒಡ್ಡುಕಟ್ಟಿ ತಡೆಹಿಡಿದಿದ್ದ ಜಲರಾಶಿಯನ್ನು ಒಮ್ಮೆಗೇ ಬಿಟ್ಟಿದ್ದರಿಂದ ರಾವಣನ ಪೂಜೆಗೆ ಭಂಗವಾಗುತ್ತದೆ. ಕೋಪಗೊಂಡ ರಾವಣ 'ಸಹಸ್ರಕಿರಣ'ನನ್ನು ಸೋಲಿಸಿ ಸೆರೆ ಹಿಡಿಯುತ್ತಾನೆ. ನಂತರ ಆತನ ತಂದೆ 'ಶತಬಾಹು'ವಿನ ಕೋರಿಕೆಯ ಮೇರೆಗೆ ಸಹಸ್ರಕಿರಣನನ್ನು ಬಂಧಮುಕ್ತಗೊಳಿಸುತ್ತಾನೆ.

ಒಮ್ಮೆ ರಾಜಪುರದ ಅರಸು ಮರುತ್ತನು, ಪ್ರಾಣಹಿಂಸಾಮಯ ಯಜ್ಞಕರ್ಮದಲ್ಲಿ ನಿರತನಾದಾಗ, ನಾರದನು ಅದನ್ನು ವಿರೋಧಿಸುತ್ತಾನೆ. ಅದಕ್ಕೆ ಮರುತ್ತನ ಕಡೆಯ ಜನ ನಾರದನಿಗೆ ಹೊಡೆಯಲಾರಂಭಿಸುತ್ತಾರೆ. ಆಗ ರಾವಣ ಅಹಿಂಸಾಧರ್ಮಧ್ವಜವನ್ನು ಎತ್ತಿಹಿಡಿದು, ತನ್ನ ಸೇನೆಯೊಡನೆ ಯಜ್ಞಭೂಮಿಗೆ ಬಂದು ನಾರದನನ್ನು ಕಾಪಾಡುವನು. ಮರುತ್ತನು ತನ್ನ ತಪ್ಪನ್ನು ಒಪ್ಪಿಕೊಂಡು ತನ್ನ ಮಗಳು 'ಕನಕಪ್ರಭೆ'ಯನ್ನು ರಾವಣನಿಗೆ ಕೊಟ್ಟು ಮದುವೆ ಮಾಡುವನು.

ರಾವಣನು ಜಿನಪೂಜೆಗೆಂದು 'ಅಷ್ಟಾಪದ' ಪರ್ವತಕ್ಕೆ ಹೋಗಿದ್ದಾಗ; ದುರ್ಲಂಘ್ಯಪುರದ ದೊರೆ ನಳಕೂಬರನು, ಅವನ ಘನತೆಗೆ ತಕ್ಕಂತೆ ನಡೆದುಕೊಳ್ಳುವುದಿಲ್ಲ. ಪರಿಣಾಮವಾಗಿ ಅವರೀರ್ವರಲ್ಲಿ ಯುದ್ಧಘಟಿಸಿತು. ಆದರೆ ನಳಕೂಬರನ ರಾಜಧಾನಿ ದುರ್ಲಂಘ್ಯಪುರ ಹೆಸರಿಗೆ ತಕ್ಕಂತಿತ್ತು. ಮಹಾಪರಾಕ್ರಮಿಯಾದ ರಾವಣನಿಗೆ ಆ ಕೋಟೆಯನ್ನು ಭೇದಿಸಲಾಗಲಿಲ್ಲ. ಇನ್ನು ಅವನನ್ನು ಸೋಲಿಸುವುದೆಂತು? ಆದರೆ ನಳಕೂಬರನ ಮಡದಿ ಮಹಾರಾಣಿ ಅಪ್ರತಿಮಸುಂದರಿಯಾದ ಉಪರಂಭೆಯು, ರಾವಣನ ಗುಣವಿಶೇಷಣಗಳನ್ನು ಕೇಳಿ ಎಂದೋ ಮೋಹಿತಳಾಗಿದ್ದಳು. ಈಗ ರಾವಣನನ್ನು ಸೇರಲು ಕಾತರಿಸಿ ಅವನ ದರ್ಶನಾಕಾಂಕ್ಷಿಯಾಗಿ ತನ್ನ ದಾಸಿಯಾದ 'ಚಿತ್ರಮಾಲೆ'ಯ ಮುಖಾಂತರ ತನ್ನನ್ನು ಸ್ವೀಕರಿಸಬೇಕೆಂದು ಹೇಳಿ ಕಳುಹಿಸುತ್ತಾಳೆ. ಇಂಥ ಪಾಪಕಾರ್ಯಕ್ಕೆ ರಾವಣ ಒಪ್ಪುವುದಿಲ್ಲ. ಅದರೆ ದುರ್ಲಂಘ್ಯಪುರದ ಕೋಟೆಯನ್ನು ಪ್ರವೇಶಿಸುವ 'ಆಶಾಲಿಕಾ' ಎಂಬ ವಿದ್ಯಾರಹಸ್ಯವು ಉಪರಂಭೆಗೆ ಗೊತ್ತಿರುವುದರಿಂದ; ಅದನ್ನು ತಿಳಿಯಲು ಅವಳ ಬೇಡಿಕೆಯನ್ನು ತಾತ್ಕಾಲಿಕವಾಗಿ ಒಪ್ಪುವಂತೆ, ನಟಿಸಬೇಕೆಂದು ರಾಜಕಾರಣತಜ್ಞನಾದ ಮಂತ್ರಿಯು ಸಲಹೆ ನೀಡುತ್ತಾನೆ. ರಾವಣ; ದುರ್ಲಂಘ್ಯಪುರವನ್ನು ಪ್ರವೇಶಿಸಿ, ನಳಕೂಬರನನ್ನು ಸೋಲಿಸಿ ಸೆರೆಹಿಡಿಯುತ್ತಾನೆ. ಆದರೂ ತಾನು ಕಾಮುಕನಾಗದೆ 'ಆಶಾಲಿಕಾ' ಎಂಬ ವಿದ್ಯೆಯನ್ನು ಕಲಿಸಿದ್ದರಿಂದ ತನ್ನ ಗುರು ಸಮಾನಳೆಂದು

ಉಪರಂಭೆಗೆ ತಿಳಿಹೇಳಿ, ಅವಳ ಪತಿಯನ್ನು ಬಂಧಮುಕ್ತನನ್ನಾಗಿ ಮಾಡಿ ರಾಜ್ಯವನ್ನು ಮರಳಿ ಅವನಿಗೇ ಒಪ್ಪಿಸುವನು. ಉಪರಂಭೆಯ ಪ್ರಸಂಗವಂತೂ ರಾವಣನ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತಿದೆ. ನಂತರ ರಾವಣ, ರಥನೂಪುರದ ವಿದ್ಯಾಧರನಾದ ದೊರೆ ಇಂದ್ರನ ಮೇಲೆ ಯುದ್ಧ ಸಾರುತ್ತಾನೆ. ಇಂದ್ರನ ತಂದೆ ಸಹಸ್ರಾರನು ರಾವಣನೊಡನೆ ಯುದ್ಧ ಬೇಡ ಬೇಗ ಒಪ್ಪಂದ ಮಾಡಿಕೊ ಎಂದು ಬುದ್ಧಿವಾದ ಹೇಳಿದರೂ ಕೇಳದೆ ಯುದ್ಧಮಾಡಿ ಸೋಲುತ್ತಾನೆ. ರಾವಣ, ಇಂದ್ರ ಮತ್ತು ಅವನ ಪಕ್ಷದವರು ದಿನನಿತ್ಯ ಲಂಕೆಗೆ ಬಂದು ನಗರಿಯನ್ನು ಸ್ವಚ್ಛಗೊಳಿಸಬೇಕು ಎಂಬ ನಿರ್ಬಂಧದ ಮೇರೆಗೆ ರಾಜ್ಯವನ್ನು ಅವನಿಗೆ ಹಿಂತಿರುಗಿಸುತ್ತಾನೆ.

ರಾವಣನು ಒಂದು ದಿನ ಜಿನದರ್ಶನಕ್ಕೆಂದು ಮೇರು ಪರ್ವತಕ್ಕೆ ಹೋಗಿದ್ದಾಗ ಕೇವಲಜ್ಞಾನಿಗಳಾದ ಅನಂತವೀರ್ಯ ಮಹಾಮುನಿಗಳ ದರ್ಶನಲಾಭವಾಗುತ್ತದೆ. ರಾವಣ ಅವರಿಂದ ಪರಾಂಗನ ವಿರತಿ ವ್ರತವನ್ನು ಕೈಗೊಳ್ಳುತ್ತಾನೆ. ಇಲ್ಲಿನ ರಾವಣ ಜಿನಭಕ್ತ, ಅಹಿಂಸಾಪರ, ದಯಾನಿಧಿ, ಅನ್ಯಸ್ತ್ರೀಯನ್ನು ಕಣ್ಣೆತ್ತಿನೋಡದವ, ಸಾಲದ್ದಕ್ಕೆ ಅಪ್ರತಿಮ ಮಹಾವೀರ. ವಾಲ್ಮೀಕಿ ರಾಮಾಯಣದಲ್ಲಿನ ರಾಕ್ಷಸ ಪ್ರವೃತ್ತಿಯ ದುಷ್ಟರಾವಣನಿಗಿಂತ ತೀರ ಭಿನ್ನನಾದ ರಾವಣ. ಈ ರೀತಿ ರಾವಣನಿಗೆ ಸಂಬಂಧಿಸಿದ ಸಂಗತಿಗಳೆಲ್ಲ ವಾಲ್ಮೀಕಿ ರಾಮಾಯಣಕ್ಕಿಂತ ಭಿನ್ನವಾಗಿವೆ.

ಇಂಥ ಸದ್ಗುಣಿ ರಾವಣನಾದರೂ ಆತ ಬಹುಪತ್ನೀಯುತನಾದವನು ಎನ್ನುವ ಕಾರಣದಿಂದ ಮಹೇಂದ್ರಪುರದರಸು ಮಹೇಂದ್ರನು; ತನ್ನ ಸುಪುತ್ರಿ 'ಅಂಜನಾ' ಎಂಬ ತ್ರಿಲೋಕ ಸುಂದರಿಯನ್ನು, ಆಧಿತ್ಯಪುರದರಸು ಪ್ರಹ್ಲಾದನ ಮಗ ಪವನಂಜಯನಿಗೆ ಕೊಟ್ಟು ಮದುವೆ ಮಾಡುತ್ತಾನೆ. ಸತಿಪತಿಯರಾದ ಅಂಜನಾ-ಪವನಂಜಯರು ಮದುವೆಯಾದಂದಿನಿಂದ ಅಖಂಡ ಇಪ್ಪತ್ತೈದು ವರ್ಷಗಳವರೆಗೆ ಒಂದಾಗಿ ಸೇರುವುದಿಲ್ಲ. ಪವನಂಜಯ ತನ್ನ ಪತ್ನಿಯ ಬಗ್ಗೆ ತಳೆದ ತಪ್ಪು ಕಲ್ಪನೆಯೇ ಅದಕ್ಕೆ ಕಾರಣವಾಗಿರುತ್ತದೆ. ಪಾತಾಳ ನಗರದ ವರುಣನ ಮಕ್ಕಳು ಖರದೂಷಣರನ್ನು ಸೆರೆಹಿಡಿದಾಗ ಅವರನ್ನು ಬಿಡಿಸುವಂತೆ ರಾವಣ ಪ್ರಹ್ಲಾದನಿಗೆ ಹೇಳಿ ಕಳುಹಿಸುತ್ತಾನೆ. ಆಗ ಅವನ ಮಗ ಪವನಂಜಯನೇ ಯುದ್ಧಕ್ಕೆ ಹೊರಟು ಮಾನಸ ಸರೋವರದ ತೀರದಲ್ಲಿ ಬೀಡು ಬಿಡುತ್ತಾನೆ. ಅಲ್ಲಿನ ಹೆಮ್ಮರವೊಂದರಲ್ಲಿ ಪತಿವಿರಹದಿಂದ ಪರಿತಪಿಸುತ್ತಿರುವ ಶೋಕಿತ ಚಕೋರಿಯೊಂದನ್ನು ಕಂಡು, ತನ್ನ ಸತಿ ಅಂಜನಾದೇವಿಯ ವಿರಹವನ್ನು ಕಲ್ಪಿಸಿಕೊಂಡು; ತನ್ನ ತಪ್ಪು ಕಲ್ಪನೆಯನ್ನು ಕಳೆದುಕೊಂಡು

ಅವಳೆಡೆಗೆ ಧಾವಿಸಿ ತನ್ನ ಪ್ರೇಮದ ಪ್ರತೀಕವೆಂದು ಮುದ್ರೆಯುಂಗುರವನ್ನು ಅವಳಿಗಿತ್ತು, ಆ ರಾತ್ರಿ ಅವಳೊಡನಿದ್ದು ಮತ್ತೆ ಯುದ್ಧಕ್ಕೆ ಹೊರಟು ಹೋಗುತ್ತಾನೆ. ಈ ಸಂಗತಿ ಅವರಿಬ್ಬರನ್ನುಳಿದು ಯಾರಿಗೂ ಗೊತ್ತಾಗುವುದಿಲ್ಲ. ಅಂಜನಾದೇವಿ ಗರ್ಭವತಿಯಾದಳು. ಅವಳ ತಂದೆ ತಾಯಿಗಳೇ ನಿಜ ಪರಿಸ್ಥಿತಿಯನ್ನು ಅರಿಯಲೆತ್ನಿಸದೆ ಅವಳನ್ನು ವ್ಯಭಿಚಾರದ ಆರೋಪದ ಮೇಲೆ ಹೊರ ಹಾಕಿದರು. ಆಕೆ ತನ್ನ ಗೆಳತಿ 'ವಸಂತಮಾಲೆ'ಯೊಡನೆ ಅರಣ್ಯ ಸೇರಿ ಅಲ್ಲಿನ ಗುಹೆಯೊಂದರಲ್ಲಿ ಗಂಡು ಮಗುವಿಗೆ ಜನ್ಮವಿತ್ತಳು. ಅಂಜನಾದೇವಿ ಆ ಮಗುವಿಗಿಟ್ಟ ಹೆಸರೇ 'ಶ್ರೀಶೈಲ'. ಆ ಮಗನೇ ವಜ್ರದೇಹಿಯಾದ ಹನುಮಾನ್.

ಹನುಮಾನ್ ಹರೆಯಕ್ಕೆ ಬಂದಾಗ 'ರಸಾತಲ' ಪಟ್ಟಣದ ವರುಣನ ವಿರುದ್ಧ ಯುದ್ಧದಲ್ಲಿ ರಾವಣನಿಗೆ ನೆರವಾಗಿದ್ದರಿಂದ, ರಾವಣ ಹನುಮಾನನಿಗೆ ಚಂದ್ರನಖೆಯ ಸುಪುತ್ರಿ 'ಅನಂಗಕುಸುಮೆ' ಯನ್ನು ಕೊಟ್ಟು ಮದುವೆ ಮಾಡಿ ಸನ್ಮಾನಗಳನ್ನಿತ್ತು ಗೌರವಿಸುತ್ತಾನೆ. ಸುಗ್ರೀವನೂ ತನ್ನ ಮಗಳಾದ 'ಪದ್ಮರಾಗ'ಳನ್ನು ಹನುಮಾನನಿಗೆ ಕೊಟ್ಟು ಮದುವೆ ಮಾಡುತ್ತಾನೆ. ಈ ರೀತಿಯಲ್ಲಿ ಹನುಮಾನನಿಗೆ ರಾವಣ ಸಂಬಂಧಿ. ಇಲ್ಲಿನ ಹನುಮಾನ್ ಸುಗ್ರೀವನ ಸೇವಕನಲ್ಲ, ಸ್ವತಂತ್ರ, ವಿದ್ಯಾಧರಜಾತಿಯ ದೊರೆ.

ದಶರಥನ ಇಕ್ಷ್ವಾಕುವಂಶವನ್ನೂ ಜನಕರಾಜನ ಹರಿವಂಶವನ್ನೂ ಕವಿಯು ವರ್ಣಿಸುವ ಬಗೆ ಹೀಗಿದೆ. ದಶರಥನು ಸುಕೋಶಲರಾಜನ ಪುತ್ರಿ ಅಪರಾಜಿತೆ (ಕೌಸಲ್ಯೆ)ಯನ್ನೂ ಸುಬಂಧುತಿಲಕ ರಾಜನ ಮಗಳು ಸುಮಿತ್ರಾ ಎಂಬುವವಳನ್ನೂ ಮದುವೆಯಾದನು. ನಂತರ ಕೌತುಕಮಂಗಲದ ದೊರೆ ಶುಭಮತಿಯ ಮಗಳಾದ ಕೈಕೆಯನ್ನು ಸ್ವಯಂವರದಲ್ಲಿ ವರಿಸಿದನು.

ದಶರಥನ ಮಗನು ಜನಕನ ಮಗಳನ್ನು ಮದುವೆಯಾದ ನಂತರ ತಮ್ಮನ್ನು ಸಂಹರಿಸುವನೆಂದು ರಾವಣ–ವಿಭೀಷಣರಿಗೆ ಒಬ್ಬ ನಿಮಿತ್ತ–ಜ್ಞಾನಿಯಿಂದ ಮೊದಲೇ ತಿಳಿದಿದ್ದಿತು. ಮುಂದೊದಗುವ ವಿಪತ್ತಿಗೆ ಪರಿಹಾರವೆಂದು ವಿಭೀಷಣನು ದಶರಥ–ಜನಕರಿಬ್ಬರನ್ನೂ ಮಕ್ಕಳಾಗುವ ಮುನ್ನವೇ ಕೊಲ್ಲಬೇಕೆಂದು ಯೋಜಿಸಿದನು. ಆದರೆ ಇದನ್ನು ನಾರದನು ಅವರಿಬ್ಬರ ಮಂತ್ರಿಗಳಿಗೆ ತಿಳಿಸಿದ. ಅವರು ಹಂಚಿಕೆಯಂತೆ ದಶರಥ–ಜನಕರನ್ನು ಹೋಲುವ ಮೇಣದ ಮೂರ್ತಿಗಳನ್ನು ಅವರವರ ಹಾಸಿಗೆಗಳಲ್ಲಿರಿಸಿದರು. ದಶರಥ ಜನಕರಿಬ್ಬರೂ ತಲೆತಪ್ಪಿಸಿಕೊಂಡು ಅಜ್ಞಾತವಾಸದಲ್ಲಿ

ಅಲೆದಾಡಿದರು. ವಿಭೀಷಣನು ಆ ಮೆಣದ ಮೂರ್ತಿಗಳ ಶಿರಗಳನ್ನೇ ನಿಜಶಿರಗಳೆಂದು ಭ್ರಮೆಯಿಂದ ಕತ್ತರಿಸಿ ನಿಶ್ಚಿಂತನಾದನು. ನಂತರ ದಶರಥ–ಜನಕರು ನಿರಾತಂಕವಾಗಿ ತಮ್ಮ ತಮ್ಮ ನಾಡಿಗೆ ಮರಳಿದರು. ವಾಲ್ಮೀಕಿ ರಾಮಾಯಣದಲ್ಲಿ ಈ ಪ್ರಸಂಗವಿಲ್ಲ. ಅಪರಾಜಿತೆಯು ವಿಕಸಿತ ದರಹಸಿತ ಪದ್ಮದಂತೆ ಮುಖವುಳ್ಳ ಮಗನನ್ನು ಹೆತ್ತಳು. ಅಂತೆಯೇ ಆ ಶಿಶುವಿಗೆ 'ಪದ್ಮ' ಎಂದು ಹೆಸರಿಟ್ಟರು (ವೈದಿಕ ರಾಮಾಯಣದ ರಾಮನೇ ಇಲ್ಲಿನ ಪದ್ಮ). ಸುಮಿತ್ರೆಯು ಸುಲಕ್ಷಣ ಸಂಪನ್ನನಾದ ಲಕ್ಷ್ಮಣನನ್ನು ಹಡೆದಳು. ಕೈಕೇಯಿಯು ಭರತಕುಮಾರ ಶತ್ರುಘ್ನರಿಗೆ ಜನ್ಮವಿತ್ತಳು. ನಾಲ್ವರು ಕುಮಾರರು ಯುದ್ಧಶಾಸ್ತ್ರದಲ್ಲಿಯೂ ಕಲಾಶಾಸ್ತ್ರದಲ್ಲಿಯೂ ಶಿಕ್ಷಣ ಪಡೆದು ಪರಿಣತಿಯನ್ನು ಹೊಂದಿದರು.

ಜನಕರಾಜನಿಗೆ ಸೀತಾ ಸಿಕ್ಕ ಮಗಳಲ್ಲ ಇಲ್ಲಿ. ಸೀತಾ ಮತ್ತು ಭಾಮಂಡಲ ಎಂಬ ಇಬ್ಬರು ಅವಳಿಮಕ್ಕಳು. ಆದರೆ ಪೂರ್ವಜನ್ಮದ ವೈರದ ಮೂಲಕ ಅಸುರನೋರ್ವನು ಭಾಮಂಡಲನು ಹುಟ್ಟಿದೊಡನೆ ಅವನನ್ನು ಕದ್ದು ಕಟ್ಟಾರಣ್ಯದಲ್ಲಿ ಬಿಟ್ಟುಹೋದನು. ಆ ರೀತಿ ಬಿಟ್ಟು ಹೋಗುವ ಮುನ್ನ ಆ ಮಗುವಿನ ಮೇಲಿನ ಕನಿಕರಭಾವದಿಂದ, ಅದರ ಕಿವಿಗಳಲ್ಲಿ ರತ್ನ–ಕುಂಡಲಗಳನ್ನು ತೊಡಿಸಿ ಹೋದನು. ಆ ಮಗುವು ಚಂದ್ರಗತಿಯೆಂಬ ವಿದ್ಯಾಧರನ ಕಣ್ಣಿಗೆ ಬಿತ್ತು. ಅದನ್ನು; ಸಂತಾನಹೀನೆಯಾದ ತನ್ನ ಮಡದಿಗೊಪ್ಪಿಸಿದನು. ಆಕೆ ತನ್ನ ಮಗನೆಂದೇ ತಿಳಿದು, ಆ ಮಗುವನ್ನು 'ಭಾಮಂಡಲ' ಎಂಬ ಹೆಸರಿಟ್ಟು ಸಾಕಿದಳು. ಭಾಮಂಡಲನ ಪಾತ್ರ ತೀರ ಹೊಸದಾಗಿಯೂ ವಿಶೇಷವಾದುದಾಗಿಯೂ ಕಂಡು ಬರುತ್ತದೆ.

ಬರ್ಬರ ದೇಶದ ಮ್ಲೇಂಚ್ಚರು(ಕಾಡುಜನರು) ಜನಕನ ನಾಡಿಗೆ ಮುತ್ತಿಗೆ ಹಾಕಿದರು. ಜನಕನು ದಶರಥನ ಸಹಾಯಕೋರಿ ಕಾಡುಜನರನ್ನು ಹತ್ತಿಕ್ಕಲು ರಾಮನನ್ನು ಕಳುಹಿಸೆಂದನು. ರಾಮ–ಲಕ್ಷ್ಮಣರಿಬ್ಬರೂ ಹೋಗಿ ವೈರಿಗಳನ್ನು ಹತ್ತಿಕ್ಕಿದರು. ರಾಮನ ಪರಾಕ್ರಮಕ್ಕೆ ಮೆಚ್ಚಿ ತನ್ನ ಮಗಳು ಸೀತೆಯನ್ನು ಲಗ್ನ ಮಾಡಿಕೊಡಬೇಕೆಂದು ಜನಕನು ಮನದಲ್ಲಿಯೇ ನಿಶ್ಚಯಿಸಿದನು. ವಾಲ್ಮೀಕಿ ರಾಮಾಯಣದಲ್ಲಿ, ವಿಶ್ವಾಮಿತ್ರನ ಯಾಗಕ್ಕೆ ತೊಂದರೆ ಕೊಡುತ್ತಿದ್ದ ತಾಟಕೆ ಮತ್ತವಳ ಮಕ್ಕಳಾದ ಸುಬಾಹು ಮಾರೀಚರನ್ನು ಹತ್ತಿಕ್ಕುವ ನಿಮಿತ್ತವಾಗಿ ರಾಮಲಕ್ಷ್ಮಣರು ಹೋಗಿ ತದನಂತರ ವಿಶ್ವಾಮಿತ್ರನ ಮುಖಾಂತರ ಮಿಥಿಲಾ ನಗರವನ್ನು ಸೇರಲು ಕಾರಣವಾದರೆ, ಇಲ್ಲಿ ಜನಕನೇ ಖುದ್ದಾಗಿ ಮ್ಲೇಂಚರ

ಉಪದ್ರವ ನಿವಾರಣೆಗೆಂದು ರಾಮನನ್ನು ನೇರವಾಗಿ ಕರೆಸಿಕೊಳ್ಳುತ್ತಾನೆ. ಲಕ್ಷ್ಮಣನೂ ಜೊತೆಗೆ ಹೋಗುತ್ತಾನೆ.

ಒಮ್ಮೆ ನಾರದನು ಸೀತೆಯನ್ನು ಕಾಣುವ ನಿಮಿತ್ತ ಮಿಥಿಲೆಗೆ ಬಂದನು. ದ್ವಾರಪಾಲಕನಿಂದ ಅವಮಾನಿತನಾದನು. ಈ ಸೇಡಿಗಾಗಿ ಅವನು ಸೀತೆಗೆ ಕೇಡು ತರಬಯಸಿ ಅವಳ ಮನೋಹರವಾದ ಚಿತ್ರವನ್ನು ಬರೆದು 'ರಥನಸುರನಗರ'ದ ಉಪವನದಲ್ಲಿ ಎಲ್ಲರಿಗೂ ಕಾಣುವಂತೆ ಅದನ್ನಿರಿಸಿದನು. ಆ ಚಿತ್ರದಲ್ಲಿರುವವಳು ತನ್ನ ತಂಗಿಯೆಂದರಿಯದೆ ಭಾಮಂಡಲನು ಮೋಹಿತನಾದನು. ಸಾಲದ್ದಕ್ಕೆ ನಾರದ ತನ್ನ ಕುತಂತ್ರದಿಂದ ಆ ಚಿತ್ರದಲ್ಲಿನ ಸುಂದರಿ ಯಾರೆಂಬುದನ್ನು ತಿಳಿಸಿ ಭಾಮಂಡನ ಚಿತ್ತವಿಕಾರವು ಮತ್ತಷ್ಟು ಕೆರಳುವಂತೆ ಮಾಡುವನು. ಇಲ್ಲಿನ ನಾರದನ ಪಾತ್ರ ಹಾಸ್ಯಾಸ್ಪದವಾಗಿ ಚಿತ್ರಿತವಾಗಿದೆ.

ಚಂದ್ರಗತಿಯು ತನ್ನ ಸಾಕುಮಗನಾದ ಭಾಮಂಡಲನಿಗೆ ಸೀತೆಯನ್ನು ತರುವ ಇಂಗಿತದಿಂದ 'ಭೂಚರನಾದ, ಮಾನವನಾದ ಆ ರಾಮನು ಪರಾಕ್ರಮಿಯೇ ಆಗಿದ್ದಲ್ಲಿ ನಮ್ಮ ಈ ವಜ್ರಾವರ್ತ ದಿವ್ಯಧನಸ್ಸನ್ನು ಮಣಿಸಲಿ, ಮುರಿಯಲಿ' ಎಂದು ಪಣವೊಡ್ಡುತ್ತಾನೆ. ರಾಮನು ತನ್ನ ಅಸಮಭುಜಬಲ ಪರಾಕ್ರಮದಿಂದ ಆ ಧನಸ್ಸನ್ನು ಮುರಿದು ಸೀತೆಯನ್ನು ವರಿಸುತ್ತಾನೆ. ಸೀತಾರಾಮರು ವಿವಾಹವಾದುದನ್ನು ಕೇಳಿ ಭಾಮಂಡಲನು ಸೇನೆಯೊಡನೆ ದಂಡೆತ್ತಿ ಸಾಕೇತಪುರಿಗೆ ಬರುತ್ತಾನೆ. ಆದರೆ ಪೂರ್ವಜನ್ಮದ ಸ್ಮರಣೆಯಿಂದ ಸೀತೆ ತನ್ನ ತಂಗಿಯೆಂದರಿತು ಹಿಂದಿರುಗುತ್ತಾನೆ. ವಾಲ್ಮೀಕಿ ರಾಮಾಯಣದ ಬಾಲಕಾಂಡದ ಯಾವ ವಿಷಯಗಳೂ ಇಲ್ಲಿ ಇಲ್ಲ. ಧನುರ್ಭಂಗ, ಸೀತಾಸ್ವಯಂವರ ಪ್ರಸಂಗಗಳಿದ್ದರೂ ಅವುಗಳ ಸ್ವರೂಪ ಬೇರೆಯಾಗಿವೆ.

ದಶರಥನು ರಾಮನಿಗೆ ಪಟ್ಟ ಕಟ್ಟಲು ನಿಶ್ಚಯಿಸಿದನು. ಕೈಕೇಯಿಗೆ, ತಾನು ಬೇಡುವ ವರದ ಬಗೆಗೆ ದಶರಥ ಕೊಟ್ಟ ವಚನದ ನೆನಪಾಗಿ, ಇದೇ ಯೋಗ್ಯ ಸಮಯವೆಂದರಿತು 'ಭರತನು ರಾಜನಾಗಲಿ' ಎಂದು ವರವನ್ನು ಯಾಚಿಸುವಳು. ದಶರಥನು ತನ್ನ ವಚನಕ್ಕೆ ಭಂಗಬಾರದಂತೆ 'ಭರತನೇ ಅಯೋಧ್ಯೆಗೆ ರಾಜನಾಗಲಿ' ಎಂದು ಸಾರಿದನು. ಮೂಲದಲ್ಲಿದ್ದಂತೆ ಇಲ್ಲಿ ದಶರಥನಿಗೆ ಪುತ್ರಶೋಕ ಪ್ರಾಪ್ತಿಯಿಲ್ಲ. ಭರತನ ಪಟ್ಟ, ರಾಮನ ವನವಾಸದ ಸಂಚಿಗೆ ಮಂಥರೆಯ ಪಾತ್ರವಿಲ್ಲ. ರಾಮನೇ ಸೀತಾಲಕ್ಷ್ಮಣರೊಡನೆ ವನವಾಸ ಕೈಗೊಳ್ಳುವ ನಿರ್ಧಾರವನ್ನು ತಿಳಿಸುವನು. ನಂತರ ಕೈಕೆ

ತನ್ನ ತಪ್ಪನ್ನು ಒಪ್ಪಿಕೊಂಡು ರಾಮನೇ ರಾಜನಾಗಲಿ ಎಂದರೂ ಬಿಡದೆ ರಾಮನು ತಾನೇ ಮುಂದಾಗಿ ಭರತನಿಗೆ ಪಟ್ಟ ಕಟ್ಟಿಸುವನು. ಸಾಕೇತಪುರದ ನಿವಾಸಿಗಳೆಲ್ಲ ಗಂಭೀರ ನದಿಯವರೆವಿಗೆ ಬಂದು ದುಃಖದಿಂದ, ಮನಸ್ಸಿಲ್ಲದ ಮನಸ್ಸಿನಿಂದ ರಾಮಾದಿಗಳನ್ನು ವನವಾಸಕ್ಕೆ ಬೀಳ್ಕೊಡುವರು. ಪಾದುಕ ಪ್ರಮೇಯವೇ ಇಲ್ಲಿ ಬರುವುದಿಲ್ಲ.

ವನವಾಸದ ಆರಂಭದಿಂದ ಮುಂದಕ್ಕೆ ಲಕ್ಷ್ಮಣನ ಪರಾಕ್ರಮಗಳು ವಿಜೃಂಭಿಸುತ್ತವೆ. ಅನೇಕ ರಾಜರನ್ನು ಮಣಿಸಿ ಅವರ ಕುವರಿಯರನ್ನು ಲಕ್ಷ್ಮಣ ಮದುವೆಯಾಗುತ್ತಾನೆ. ವನವಾಸಿಗಳಾದ ರಾಮಸೀತಾಲಕ್ಷ್ಮಣರು ವನಗಳಲ್ಲಿ ಮನಬಂದಂತೆ ಅಲೆಯುತ್ತ ದಂಡಕಾರಣ್ಯಕ್ಕೆ ಬರುತ್ತಾರೆ. ಅಲ್ಲಿ ಖರದೂಷಣ ಮತ್ತು ಚಂದ್ರನಖೆಯ ಮಗನಾದ ಶಂಬುಕನು 'ಸೂರ್ಯಹಾಸ' ಖಡ್ಗ ಸಂಪಾದನೆಗೆ ಹನ್ನೆರಡು ವರ್ಷಗಳಿಂದ ತಪೋನಿರತನಾಗಿದ್ದನು. ಅವನ ಸುತ್ತಮುತ್ತಲು ಗಿಡಮರಬಳ್ಳಿಗಳು ನಿಬಿಡವಾಗಿ ಬೆಳೆದುದರಿಂದ ಕಾಣದಂತಾದನು. ಕರ್ಮವಶದಿಂದ ಆ ದಾರಿಯಲ್ಲಿ ಬಂದ ಲಕ್ಷ್ಮಣನು ಅಂತರದಲ್ಲಿ ನೇತಾಡುತ್ತಿದ್ದ ಆ 'ಸೂರ್ಯಹಾಸ' ಖಡ್ಗದಿಂದ ಸಹಜವಾಗಿ, ಅಲ್ಲಿ ದಟ್ಟವಾಗಿ ಬೆಳೆದು ಕೈಕೈ ಹೆಣೆದು ನಿಂತ ಗಿಡಮರಬಳ್ಳಿಗಳನ್ನು ಕತ್ತರಿಸಿದ. ಅವುಗಳೊಡನೆ ಒಂದಾಗಿ ಹೋಗಿದ್ದ ಶಂಬುಕನ ಶಿರವೂ ಕತ್ತರಿಸಲ್ಪಟ್ಟಿತ್ತು. ಅಲ್ಲಿಂದ ಮರಳಿ ಬಂದ ಲಕ್ಷ್ಮಣ ನಡೆದ ಘಟನೆಯನ್ನು ರಾಮನಿಗೆ ವಿವರಿಸಿದ.

ಇತ್ತ ಸುಪುತ್ರನನ್ನು ನೋಡಲು ಬಂದ ಚಂದ್ರನಖೆ ಕಂಡದ್ದು, ಮಗನ ಮರಣವನ್ನು. ಆಕೆ ಶೋಕಪೂರಿತಳಾಗಿ, ತನ್ನ ಮಗನನ್ನು ಸಂಹರಿಸಿದ ಶತ್ರುವಿನ ಶೋಧಕಾರ್ಯಕ್ಕಿಳಿದಳು. ಕಂಡಿದ್ದು ಸುಲಕ್ಷಣ ಸಂಪನ್ನ ಸುರೂಪಿಗಳಾದ ರಾಮ ಲಕ್ಷ್ಮಣರನ್ನು. ಮಗನ ಮರಣದ ಶೋಕ ಮರತೇ ಹೋಯಿತು. ರಾಮ ಲಕ್ಷ್ಮಣರಿಗೆ ಮೋಹ ಪರವಶೆಯಾಗಿ ಸುಂದರ ರೂಪಧರಿಸಿ ಪ್ರೇಮಭಿಕ್ಷೆ ಯಾಚಿಸಿದಳು. ಆದರೆ ಅವರಿಬ್ಬರೂ ಅವಳನ್ನು ತಿರಸ್ಕರಿಸಿ ಮನದಣಿಯುವಂತೆ ನಿಂದಿಸಿದರು. ಮಗನ ಮರಣದ ಶೋಕ ಒಂದು ಕಡೆ, ಇನ್ನೊಂದು ಕಡೆ ಕಾಮಭಂಗದ ನಿರಾಶೆ, ಸಾಲದ್ದಕ್ಕೆ ರಾಮ ಲಕ್ಷ್ಮಣರ ಮೂದಲೆಯ ಮಾತು. ಈ ಮೂರು ಮುಪ್ಪರಿಗೊಂಡು ಸಿಡಿಮಿಡಿಕಿಡಿಯಾದಳು. ಪ್ರತೀಕಾರ ಭಾವನೆಯಿಂದ ಅವರಿಬ್ಬರ ಮೇಲೆ ಸೇಡಿನ ಜ್ವಾಲೆಯಿಂದ ಉರಿದೆದ್ದಳು.

ಸತಿಯ ಮಾತನಾಲಿಸಿ ಖರದೂಷಣನು ರಾವಣನ ಸಹಾಯ ಬೇಡಿ ಯುದ್ಧಕ್ಕೆ ಸಿದ್ಧನಾದ. ಲಕ್ಷ್ಮಣನೂ ಯುದ್ಧಕ್ಕೆ ಸಿದ್ಧನಾಗಿ 'ತನಗೆ ತೊಂದರೆಯಾದರೆ ಸಿಂಹನಾದವನ್ನು ಮಾಡುವೆನು ಸಹಾಯಕ್ಕಾಗಿ ಬರುವುದೆಂದು' ರಾಮನಿಗೆ ತಿಳಿಸಿ ಹೊರಟ. ಈ ನಿಜಸ್ಥಿತಿಯನ್ನರಿತು ರಾವಣ ವಂಚನೆಯ ಸಂಚು ಹೂಡಿ ತಾನೇ ಲಕ್ಷ್ಮಣನ ಧ್ವನಿಯಲ್ಲಿ ಸಿಂಹಾನಾದ ಮಾಡಿದ. ರಾಮ ಸೀತೆಗೆ ಸ್ಥಳಬಿಟ್ಟು ಕದಲಬೇಡವೆಂದು ಹೇಳಿ ಲಕ್ಷ್ಮಣನ ಸಹಾಯಕ್ಕೆಂದು ಯುದ್ಧ ಭೂಮಿಯ ಕಡೆಗೆ ಧಾವಿಸಿದ. ಇತ್ತ ರಾವಣ ಬಲವಂತವಾಗಿ ಸೀತೆಯನ್ನು ಪುಷ್ಪಕವಿಮಾನದಲ್ಲಿಟ್ಟು ಅಪಹರಿಸಿದ. ಇದನ್ನು ಕಣ್ಣಾರೆಕಂಡ ಜಲಾಯಿನ್ ಪಕ್ಷಿಯು ರಾವಣನನ್ನು ವಿರೋಧಿಸಿ ಪೆಟ್ಟು ತಿಂದು ನೆಲಕ್ಕುರುಳಿತು. ಲಕ್ಷ್ಮಣನ ಸಹಾಯಕ್ಕೆ ಬಂದ ರಾಮನು ಸಿಂಹನಾದದ ವಿಷಯ ತಿಳಿಸಿದ. ಲಕ್ಷ್ಮಣ ಏನೋ ಮೋಸವಾಗಿದೆಯೆಂದು ಶಂಕಿಸಿ, ರಾಮನನ್ನು ಮರಳಿ ಸೀತೆಯ ರಕ್ಷಣೆಗೆ ಕಳುಹಿದ. ರಾಮ ಹಿಂತಿರುಗಿ ಬಂದು ನೋಡಿದ್ದು ಸೀತೆಯನ್ನಲ್ಲ, ಮರಣ ಸ್ಥಿತಿಯಲ್ಲಿದ್ದ ಜಲಾಯಿನ್ ಪಕ್ಷಿಯನ್ನು.

ಇತ್ತ ಸೀತೆ ರಾವಣನಿಂದ ಅಪಹರಣಕ್ಕೊಳಗಾಗಿ ರಾಮಲಕ್ಷ್ಮಣರನ್ನು ನೆನೆನೆನೆದು ಗೋಳಿಡುತ್ತಿರುವ ಧ್ವನಿಕೇಳಿ 'ರತ್ನಜಟಿನ್' ಎಂಬ 'ವಿರಾಧಿತ'ನು ರಾವಣನನ್ನು ಎದುರಿಸಲು ಹೋದರೆ ಆತ ವಿದ್ಯಾಧರನ ವಿದ್ಯೆಗಳನ್ನೇ ಹರಣ ಮಾಡಿ ಅವನನ್ನು ಆಕಾಶದಿಂದ ಭೂಮಿಯತ್ತ ಎತ್ತಿ ಒಗೆದ. ಚಂದ್ರನಖೆಯು ತನ್ನ ಸುತ 'ಸುಂದ'ನೊಡನೆ ಲಂಕೆಗೆ ಪಲಾಯನಗೈದಳು. ರಾವಣನು ಸೀತೆಯನ್ನು ಒಲಿಸಿಕೊಳ್ಳಲು ಯತ್ನಿಸಿ ವಿಫಲನಾಗಿ ಕೊನೆಗೆ ಲಂಕೆಯಲ್ಲಿ 'ದೇವರಮಣ' ಎಂಬ ಉಪವನದಲ್ಲಿರಿಸಿದ. ಚಂದ್ರನಖೆ ಲಂಕೆಗೆ ಬಂದು ಪತಿ ಪುತ್ರರ ಶೋಕದಿಂದ ರಾವಣನ ಮುಂದೆ ಗೋಳಿಟ್ಟಳು. ರಾವಣ ರಾಮನ ಮೇಲೆ ಸೇಡು ತೀರಿಸಿಕೊಳ್ಳುವೆನೆಂದು ಹೇಳಿ ಅವಳನ್ನು ಸಮಾಧಾನಿಸಿದ. ಸೀತೆಯ ಮನವೊಲಿಸಲು ತನ್ನ ಸತಿ ಮಂಡೋದರಿಯನ್ನೇ ನೇಮಿಸಿದ. ಅವಳೂ ಪತಿಯ ಸೂಚನೆಯಂತೆ ಪ್ರಯತ್ನಿಸಿ ವಿಫಲೆಯಾದಳು. ಇದನ್ನೆಲ್ಲ ಗಮನಿಸಿದ ವಿಭೀಷಣ ರಾವಣನಿಗೆ 'ಸೀತೆಯನ್ನು ಮರಳಿ ಕಳುಹಿಸಿಬಿಡು' ಎಂದು ಅರಿಕೆ ಮಾಡಿಕೊಂಡ. ಫಲಿಸಲಿಲ್ಲ. ಏನಾದರಾಗಲಿಯೆಂದು ಮುಂಜಾಗ್ರತೆಯ ಕ್ರಮವಾಗಿ ವಿಭೀಷಣನು ಲಂಕೆಯ ಸುತ್ತಲು ಅಗೋಚರವಾದ ಮಾಯಾದುರ್ಗವನ್ನು ನಿರ್ಮಿಸಿದ.

ಇತ್ತ ರಾಮ ಲಕ್ಷ್ಮಣರು ಸೀತಾ ಶೋಧದ ವಿಷಯದಲ್ಲಿ ಸುಗ್ರೀವನನ್ನು ಕಾಣಲು ಬಂದರು. ಆತನೂ ಈಗ ರಾಮನಂತೆ ಸಮ-ದುಃಖಿಯಾಗಿದ್ದ. ಅವನ ಮಡದಿ ತಾರೆಯನ್ನು

'ಸಾಹಸಗತಿ' ಎಂಬ ವಿದ್ಯಾಧರನು ಸುಗ್ರೀವನ ವೇಷ ಧರಿಸಿ ಅಪಹರಿಸಿದ್ದ. ಹನುಮಾನ ಕಿಷ್ಕಿಂಧೆಯಲ್ಲೆಲ್ಲ ತಾರೆಯನ್ನು ಅರಸಿ ಫಲಕಾಣದೆ ಹಿಂದಿರುಗಿದ್ದ. ಈಗ ಸುಗ್ರೀವನೇ ರಾಮನ ಸಹಾಯವನ್ನು ಯಾಚಿಸಿದ. ರಾಮ ಅದಕ್ಕೆ ಸಮ್ಮತಿಸಿದ. ರಣಭೂಮಿಯಲ್ಲಿ ರಾಮನನ್ನು ಕಂಡೊಡನೆಯೇ ಮಾಯಾ ಸುಗ್ರೀವನ ವಿದ್ಯಾಧರ-ಮಂತ್ರ-ಶಕ್ತಿಯೆಲ್ಲ ಮಾಯವಾಗಿ ಸ್ವಸ್ವರೂಪದ 'ಸಾಹಸಗತಿ'ಯಾದನು. ರಾಮನು ಅವನನ್ನು ವಧಿಸಿ ಸುಗ್ರೀವನಿಗೆ ಸತಿ ತಾರೆಯನ್ನು ದೊರಕಿಸಿಕೊಟ್ಟ, ಅದೇ ರೀತಿ ಸೀತಾ ಶೋಧದಲ್ಲಿ ನೆರವಾಗಬೇಕೆಂದು ವಚನ ಪಡೆದ.

ಸತಿಯ ಸುಖವಿಲಾಸಗಳಲ್ಲಿ ಸುಗ್ರೀವನು ರಾಮನಿಗಿತ್ತ ವಚನವನ್ನೇ ಮರೆತ. ಲಕ್ಷ್ಮಣನ ಕೋಪೋಪಾಯದಿಂದ ಸುಗ್ರೀವನಿಗೆ ಮರೆತು ಹೋದ ಕರ್ತವ್ಯದ ಅರಿವಾಯಿತು. ಸೀತೆಯ ಶೋಧಕ್ಕೆ ವಾನರರನ್ನೆಲ್ಲಾ ಒಂದುಗೂಡಿಸಿದನು. ಈ ವಿಷಯವನ್ನು ಭಾಮಂಡಲನಿಗೂ ಹೇಳಿ ಕಳುಹಿಸಿದ. ಸಾಗರೋಲ್ಲಂಘನಗೈದು ಸೀತೆಯನ್ನು ಶೋಧಿಸಲು ಹನುಮಾನನೇ ಸರಿ ಎಂದು ಸಭೆಯಲ್ಲಿ ನಿರ್ಧರಿಸಿದರು.

ಪಿತ ಖರದೂಷಣ, ಸೋದರ ಶಂಬುಕರ ಮರಣ ವಾರ್ತೆಯಿಂದ ಹನುಮಾನನ ಸತಿ 'ಅನಂಗಕುಸುಮೆ' ಶೋಕಸಾಗರದಲ್ಲಿ ಮುಳುಗಿದಳು. ಸುಗ್ರೀವನ ಸೇವಕ ಶ್ರೀಭೂತಿಯು ರಾಮ-ಸುಗ್ರೀವರ ನಡುವೆ ನಡೆದಿರುವ ಒಡಂಬಡಿಕೆಯ ವಿವರಗಳನ್ನು ಹನುಮಾನನಿಗೆ ತಿಳಿಸಿದ. ಪರಿಣಾಮವಾಗಿ ಹನುಮಾನನು ತನ್ನ ಸೈನ್ಯದೊಡನೆ ಗಗನಗಾಮಿಯಾಗಿ ಲಂಕಾಪಥವಿಡಿದ. ಇಲ್ಲಿಂದ ಮುಂದಕ್ಕೆ ಹನುಮಾನನ ಪರಾಕ್ರಮಗಳು ಅವನ ಮದುವೆಗಳೂ ವಿಜೃಂಭಿಸುತ್ತವೆ. ಲಂಕಾಪಥವಿಡಿದು ಗಗನಗಾಮಿಯಾಗಿ ಹೊರಟ ಹನುಮಾನನು ಮಾರ್ಗಮಧ್ಯೆ ಮಹೇಂದ್ರಗಿರಿಯನ್ನು ದಿಟ್ಟಿಸಿ ಈ ಹಿಂದೆ ತನ್ನ ಮಾತೆ ಗರ್ಭಿಣಿ ಎಂಬುದನ್ನು ಲೆಕ್ಕಿಸಿದೆ ಅರಣ್ಯಕ್ಕಟ್ಟಿದ ಮಹೇಂದ್ರರಾಜನ ಮೇಲೆ ಕಾಳಗ ಸಾರಿ ಗೆಲ್ಲುತ್ತಾನೆ. ಗೆದ್ದ ಮೊಮ್ಮಗನ ಪಾದಕ್ಕೆ ಅಜ್ಜನೇ ಎರಗುತ್ತಾನೆ. ಆಗ ಹನುಮಾನನು ವಿನೀತಭಾವದಿಂದ ಅಜ್ಜ ಮಹೇಂದ್ರರಾಜನ ಕ್ಷಮೆಯಾಚಿಸಿ ಲಂಕಾನಗರಿಯತ್ತ ಲಂಘಿಸಿದನು. ಮಹೇಂದ್ರರಾಜನೂ ಮಗ ಪ್ರಸನ್ನಕೀರ್ತಿಯೂ ರಾಮನ ಸಹಾಯಕ್ಕೆ ಕಿಷ್ಕಿಂಧೆಯ ಕಡೆ ಹೊರಟರು.

ದಧಿಮುಖ ದ್ವೀಪದ ಕಾಡೊಂದರಲ್ಲಿ ದಾವಾನಲದಿಂದ ಪ್ರಖರಾಗ್ನಿಯಲ್ಲಿ ಸಿಕ್ಕಿಬಿದ್ದಿದ್ದ ಚಂದ್ರಲೇಖ, ವಿದ್ಯುತ್‌ಪ್ರಭಾ, ತರಂಗಮಾಲಾ ಎಂಬ ಗಂಧರ್ವಕನ್ಯೆಯರನ್ನು ಕಾಪಾಡಿದ. ಈ ಮೂವರೂ ದಧಿಮುಖ ನಗರದ ಗಂಧರ್ವರಾಜನ ಮಕ್ಕಳು. ಅವರ ಕಥೆಯನ್ನೆಲ್ಲಾ ಕೇಳಿ ಅವರನ್ನು ಸಂಕಷ್ಟದಿಂದ ಪಾರುಮಾಡಿ ಅವರನ್ನೆಲ್ಲಾ ರಾಮನಿದ್ದೆಡೆಗೆ ಕಳುಹಿಸಿದ. ಹನುಮಾನನು ಸೈನ್ಯಸಮೇತನಾಗಿ ಆಕಾಶ ಮಾರ್ಗದಲ್ಲಿ ಚಿತ್ರಕೂಟದ ಮೇಲೆ ಹಾಯ್ದು ಹೋಗುವಾಗ ಸೇನೆಯ ಗತಿಯು ಒಮ್ಮೆಲೇ ಕುಂಠಿತವಾಯಿತು. ಅದಕ್ಕೆ ವಜ್ರಮುಖನ ಮಾಯಾದುರ್ಗವೇ ಕಾರಣವೆಂದು ಮಂತ್ರಿ ಮಹಾಮತಿಯಿಂದ ತಿಳಿದು, ವಜ್ರಮುಖನನ್ನು ಯುದ್ಧದಲ್ಲಿ ಸೋಲಿಸಿ ವಧಿಸಿದನು. ವಜ್ರಮುಖನ ಸತ್ಪುತ್ರಿ ಲಂಕಾಸುಂದರಿಯು, ತಂದೆಯ ವಧೆಯಿಂದ ರೋಷಗೊಂಡು ಹನುಮಾನನ ಮೇಲೆ ಬಲಪ್ರಯೋಗಿಸಿದಳು. ವಜ್ರ ಶರೀರಿಯಾದ ಹನುಮಾನನ ಮುಂದೆ ಅವಳ ಆಟ ನಡೆಯಲಿಲ್ಲ. ಅವನ ತೇಜಸ್ಸಿಗೂ ಅಂಗಸೌಷ್ಠವಕ್ಕೂ ಅಪ್ರತಿಮ ಸಾಹಸಕ್ಕೂ ಮಾರುಹೋದಳು. ಅವನಲ್ಲಿ ಅನುರಕ್ತಳಾಗಲು ಕಾಮಕಟಾಕ್ಷ ಶರಗಳನ್ನೇ ಅವನ ಮೇಲೆ ಪ್ರಯೋಗಿಸಿ, ಅಂತರಂಗವನ್ನು ಕದಡಿ ಅವನ ಸಂಪೂರ್ಣ ವ್ಯಕ್ತಿತ್ವವನ್ನೇ ಕೈವಶಮಾಡಿಕೊಂಡಳು. ಕಾಮನ ಮೃದುಮಧುರತನದಲ್ಲಿ ಪರಸ್ಪರ ವೈರವೆಲ್ಲ ಕರಗಿ ರತಿಮನ್ಮಥರಂತೆ ಒಂದಾದರು.

ಹನುಮಾನನು ಕೊನೆಗೊಮ್ಮೆ ಲಂಕೆಯನ್ನು, ತಲುಪಿ ಮೊದಲು ವಿಭೀಷಣನನ್ನು ಕಂಡು 'ರಾವಣನಂತಹ ಪ್ರಜಾಪತಿಯು ಪರಸ್ತ್ರೀಯನ್ನು ಅಪಹರಿಸುವುದು ಉಚಿತವೇ?, ಎಂದು ಪ್ರಶ್ನಿಸಿದಾಗ ವಿಭೀಷಣನು, ನಾನು ಈ ವಿಷಯದಲ್ಲಿ ರಾವಣನಿಗೆ ಅನೇಕ ಸಾರಿ ಹೇಳಿರುವೆ. ನಿಮ್ಮ ಮಾತಿನಂತೆ ಇಂದೂ ಕೂಡ ಹೋಗಿ ರಾವಣನಿಗೆ ಹೇಳುತ್ತೇನೆಂದು ಹೊರಡುತ್ತಾನೆ. ಇತ್ತ ಹನುಮಾನನು ಪದ್ಮೋದ್ಯಾನಕ್ಕೆ ತೆರಳಿ ಸೀತೆಯನ್ನು ಕಂಡು ರಾಮನ ಉಂಗುರವನ್ನು ನೀಡುತ್ತಾನೆ. ಸೀತೆ ಹರ್ಷಿತಳಾಗಿ ತನ್ನ ಉತ್ತರೀಯವನ್ನಿತ್ತು ರಾಮ ಲಕ್ಷ್ಮಣರ ಕ್ಷೇಮ ಸಮಾಚಾರವನ್ನು ಕೇಳಿ ತಿಳಿದುಕೊಳ್ಳುತ್ತಾಳೆ.

ಅಷ್ಟರಲ್ಲಿ ಅಲ್ಲಿಗೆ ಬಂದ ಮಂಡೋದರಿ ಸೀತೆಯನ್ನು ಕುರಿತು "ತಂಗಿ ಶೋಕವನ್ನು ಬಿಡು, ಅನುದಿನವೂ ರಾವಣನನ್ನು ಮನಸಾ ಸೇವಿಸು ! ಅದರಲ್ಲಿ ನಿನ್ನ ಹಿತವಿದೆ" ಎಂದು ಪೀಡಿಸುತ್ತಾಳೆ. ಸೀತೆ ಕೋಪಗೊಂಡು; ಈ ನುಡಿಯನ್ನು ರಾಮ ಕೇಳಿದಲ್ಲಿ, ರಾವಣನ ರುಂಡವನ್ನು ಖಂಡಿತವಾಗಿಯೂ ಚಂಡಾಡುವನು ಎಂದು ಹೇಳಿ, ಹನುಮಾನನು ತನ್ನ ಪತಿಯ ಸಂದೇಶವನ್ನು

ತಂದಿರುವುದಾಗಿ ಹೇಳುತ್ತಾಳೆ. ಅಲ್ಲಿಯವರೆಗೆ ಅದೃಶ್ಯನಾಗಿದ್ದ ಹನುಮಾನನು ಪ್ರತ್ಯಕ್ಷನಾಗುತ್ತಾನೆ. ಮಂಡೋದರಿ ಮೊದಲು ಹೆದರಿದರೂ ಅನಂತರ ಈತ ಬೇರೆ ಯಾರೂ ಅಲ್ಲ ನಮ್ಮ ಚಂದ್ರನಖೆಯ ಮಗಳು ಅನಂಗಕುಸುಮೆಯ ಪತಿ ಎಂದು ಎಲ್ಲರಿಗೂ ತಿಳಿಸುತ್ತಾಳೆ. ಅಲ್ಲಿ ಅನೇಕ ಸ್ತ್ರೀಯರು ಸುತ್ತುವರೆದಿರುತ್ತಾರೆ. ಆಗ ಹನುಮಾನನು 'ನೀವು ಇಂತಹ ಮೂರ್ಖತನವನ್ನು ಹೇಗೆ ಮಾಡಿದಿರಿ? ನಿಮ್ಮ ಜೀವನ ಪಶುಜೀವನ ಸಮಾನ ಎಂದು ನುಡಿದನು'. ಇದರಿಂದ ಸಿಟ್ಟಿಗೆದ್ದ ಮಂಡೋದರಿ ಮಹಾಕಾಳಿಂಗ ಸರ್ಪದಂತೆ ಪೂತ್ಕರಿಸಿದಳು. 'ಭೂಮಿ ಗೋಚರಿಯರ ಬಡದೂತ, ಮೂರ್ಖ, ನಿನಗೆಲ್ಲಿಯ ಪ್ರೌಢಿಮೆ? ಎಂದು ಗದರಿದಳು. ಇದಕ್ಕೆ ಸೀತೆ ಕುಪಿತೆಯಾಗಿ "ರಾಮ-ಲಕ್ಷ್ಮಣರ ಪರಾಕ್ರಮವನ್ನು ನೀನು ಕೇಳಿಲ್ಲವೆ? ಪಾಪಕಾರ್ಯದಲ್ಲಿ ಅನುಕೂಲೆಯಾದ ನಿನಗೆ ವೈಧವ್ಯ ದುಃಖ ಕಟ್ಟಿಟ್ಟಿದ್ದು" ಎಂದು ಅಬ್ಬರಿಸಿದಳು.

ಸೀತೆಯ ಕಿಡಿ ನುಡಿಗಳಿಂದ ಸಿಟ್ಟಿಗೆದ್ದ ಮಂಡೋದರಿ ಉಳಿದ ರಾಣಿಯರೊಡಗೂಡಿ ಸೀತೆಯನ್ನು ಹೊಡೆಯಲು ಹೋದಳು. ಹನುಮಾನನು ನಡುವೆ ಬಂದು ಆ ಸ್ತ್ರೀಯರನ್ನೆಲ್ಲಾ ಚದುರಿಸಬೇಕಾಯಿತು. ವೈದಿಕ ರಾಮಾಯಣದ ಮಂಡೋದರಿ ಮಹಾ ಪತಿವ್ರತೆಯೂ, ಸದ್ಗುಣಿಯೂ ಆಗಿ ಚಿತ್ರಿತಳಾಗಿದ್ದರೆ ಇಲ್ಲಿನ ಮಂಡೋದರಿ ದುಷ್ಟಳಂತೆ ಚಿತ್ರಿತವಾಗಿದ್ದಾಳೆ. ಇಲ್ಲಿಯೂ ಹನುಮಾನನು ಸೀತೆಯನ್ನು ಕುರಿತು "ನಾನು ತಮ್ಮನ್ನು ಸುರಕ್ಷಿತವಾಗಿ ಪತಿಯ ಸನ್ನಿಧಿಗೊಯ್ಯುವೆನು"ಎನ್ನುತ್ತಾನೆ. ಸೀತೆಯು ನಿರಾಕರಿಸಿ "ನಾನು ಹೀಗೆ ಬರುವುದು ಉಚಿತವಲ್ಲ. ಶ್ರೀರಾಮಚಂದ್ರನೇ ಬಂದು ನನ್ನನ್ನು ಮುಕ್ತಗೊಳಿಸಲಿ" ಎನ್ನುತ್ತಾಳೆ. ತನ್ನ ಚೂಡಾಮಣಿಯನ್ನು ಹನುಮಾನನಿಗೆ ಕೊಡುತ್ತಾರೆ.

ಸೀತೆಯಿಂದ ಬೀಳ್ಕೊಂಡ ಹನುಮಾನನನ್ನು ರಾವಣ ಸುಭಟರು ಸದೆಬಡಿಯಲು ಬರುತ್ತಾರೆ. ಅವರನ್ನು ಎದುರಿಸಿ ಹನುಮಾನ ಉದ್ಯಾನವನವನ್ನೆಲ್ಲಾ ಧ್ವಂಸಗೊಳಿಸಿ ನೆಲಸಮ ಮಾಡುತ್ತಾನೆ. ಆಗ ಇಂದ್ರಜಿತುವು ನಾಗಪಾಶದಿಂದ ಬಂಧಿಸಿ ರಾವಣನ ಮುಂದೆ ನಿಲ್ಲಿಸುತ್ತಾನೆ. ಕೋಪದಿಂದ ರಾವಣನು "ನನ್ನ ಔದಾರ್ಯವನ್ನು ಮರೆತು ವರ್ತಿಸಿದ ಮಹಾಪಾಪಿ ಕೃತಘ್ನ" ಎಂಬ ಕಠೋರ ವಚನಗಳನ್ನಾಡುತ್ತಾನೆ. ಅಲ್ಲಿದ್ದ ಸ್ತ್ರೀಯರೂ ಅಪಹಾಸ್ಯ ಮಾಡುತ್ತಾರೆ. ಹನುಮಾನನು 'ಪರಸ್ತ್ರೀ ವ್ಯಾಮೋಹಿಯೆ, ನಿನಗೆ ಮರಣ ಸಮೀಪಿಸಿದೆ'. ಎಂದು ನಿರ್ಭಯವಾಗಿ ನುಡಿಯುತ್ತಾನೆ. ರಾವಣನು ಕೋಪದಿಂದ "ಇವನನ್ನು ಕೈಕಾಲು ಕಟ್ಟಿ ಧೂಳಿಯಲ್ಲಿ ಎಳೆಸಿರಿ! ಪುರವಾಸಿಗಳೆಲ್ಲ

ನೋಡಲಿ" ಎಂದು ಆಜ್ಞೆ ಮಾಡುತ್ತಾನೆ. ರಾವಣನ ವರ್ತನೆಯಿಂದ ಕೆರಳಿದ ಹನುಮಾನ್ ಸಿಟ್ಟಿನಿಂದ ನಾಗಪಾಶ ಬಂಧನವನ್ನೆಲ್ಲ ಕಿತ್ತೊಗೆದು ಆಕಾಶಕ್ಕೆ ಹಾರುತ್ತಾನೆ. ಆ ಬಿರುಸಿಗೆ ಅರಮನೆಯೇ ಕುಸಿಯುತ್ತದೆ. ಇಲ್ಲಿ ಬಾಲಕ್ಕೆ ಬೆಂಕಿಯಿಡುವ ಪ್ರಸಂಗವಾಗಲೀ, ಲಂಕಾ ದಹನವಾಗಲಿ ಇಲ್ಲ.

ಲಂಕೆಯಿಂದ ತೆರಳಿದ ಹನುಮಾನ್ ರಾಮನಿದ್ದೆಡೆಗೆ ಬಂದು, ಸೀತೆಯ ಚೂಡಾಮಣಿಯನ್ನು ಕೊಟ್ಟು ನಡೆದ ಘಟನೆಯನ್ನು ವಿವರಿಸುತ್ತಾನೆ. ಕಿಷ್ಕಿಂಧೆಯಿಂದ ವಾನರ ಸೈನ್ಯದೊಡನೆ ರಾಮ ಲಂಕೆಗೆ ಧಾವಿಸುತ್ತಾನೆ. ಈ ವಿಷಯ ತಿಳಿದ ವಿಭೀಷಣ ಮತ್ತೊಮ್ಮೆ ರಾವಣನಲ್ಲಿ ಬಂದು ಒಪ್ಪಂದ ಮಾಡಿಕೊಳ್ಳುವುದು ಉಚಿತವೆಂದು ತಿಳಿಸುತ್ತಾನೆ. ಇಂದ್ರಜಿತು ವಿಭೀಷಣನನ್ನು ಷಂಡ, ರಾಜದ್ರೋಹಿಯೆಂದು ನಿಂದಿಸಿದರೆ ರಾವಣನು ಲಂಕೆಯನ್ನು ಬಿಟ್ಟು ಹೋಗು ಎಂದು ಅಬ್ಬರಿಸುತ್ತಾನೆ. ವಿಭೀಷಣ ತನ್ನ ಪರಿವಾರ ಸಮೇತವಾಗಿ ಲಂಕೆಯನ್ನು ತ್ಯಜಿಸಿ ರಾಮನಿಗೆ ಶರಣಾಗುತ್ತಾನೆ. ಅಷ್ಟರಲ್ಲಿ ಭಾಮಂಡಲನೂ ಬಂದು ರಾಮನೊಡನೆ ಸೇರುತ್ತಾನೆ. ರಾಮ-ರಾವಣರ ಯುದ್ಧ ಘೋರವಾಗಿ ನಡೆಯುತ್ತದೆ. ದಾನವ ಸೇನೆಯ ಧುರೀಣರಾದ ಹಸ್ತ, ಪ್ರಹಸ್ತರು ವಾನರ ಸೇನೆಯ ನಲ, ನೀಲರಿಂದ ಹತರಾಗುತ್ತಾರೆ. ಈ ನಾಲ್ಕೂ ಜನರ ಪೂರ್ವಜನ್ಮದ ಕಥನವಿದ್ದು ಇವರು ಹಿಂದಣ ಜನ್ಮದಲ್ಲಿ ಸೋದರರಾಗಿದ್ದವರು. ಜೈನ ಧರ್ಮದ ಭವಾವಳಿ ಪರಿಕಲ್ಪನೆಯೇ ಇಲ್ಲೂ ಕೆಲಸ ಮಾಡಿದೆ.

ಯುದ್ಧ ಭೂಮಿಯಲ್ಲಿ ಮತ್ತೊಮ್ಮೆ ವಿಭೀಷಣ ಸಂಧಿಕಾರ್ಯಕ್ಕೆ ಪ್ರಯತ್ನಿಸಿ ವಿಫಲನಾಗುವನು. ಇಂದ್ರಜಿತುವು ಸರ್ಪಾಸ್ತ್ರದಿಂದ ಲಕ್ಷ್ಮಣನನ್ನು ಬಂಧಿಸಿದನು. ರಾವಣನ 'ಅಮೋಘವಿಜಯ' ಶಕ್ತಿಯ ಆಘಾತದಲ್ಲಿ ಲಕ್ಷ್ಮಣನು ಮೂರ್ಛೆ ಹೋಗಿ ಮಲಗಿದ್ದರಿಂದ, ಲಕ್ಷ್ಮಣ ಹತನಾದನೆಂದೇ ಬಗೆದು ರಾವಣ ಹಿಂತಿರುಗಿದನು. ಇಲ್ಲಿ ಸಂಜೀವಿನಿ ಪರ್ವತದ ಪ್ರಸಂಗವಿಲ್ಲ. ಬದಲಿಗೆ 'ವಿಶಲ್ಯಾ' ಎಂಬ ಜಿನಭಕ್ತೆಯು ಸ್ನಾನ ಮಾಡಿದ ನೀರನ್ನು ಗಾಯಾಳುಗಳಿಗೂ, ಮೂರ್ಛಿತರಾದವರಿಗೂ ಚುಮುಕಿಸಿದರೆ ಶೀಘ್ರದಲ್ಲೇ ಗುಣಮುಖರಾಗುವರು. ಈಕೆ ದ್ರೋಣ ಮೇಘರಾಜನ ಮಗಳು. ಅವನ ಒಪ್ಪಿಗೆ ಪಡೆದು ಭಾಮಂಡಲನು ಆಕೆಯನ್ನು ಸಾಕೇತನಗರಿಯಿಂದ ಲಂಕೆಗೆ ಕರೆತಂದು ಎಲ್ಲರನ್ನೂ ಬದುಕಿಸುವನು. ಮೊಯಲಿಯವರು ಈ ಪ್ರಸಂಗದಿಂದ ಪ್ರೇರಿತರಾಗಿರಬಹುದು ಎನಿಸುತ್ತದೆ. ಅವರ ಕಾವ್ಯದಲ್ಲಿ ಬರುವ ಅಗಸ್ತ್ಯ-ಲೋಪಾಮುದ್ರೆಯರ ಮಗಳು ಪ್ರಭಾ ಎಂಬುವವಳು ವೈದ್ಯೆ. ಯುದ್ಧದಲ್ಲಿ ಗಾಯಗೊಂಡವರಿಗೂ, ಮೂರ್ಛಿತರಾದವರಿಗೂ ಔಷಧ ಕೊಟ್ಟು

**ಗುಣಮುಖ ಯೋಧರನ್ನಾಗಿ ಮಾಡುತ್ತಾಳೆ. ವಿಮಲಸೂರಿಯಲ್ಲಿ ವಿಶಲ್ಯಾ ಎಂಬ ಪಾತ್ರ ಪೌರಾಣಿಕ ಹಿನ್ನೆಲೆ ಹೊಂದಿದ್ದರೆ; ಮೊಯಿಲಿಯವರ ಪ್ರಭಾ ಎಂಬ ಪಾತ್ರ ವೈಜ್ಞಾನಿಕ ಹಿನ್ನೆಲೆ ಹೊಂದಿರುವುದಾಗಿದೆ.**

ರಾಮನ ಕೈ ಮೇಲಾಗುತ್ತಿರುವುದನ್ನು 'ಮೃಗಾಂಕ'ನೆಂಬ ಮಂತ್ರಿಯಿಂದ ಕೇಳಿ ತಿಳಿದ ರಾವಣ ಅವನ ಸಲಹೆಯಂತೆ ಒಪ್ಪಂದವೇ ವಿಹಿತವೆಂದು ಬಗೆದು ರಾಮನಲ್ಲಿಗೆ ದೂತನನ್ನು ಅಟ್ಟಿದ. ರಾಮನೂ "ನನಗೆ ರಾಜ್ಯದ ಮೇಲೆ ಮೋಹವಿಲ್ಲ ರಾವಣನ ತಮ್ಮಂದಿರನ್ನೂ ಮಕ್ಕಳನ್ನು ಬಿಟ್ಟು ಬಿಡುವೆವು. ಸೀತೆಯನ್ನು ಗೌರವಪೂರ್ವಕವಾಗಿ ಕಳುಹಿಸಿಕೊಡಿರಿ" ಎಂದು ಹೇಳಿ ಕಳುಹಿಸಿದ. ಆದರೂ ದುರ್ದೈವದಿಂದ ಸಂಧಾನ ವಿಫಲವಾಯಿತು. ರಾವಣ ಹೇಗಾದರೂ ಮಾಡಿ ಯುದ್ಧ ಗೆಲ್ಲಬೇಕೆಂದು 'ಬಹುರೂಪಿಣಿ' ವಿದ್ಯೆ ಕೈವಶಮಾಡಿಕೊಳ್ಳಲು ತಪಸ್ಸಿಗೆ ಕುಳಿತ. ಅಂಗದನು ರಾವಣನಿದ್ದಲ್ಲಿಗೇ ಹೋಗಿ ಸೀತೆಯ ಅಪಹರಿಸಿದ್ದಕ್ಕಾಗಿ ಮೂದಲಿಸಿದ. ಕೊರಳ ಶಿರವೊಂದನ್ನು ಕಸಿದುಕೊಂಡ. ರಾವಣನ ಮಡದಿ ಮಂಡೋದರಿಯನ್ನು ಬಂಧಿಸಿದ. ಆದರೂ ರಾವಣ ತಪಸ್ಸಿನಿಂದ ವಿಮುಖನಾಗಲಿಲ್ಲ. ಅವನ ಧ್ಯಾನಕ್ಕೆ ಇವು ಯಾವುದೂ ಚ್ಯುತಿ ಬರಲಿಲ್ಲ. ಮೇರು ಪರ್ವತದಂತೆ ಅಚಲನಾಗಿದ್ದು 'ಬಹುರೂಪಿಣಿ' ವಿದ್ಯೆಯನ್ನು ಕೈವಶ ಮಾಡಿಕೊಂಡೆ ಬಿಟ್ಟ.

ರಾವಣನು 'ಬಹುರೂಪಿಣಿ' ವಿದ್ಯೆ ಪಡೆದ ಮೇಲೂ ಅಪಶಕುನಗಳಿಂದ ಭಯಭೀತೆಯಾದ ಮಂಡೋದರಿ, ಸೀತೆಯನ್ನು ಮರಳಿ ರಾಮನಿಗೆ ಒಪ್ಪಿಸುವಂತೆ ರಾವಣನಿಗೆ ಪ್ರಾರ್ಥಿಸಿದಳು. ಫಲಕಾರಿಯಾಗಲಿಲ್ಲ. 'ಬಹುರೂಪಿಣಿ' ವಿದ್ಯೆಯಿತ್ತ ದಿವ್ಯರಥವೇರಿ ರಣಾಂಗಣಕ್ಕೆ ರಾವಣ ಹೊರಟ. ರಣಾಂಗಣದಲ್ಲಿ ಲಕ್ಷ್ಮಣನೆಡೆಗೆ ಗುರಿಯಿಟ್ಟು ಎಸೆದ ಚಕ್ರವನ್ನು ಲಕ್ಷ್ಮಣ ಲೀಲಾಜಾಲವಾಗಿ ಹಿಡಿದ. ರಾಮ ಲಕ್ಷ್ಮಣರ ಅಜೇಯ ಪರಾಕ್ರಮವನ್ನು ನೋಡಿದ ಜನ ಅವರನ್ನು ಬಲದೇವ–ವಾಸುದೇವರ ಅವತಾರವೆಂದು ಭಾವಿಸಿದರು. ಕೊನೆಯ ಬಾರಿಯೆನ್ನುವಂತೆ ವಿಭೀಷಣ ಮತ್ತೊಮ್ಮೆ ಸಂಧಾನಕ್ಕೆ ಯತ್ನಿಸಿ ಸೋತ. ಲಕ್ಷ್ಮಣನು ಮರಳಿ ಎಸೆದ ಚಕ್ರರತ್ನವು ರಾವಣನ ವಕ್ಷಸ್ಥಲವನ್ನು ವಿದೀರ್ಣಗೊಳಿಸಿತು. ಇದನ್ನು ನೋಡಿ ದಿಕ್ಕೆಟ್ಟು ಓಡುತ್ತಿರುವ ದಾನವ ಸೈನ್ಯವನ್ನು ಕುರಿತು ವಿಭೀಷಣ ಸುಗ್ರೀವಾದಿಗಳೇ "ಹೆದರದಿರಿ! ಚದುರದಿರಿ! ಸಾವಧಾನ! ಸಾವಧಾನ! ರಾಮನ–ನಾರಾಯಣನ ಅಭಯವಿದೆ ನಿಮಗೆ" ಎಂದು ಸಾಂತ್ವನ ಮಾಡುವಂತಾಯಿತು.

ವ್ಯಕ್ತಿಯ ಮರಣದಲ್ಲಿ ವೈರದ ಮರಣವೂ ಉಂಟು! ಎನ್ನುವಂತೆ ರಾಮನೇ ಮುಂದು ನಿಂತು ರಾವಣನ ಗೌರವಕ್ಕೆ ಉಚಿತ ಸಂಸ್ಕಾರವಾಗಬೇಕೆಂದು ಸೂಚಿಸಿದ. ಇಂದ್ರಜಿತು, ಕುಂಭಕರ್ಣ, ಮಾರೀಚ, ಮೇಘನಾದ ಮೊದಲಾದವರನ್ನು ಬಂಧಮುಕ್ತಿಗೊಳಿಸಿದ. ರಾವಣನ ಸಂಸ್ಕಾರವಾದ ಬಳಿಕ 'ಅಪ್ರಮೇಯಜಲ'ನೆಂಬ ಮಹಾಮುನಿಯಿಂದ ಇಂದ್ರಜಿತು, ಘನವಾಹನ ಮುಂತಾದವರು ತಮ್ಮ ಪೂರ್ವಜನ್ಮದ ವೃತ್ತಾಂತವನ್ನು ತಿಳಿದು ಎಲ್ಲರೂ ಇಹಜೀವನಕ್ಕೆ ಬೇಸತ್ತು ದೀಕ್ಷೆ ಪಡೆದುಕೊಂಡರು. ಮಂಡೋದರಿ ಚಂದ್ರನಖಿಯರೂ ದೀಕ್ಷಾಬದ್ಧರಾದರು.

ರಾಮ (ಹಲಧರ) ಲಕ್ಷ್ಮಣ (ನಾರಾಯಣ)ರು ವಿಜಯಿಗಳಾಗಿ ಲಂಕಾಪುರವನ್ನು ಪ್ರವೇಶಿಸಿದರು. ರಾಮನು ಆತುರ-ಕಾತುರಗಳಲ್ಲಿ ಹೊಯ್ದಾಡುತ್ತಿದ್ದ ಸೀತೆಯನ್ನು ಸಂಧಿಸಿದ. ಪುನರ್ಮಿಲನದಿಂದ ದಂಪತಿಗಳು ಪುಲಕಿತರಾದರು. ಅಯೋಧ್ಯೆಗೆ ಹಿಂತಿರುಗಿದ ನಂತರ ಸೀತಾಪರಿತ್ಯಾಗದ ಪ್ರಸಂಗವಿದೆ. ಲಕ್ಷ್ಮಣನು 'ಲೋಕದ ಬಾಯಿ ಹಿಡಿಯಲುಂಟೇ? ಎಂದು ವಾದಿಸಿದರೂ ಶ್ರೀರಾಮ ಅಚಲನಾಗಿ ಮುಖ್ಯ ಸೇನಾಪತಿಯಾದ 'ಕೃತಾಂತವದನ'ನನ್ನು ಕರೆದು ಸೀತೆಯನ್ನು ಘೋರಾರಣ್ಯದಲ್ಲಿ ಬಿಟ್ಟು ಬರಲು ಹೇಳಿದನು. ಕಥೆ ಮುಂದುವರಿಯುವುದು.

**ಆ) ನಾಗಚಂದ್ರನ ರಾಮಚಂದ್ರಚರಿತ ಪುರಾಣದ ಕಥಾಸ್ವರೂಪ:-**

ನಾಗಚಂದ್ರ ಒಬ್ಬ ಜೈನಕವಿ. ಈತನ ಕಾಲದ ಬಗ್ಗೆ ವಿದ್ವಾಂಸರಲ್ಲಿ ಒಮ್ಮತ ಅಭಿಪ್ರಾಯವಿಲ್ಲ. ಆದರೂ ಎಲ್ಲರ ಅಭಿಪ್ರಾಯಗಳನ್ನು ಸಂಗ್ರಹಿಸಿ ಈತನ ಕಾಲವನ್ನು ಹನ್ನೆರಡನೆಯ ಶತಮಾನವೆಂದು ಗುರುತಿಸಬಹುದು. ನಾಗಚಂದ್ರನ ಕಾವ್ಯಗಳು ಎರಡು. ಒಂದು ಮಲ್ಲಿನಾಥಪುರಾಣ, ಎರಡನೆಯದು ರಾಮಚಂದ್ರಚರಿತಪುರಾಣಂ. ಈ ಕೃತಿಯಲ್ಲಿ ಕವಿ ತನ್ನನ್ನು ತಾನು ಅಭಿನವಪಂಪನೆಂದು ಕರೆದು ಕೊಂಡಿರುವುದರಿಂದ, ಈ ಕೃತಿಗೆ ಪಂಪರಾಮಾಯಣ ಎಂದು ಕರೆಯುವುದು ರೂಢಿ. ಕನ್ನಡದ ದೃಷ್ಟಿಯಲ್ಲಿ ಈ ಕೃತಿ ಅತ್ಯಂತ ಮುಖ್ಯವಾದುದಾಗಿರುತ್ತದೆ. ಏಕೆಂದರೆ ರಾಮಾಯಣದ ಅಧಿಕೃತ ಪಠ್ಯಗಳೆಲ್ಲ ವೈದಿಕ ರಾಮಾಯಣವನ್ನೇ ಅನುಸರಿಸಿದರೆ, ಈ ಕನ್ನಡ ರಾಮಾಯಣ ಅವೈದಿಕ ಸಂಪ್ರದಾಯ ಸೃಷ್ಟಿಸಿದ ಮೊದಲ ಕಾವ್ಯವಾಗಿದೆ. ಜೈನ ಸಂಪ್ರದಾಯದ ಬಹುಮುಖ್ಯ ಕೃತಿ ಈ ರಾಮಚಂದ್ರಚರಿತ ಪುರಾಣ.

ಜೈನ ರಾಮಾಯಣ ಪರಂಪರೆಯಲ್ಲಿ ಮುಖ್ಯವಾಗಿ ಮೂರು ಸಂಪ್ರದಾಯಗಳನ್ನು ಗುರುತಿಸಬಹುದು. ೧.ವಿಮಲಸೂರಿಯ ಸಂಪ್ರದಾಯ ೨.ಸಂಘದಾಸ ಮತ್ತು ಹರಿಷೇಣರ ಸಂಪ್ರದಾಯ ೩.ಗುಣಭದ್ರನ ಸಂಪ್ರದಾಯ. ಈ ಮೂರು ಸಂಪ್ರದಾಯಗಳಲ್ಲಿ ವಿಮಲಸೂರಿಯ ಮಹಾರಾಷ್ಟ್ರೀ ಪ್ರಾಕೃತ ಭಾಷೆಯಲ್ಲಿರುವ 'ಪಉಮಚರಿಯ' ಕೃತಿಯನ್ನು ಮೂಲ ಆಕರವಾಗಿ ರವಿಷೇಣನೆಂಬ ಕವಿಯು ಸ್ವೀಕರಿಸಿ ಸಂಸ್ಕೃತದಲ್ಲಿ 'ಪದ್ಮಪುರಾಣ' ಎಂಬ ಕೃತಿಯನ್ನು ರಚಿಸಿದ್ದಾನೆ. ನಾಗಚಂದ್ರನು ತನ್ನ ಕೃತಿಗೆ ರವಿಷೇಣನ ಈ 'ಪದ್ಮಪುರಾಣ'ವನ್ನೇ ಮೂಲ ಆಕರವನ್ನಾಗಿಸಿಕೊಂಡಿದ್ದಾನೆ. ನಿರೂಪಣೆ, ಸಂಗ್ರಹದೃಷ್ಟಿ ಹೀಗೆ ಸಣ್ಣಪುಟ್ಟ ವ್ಯತ್ಯಾಸಗಳನ್ನು ಹೊರತುಪಡಿಸಿ ಮೂಲದ ಮುಖ್ಯಕಥೆಯನ್ನು ಯಥಾವತ್ತಾಗಿ ಕನ್ನಡಕ್ಕೆ ತಂದಿದ್ದಾನೆ.

ನಾಗಚಂದ್ರನು–ವಿಮಲಸೂರಿ, ರವಿಷೇಣರಂತೆ ಮೊದಲು ರಾವಣಾದಿ ವಂಶಗಳನ್ನು ವರ್ಣಿಸದೆ, ಪೀಠಿಕಾ ಪ್ರಕರಣವಾದ ನಂತರವೇ ದಶರಥನ ಪೂರ್ವಜರಲ್ಲಿ ಒಬ್ಬನಾದ ವಜ್ರಬಾಹುವಿನ ದೀಕ್ಷಾ ಸ್ವೀಕಾರದ ಆಕರ್ಷಕ ಪ್ರಸಂಗದಿಂದ ಆರಂಭಿಸುತ್ತಾನೆ. ಇಂಥ ಎಷ್ಟೋ ದೀಕ್ಷಾ ಸ್ವೀಕಾರಗಳು ಈ ಜೈನ ಧಾರ್ಮಿಕ ಕಾವ್ಯದಲ್ಲಿ ಬರುತ್ತವೆಯಾದರೂ ವಜ್ರಬಾಹುಕುಮಾರ ದೀಕ್ಷೆಯನ್ನು ಪಡೆದ ಸಂಗತಿ ವಿಶಿಷ್ಟವಾದದ್ದು, ಆತ ದೀಕ್ಷೆ ಪಡೆದದ್ದು ವಾನಪ್ರಸ್ಥಕ್ಕೆ ಹೋಗುವ ಕಾಲದಲ್ಲಲ್ಲ. ಮದುವಣಿಗನಾಗಿ ಹೊರಟಾಗ ವಜ್ರಬಾಹು ದೀಕ್ಷೆಯ ದಾರಿಹಿಡಿದದ್ದು ಒಂದು ಆಕಸ್ಮಿಕ. ತುಂಬ ಸಂಕ್ಷಿಪ್ತವಾಗಿ ಬರುವ ಈ ಪ್ರಸಂಗ ಗಮನಾರ್ಹವಾಗಿದೆ.

ಈ ರೀತಿ ಪ್ರಸಿದ್ಧ 'ಇಕ್ಷ್ವಾಕು ವಂಶದಲ್ಲಿ' ವಿಜಯರಥ, ವಜ್ರಬಾಹು, ಪುರಂದರ, ಕೀರ್ತಿಧರ, ಸುಕೌಶಲ ಮೊದಲಾದ ಪ್ರಖ್ಯಾತ ಪುರುಷರು ಆಳ್ವಿಕೆ ನಡೆಸಿದರು–ದೀಕ್ಷೆ ಕೈಗೊಂಡರು. ಮುಂದೆ ಈ ವಂಶದ ಪ್ರಸಿದ್ಧ ರಾಜನಾದ ಅನರಣ್ಯನಿಗೆ ಅನಂತರಥ, ದಶರಥರೆಂಬ ಇಬ್ಬರು ಮಕ್ಕಳು. ಆದರೆ ಅನರಣ್ಯನು, ಗೆಳೆಯನಾದ ಮಾಹಿಷ್ಮತೀ ಪಟ್ಟಣದ ರಾಜ ಸಹಸ್ರಕಿರಣನು ರಾವಣನಿಂದ ರಣರಂಗದಲ್ಲಿ ಸೋತ ಕಾರಣ ಜಿನದೀಕ್ಷೆ ಕೈಗೊಂಡನು ಎಂಬ ಸುದ್ದಿಯನ್ನು ಕೇಳಿಯೇ ತನ್ನ ಒಂದು ತಿಂಗಳ ಮಗನಾದ ದಶರಥನಿಗೆ ಪಟ್ಟಗಟ್ಟಿ ದೀಕ್ಷೆಗೊಂಡನು. ಮತ್ತೊಬ್ಬ ಮಗ ಅನಂತರಥನೂ ತಂದೆಯ ಮನಸ್ಸಿಗೆ ಒಗ್ಗದ ಭೂಮಿಯನ್ನು ನಾನು ಸ್ವೀಕರಿಸುವುದಿಲ್ಲವೆಂದು ಹೇಳಿ ತಂದೆಯ ದಾರಿಯನ್ನು ತುಳಿದನು.

ದಶರಥನು ಯೌವನಕ್ಕೆ ಬಂದ ಮೇಲೆ ಅಪರಾಜಿತೆ, ಸುಮಿತ್ರೆ, ಸುಪ್ರಭೆ ಎಂಬ ಮೂವರು ಪತ್ನಿಯರೊಂದಿಗೆ ಸುಖದಿಂದ ಕಾಲಕಳೆಯುತ್ತಿರಲಾಗಿ "ರಣದೊಳ್ ಜಾನಕಿಯ ದೂಸರಿಂ ಲಂಕಾನಾಥಂ ದಾಶರಥಿಯ ಕೈಯೊಳ್ ಮಡಿಗುಂ" ಎಂಬ ಜ್ಯೋತಿಷ್ಯವಾಣಿಯನ್ನು ಕೇಳಿದ ವಿಭೀಷಣನು ವಿಷಣ್ಣನಾಗಿ ಜಾನಕಿ ಹಾಗೂ ದಾಶರಥಿಯರ ಉತ್ಪತ್ತಿಗೆ ಕಾರಣರಾಗುವ ದಶರಥ ಜನಕರನ್ನು ಕೊಲ್ಲಲು ನಿಶ್ಚಯಿಸುತ್ತಾನೆ. ಈ ರಹಸ್ಯವನ್ನು ನಾರದನಿಂದ ತಿಳಿದ ದಶರಥ ಜನಕರ ಮಂತ್ರಿಗಳು, ತಮ್ಮ ತಮ್ಮ ಅರಸರನ್ನು ಹೋಲುವ ಲೆಪ್ಪದ ಬೊಂಬೆಗಳನ್ನು ಮಾಡಿಸಿ; ಶಯನಗೃಹದಲ್ಲಿ ಮಲಗಿಸಿ, ನಿಜವಾದ ಅರಸರನ್ನು ವೇಷಮರೆಸಿ ದೇಶಪರ್ಯಟನೆ ಕೈಗೊಳ್ಳುವಂತೆ ಸೂಚಿಸಿದರು. ಆ ರೀತಿ ದಶರಥ ಜನಕರು ವೇಷಮರೆಸಿ ತಿರುಗಾಡುತ್ತಾ ಕೌತುಕಮಂಗಳಪುರವನ್ನು ಪ್ರವೇಶಿಸಿದರು. ಅಲ್ಲಿನ ಅರಸ ಶುಭ್ರಮತಿಯ ಮಗಳಾದ ಕೈಕೆಯ ಸ್ವಯಂವರ ನಡೆಯುತ್ತಿತ್ತು. ಅಲ್ಲಿಗೆ ಕುತೂಹಲದಿಂದ ಇವರು ಹೋದರೆ, ಕೈಕೆಯು ಸ್ವಯಂವರದಲ್ಲಿ ದಶರಥನನ್ನೇ ವರಿಸಿದಳು. ಸ್ವಯಂವರಕ್ಕೆ ಬಂದಿದ್ದ ಇತರ ರಾಜರು ಈತ ದಶರಥ ಮಹಾರಾಜನೆಂದು ತಿಳಿಯದೆ ದೇಸಿಗನೆಂದು ಮೇಲೆ ಬಿದ್ದರು. ಆಗ ಕೈಕೆಯ ತಂದೆ ಶುಭ್ರಮತಿ ಒಂದು ರಥವನ್ನು ಹೂಡಿತಂದು ಕೈಕೆಯನ್ನು ಕೂಡಿಸಿಕೊಂಡು ಈ ಸಭೆಯಿಂದ ತೊಲಗು; ತಡೆಯುವುದು ಹದನಲ್ಲ ಎಂದನು. ಆದರೆ ದಶರಥ ಪಲಾಯನವಾದಿಯಾಗದೆ ಅದೇ ರಥವಿಡಿದು ಯುದ್ಧ ಸನ್ನದ್ಧನಾದನು. ಆ ರಣಕೋಲಾಹಲದಲ್ಲಿ ಸಾರಥಿ ಮೂರ್ಛೆ ಹೋದನು. ಆಗ ಕೈಕೆಯೇ ರಥದ ಸಾರಥಿಯಾಗಿ ಯುದ್ಧ ಮಾಡಲು ಸಹಾಯ ಮಾಡಿದಳು. ಅದಕ್ಕಾಗಿ ದಶರಥನು ಕೊಟ್ಟವರವನ್ನು, ಕೈಕೆಯು ಮುಂದೆಂದಾರೂ ಕೇಳುವೆನೆಂದು ಕಾಯ್ದಿರಿಸಿಕೊಂಡಳು. ಹೀಗೆ ದಶರಥನಿಗೆ ಒಟ್ಟು ನಾಲ್ವರು ಹೆಂಡತಿಯರು. ಈ ನಾಲ್ವರಿಗೂ ಕಾಲಕ್ರಮದಲ್ಲಿ ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ಮಕ್ಕಳಾದರು.

ಇತ್ತ ಜನಕನ ಪತ್ನಿಯು ಪ್ರಭಾಮಂಡಲನೆಂಬ ಮಗನನ್ನೂ ಸೀತೆಯೆಂಬ ಮಗಳನ್ನೂ ಪಡೆದಳು. ಹಿಂದಿನ ಜನ್ಮದ ದ್ವೇಷದಿಂದ ಒಬ್ಬ ವಿಯಚ್ಚರನು ಗಂಡು ಮಗುವನ್ನು ಕದ್ದೊಯ್ಯುತ್ತಾನೆ. ರಥನೂಪುರ ಚಕ್ರವಾಳಪುರದ ರಾಜನಾದ ಇಂದುಗತಿಯ ಮಗನಾಗಿ ಬೆಳೆದು ಪ್ರಭಾಮಂಡಲ ಎಂಬ ಹೆಸರಿನಿಂದ ಪ್ರಖ್ಯಾತಿ ಪಡೆಯುತ್ತಾನೆ. ಅಸಂಖ್ಯಾತ ಕಿರಾತರು ಜನಕನ ರಾಜ್ಯವನ್ನು ಸೂರೆಗೊಳ್ಳಲು ಬಂದಾಗ ಜನಕನು ದಶರಥನ ಸಹಾಯ ಬೇಡುತ್ತಾನೆ. ಆಗ ರಾಮನು ರಾಜ್ಯ ವಿಸ್ತರಿಸುವ ವಿಷಯದಲ್ಲಿ ವೈರಿಗಳನ್ನು ಹತ್ತಿಕ್ಕಲು ತಾವು ಹೋಗಬೇಕೇ ಹೊರತು ಇಂಥ ವಿಷಯಕ್ಕಲ್ಲ. ಆ ಕಿರಾತರನ್ನು

ಸದೆಬಡಿಯಲು ನಾನೇ ಸಾಕು, ಅಪ್ಪಣೆಕೊಡಿ; ಹೋಗುತ್ತೇನೆಂದು ಹೊರಡಲು ಲಕ್ಷ್ಮಣನೂ ಅವನನ್ನು ಹಿಂಬಾಲಿಸುತ್ತಾನೆ. ಕಿರಾತರನ್ನು ಸದೆಬಡಿದ ರಾಮನ ಪರಾಕ್ರಮವನ್ನು ನೋಡಿ ಜನಕನು ತನ್ನ ಮಗಳು ಸೀತೆಯನ್ನು ಕೊಡಲು ಬಯಸುತ್ತಾನೆ. ಅದಕ್ಕೆ ಇಂದುಗತಿಯು ಅಡ್ಡಿಪಡಿಸಿ ತನ್ನಲ್ಲಿರುವ ವಜ್ರಾವರ್ತವನ್ನು ಮಣಿಸಲಿ ಎಂದು ಪಣವೊಡ್ಡುತ್ತಾನೆ. ಆ ಸ್ವಯಂವರದಲ್ಲಿ ರಾಮನು ವಜ್ರಾವರ್ತವನ್ನು ಬಾಗಿಸಿ ಸೀತೆಯನ್ನು ವರಿಸುತ್ತಾನೆ. ಲಕ್ಷ್ಮಣನು ಸಾಗರಾವರ್ತವನ್ನು ಮಣಿಸುತ್ತಾನೆ.

ದಶರಥನು ರಾಮನಿಗೆ ರಾಜ್ಯವನ್ನೊಪ್ಪಿಸಿ ತಪಸ್ಸಿಗೆ ತೆರಳಲು ಆಸಕ್ತಿಯನ್ನು ತೋರಿದಾಗ ಭರತನೂ ತಂದೆಯೊಡನೆ ತಪಕ್ಕೆ ತೆರಳಲು ನಿರ್ಧರಿಸುತ್ತಾನೆ. ಅದನ್ನು ತಡೆಯಲು ಕೈಕೆಯಿ ಯೋಚಿಸಿ, ರಾಮನಿಗೆ ಬದಲಾಗಿ ಭರತನಿಗೆ ಪಟ್ಟ ಕಟ್ಟಿಸಿದರೆ ತಪಸ್ಸಿಗೆ ಹೋಗಲು ಸಾಧ್ಯವಾಗದೆ ರಾಜ್ಯದಲ್ಲೇ ನೆಲೆಸುತ್ತಾನೆಂದು ತಾನು ಕಾಪಿಟ್ಟ ವರವನ್ನು ಈ ಸಂದರ್ಭದಲ್ಲಿ ಕೇಳುತ್ತಾಳೆ. ತಾಯಿಯ ಬಯಕೆಯನ್ನು ಮನಗಂಡು ರಾಮನು ಭರತನಿಗೆ ರಾಜ್ಯವಿತ್ತು ಸೀತಾ, ಲಕ್ಷ್ಮಣರೊಡನೆ ವನವಾಸಕ್ಕೆ ತೆರಳುತ್ತಾನೆ. ಮೂಲದಂತೆಯೇ ಇಲ್ಲಿಯೂ ಲಕ್ಷ್ಮಣನು ಅನೇಕ ಸಾಹಸಗಳಿಂದ ಮೆರೆಯುತ್ತಾನೆ.

ವನವಾಸದಲ್ಲೊಂದು ದಿನ ಆಕಸ್ಮಿಕವಾಗಿ ಲಕ್ಷ್ಮಣನು, ಸೂರ್ಯಹಾಸ ಖಡ್ಗವನ್ನು ಪಡೆಯಲು ತಪದಲ್ಲಿ ನಿರತನಾಗಿದ್ದ ಶಂಬುಕನ ತಲೆಯನ್ನು ಕತ್ತರಿಸಿಬಿಟ್ಟನು. ತನ್ನ ಕಂದನನ್ನು ಕೊಂದವನನ್ನು ಕೊಲ್ಲಬೇಕೆಂದು ಬಂದ ಚಂದ್ರನಖೆಯು ರಾಮಲಕ್ಷ್ಮಣರ ರೂಪಕ್ಕೆ ಮನಸೋತಳು. ರಾಮಲಕ್ಷ್ಮಣರಿಬ್ಬರೂ ಅವಳನ್ನು ತಿರಸ್ಕರಿಸಿದರು. ಸೀತೆ ಅದನ್ನು ನೋಡಿ ನಕ್ಕಳು. ಈ ಅವಮಾನ ಸಹಿಸದೆ ಚಂದ್ರನಖೆ ತನ್ನ ಪತಿ ಖರನಲ್ಲಿ ದೂರಿಟ್ಟಳು. ಆತ ಸೇಡು ತೀರಿಸಿಕೊಳ್ಳಲು ಯುದ್ಧಕ್ಕೆ ಹೊರಟ. ಲಕ್ಷ್ಮಣನೂ ಯುದ್ಧ ಸನ್ನದ್ಧನಾದ. ಚಂದ್ರನಖೆ ಲಂಕೆಗೂ ಹೋಗಿ ಅಣ್ಣನಲ್ಲಿ ನಡೆದಿರುವ ವಿಷಯವನ್ನೆಲ್ಲ ಹೇಳಿ ದೂರಿದಳು.

ರಾವಣನು ಖರನಿಗೆ ಯುದ್ಧದಲ್ಲಿ ಸಹಾಯ ಮಾಡಲು ಪುಷ್ಪಕವಿಮಾನವೇರಿ ಬಂದನು. ಬರುವ ಮಾರ್ಗದಲ್ಲಿ ರಾಮನೊಡನಿದ್ದ ಸೀತೆಯ ರೂಪಕ್ಕೆ ಮರುಳಾಗಿ ಆಕೆಯನ್ನು ಪಡೆಯಲು ಬಯಸಿದ. ಅವಲೋಕಿನಿ ವಿದ್ಯಾದೇವತೆಯಿಂದ ಉಪಾಯ ಕೇಳಿದ. ದೇವತೆಯು ಬೇಡವೆಂದು ಉಪದೇಶ ಮಾಡಿದರೂ ತನಗೆ ಉಪಾಯ ಮಾತ್ರ ಸಾಕೆಂದು, ಲಕ್ಷ್ಮಣನ ಧ್ವನಿಯಲ್ಲಿ ಸಿಂಹನಾದ

ಮಾಡಿಸಿ, ರಾಮ ಅತ್ತ ಯುದ್ಧಭೂಮಿಗೆ ಹೊರಟಾಗ ಸೀತೆಯನ್ನು ಅಪಹರಿಸಿದ. ಮೂಲದ ರಾವಣನ ಪಾತ್ರಕ್ಕಿಂತಲೂ ನಾಗಚಂದ್ರನು ರಾವಣನ ಪಾತ್ರವನ್ನು ಭಿನ್ನವಾಗಿ ಚಿತ್ರಿಸಿದ್ದಾನೆ. ರಾವಣನ ಅಧಃಪತವನ್ನು ಚಿತ್ರಿಸುವಾಗಲೆಲ್ಲಾ ಅನೇಕ ಜಲೋಪಮೆಗಳನ್ನು ಬಳಸಿದ್ದಾನೆ. ವಿಭೀಷಣ, ಮಾರೀಚರ ಹಿತನುಡಿಗಳು ರಾವಣನಿಗೆ ಈ ಸಂದರ್ಭದಲ್ಲಿ ರುಚಿಸದಾದವು.

ಇತ್ತ ರಾಮಲಕ್ಷ್ಮಣರು ಸೀತೆಯ ಶೋಧಕ್ಕೆ ಸುಗ್ರೀವನ ಸಹಾಯ ಪಡೆದರು. ಹನುಮಂತನು; ಸೀತಾಮಾತೆ ಲಂಕೆಯಲ್ಲಿರುವಳೆಂಬ ಸುದ್ದಿಯ ಜೊತೆಗೆ, ಆಕೆಯಿಂದ ಗುರುತಿಗಾಗಿ ಚೂಡಾಮಣಿಯನ್ನೂ ತಂದ. ರಾಮಲಕ್ಷ್ಮಣರು ವಾನರ–ವಿಯಚ್ಚರರ ಸೇನೆಯ ಸಹಾಯ ಪಡೆದು; ಅಪ್ರತಿಮ ಸಾಹಸಿಯೂ, ದರ್ಪ ವೈಭವಗಳಿಗೆ ಹೆಸರಾದವನೂ ಉಗ್ರ ತಪಸ್ಸಿನಿಂದ ಅನೇಕ ಮಾಯಾವಿದ್ಯೆಗಳನ್ನು ಪಡೆದವನೂ ಆದ ರಾವಣನನ್ನು ಯುದ್ಧದಲ್ಲಿ ಗೆದ್ದರು. ಕೊನೆಗೆ ಲಕ್ಷ್ಮಣನಿಟ್ಟ ಚಕ್ರರತ್ನದಿಂದ ರಾವಣನು ಮಡಿದನು. ರಾಮಲಕ್ಷ್ಮಣರು ಲಂಕೆಯಲ್ಲೇ ಕೆಲವು ಕಾಲ ಸುಖವಾಗಿ ಕಾಲ ಕಳೆಯುತ್ತಾ ನೆಲೆಸುವರು.

ಅಯೋಧ್ಯೆಗೆ ಹಿಂತಿರುಗಿದ ನಂತರ ರಾಮನು ಲೋಕಾಪವಾದವನ್ನು ಕೇಳಿ ಸೀತೆಯನ್ನು ಪರಿತ್ಯಾಗ ಮಾಡಿದನು. ಕಾಡಿನಲ್ಲಿ ಶೋಕಿಸುತ್ತಿದ್ದ ಆಕೆಯನ್ನು ಕಂಡು ವಜ್ರಜಂಘನು; ಸೋದರಭಾವದಿಂದ ಪುಂಡರೀಕಿಣೀಪುರಕ್ಕೆ ಕರೆದೊಯ್ದು, ತನ್ನ ಮಗಳ ಆರೈಕೆಯಲ್ಲಿರಿಸಿದ. ನಂತರ ಲವ–ಕುಶರೆಂಬ ಮಕ್ಕಳು ಸೀತೆಗೆ ಜನಿಸಿದರು. ಅವರು ಯೌವನಕ್ಕೆ ಬಂದ ಮೇಲೆ ಸೀತೆಗೆ ರಾಮನಿಂದ ಅವಮಾನವಾದುದನ್ನು ನಾರದರಿಂದ ತಿಳಿದು ಆ ಯುವಕರಿಬ್ಬರೂ ರಾಮ–ಲಕ್ಷ್ಮಣರನ್ನು ಯುದ್ಧದಲ್ಲಿ ಗೆದ್ದರು. ಸೀತೆ ಅಗ್ನಿಪ್ರವೇಶ ಮಾಡಿ ತನ್ನ ಪರಿಶುದ್ಧತೆಯನ್ನು ಪ್ರಕಟಿಸಿ ದೀಕ್ಷೆ ಪಡೆದು ಕಂತಿಯಾದಳು. ಲಕ್ಷ್ಮಣನು ಮರಣಿಸಿದನು. ಅವನ ಶವವನ್ನು ಆರು ತಿಂಗಳು ಹೊತ್ತು ತಿರುಗಿದ ರಾಮನ ವಿಕಲತೆ ಕೊನೆಗೊಂಡು ನಂತರ ದೀಕ್ಷೆ ಪಡೆದು ರಾಮಭಟ್ಟಾರಕನಾಗಿ ಮುಕ್ತಿಯನ್ನು ಪಡೆದನು.

**೨.೩ಬೌದ್ಧ ಪರಂಪರೆಯ ರಾಮಕಥಾಸ್ವರೂಪ:-**

ಪ್ರಾಚೀನ ಬೌದ್ಧ ಸಾಹಿತ್ಯದಲ್ಲಿ ರಾಮಕಥೆಗೆ ಸಂಬಂಧಿಸಿದ 'ದಶರಥಜಾತಕ', 'ಅನಾಮಕಮ್ ಜಾತಕ', 'ದಶರಥ ಕಥನಂ', 'ದೇವದಸ್ಸುಜಾತಕ', 'ಸಾಮಜಾತಕ', 'ಜಯದ್ದೀಪ', 'ವೆಸ್ಸಂತರ' ಹಾಗೂ ಸಂಬಲ ಜಾತಕ ಎಂಬ ಕಥೆಗಳೂ 'ಲಂಕಾವತಾರ ಸೂತ್ರ' ಎಂಬ ಕಾವ್ಯವು ಇರುವುದು ಕಂಡುಬರುತ್ತದೆ. ಇವುಗಳಲ್ಲಿ 'ದಶರಥ ಜಾತಕ', 'ಅನಾಮಕಮ್ ಜಾತಕ' ಹಾಗೂ ದಶರತಕಥನಂ. ಬಹುಮುಖ್ಯವಾದವುಗಳು. ಬೌದ್ಧ ಸಾಹಿತ್ಯವು ಮೂಲತಃ ಪಾಳಿ ಭಾಷೆಯಲ್ಲಿದ್ದು ನಂತರ ಬೇರೆ ಬೇರೆ ಭಾಷೆಗಳಲ್ಲಿ ರಚಿತವಾಗಿರುವುದು, ಅನುವಾದವಾಗಿರುವುದೂ ಕಂಡುಬರುತ್ತದೆ. ಈ ಜಾತಕ ಕಥೆಗಳಲ್ಲಿ ಪರಸ್ಪರ ವ್ಯತ್ಯಾಸವಿರುವುದೂ ಕಂಡುಬರುತ್ತದೆ.

'ದಶರಥ ಜಾತಕ' ಕಥಾಸ್ವರೂಪ[೧೧] : – ದಶರಥ ಜಾತಕದಲ್ಲಿ ರಾವಣನ ಪ್ರಸ್ತಾಪವೇ ಇಲ್ಲ. ಸೀತಾಪಹರಣವೂ ಅದರ ಮುಂದಿನ ಕಥೆಯೂ ಕಂಡುಬರುವುದಿಲ್ಲ. ರಾಮಪಂಡಿತ (ರಾಮನೇ ರಾಮಪಂಡಿತ), ಲಕ್ಷ್ಮಣ ಸೀತೆಯರು ಅಣ್ಣತಂಗಿಯರು. ಒಬ್ಬ ತಾಯಿಯ ಮಕ್ಕಳು. ದಶರಥನ ಹದಿನಾರು ಸಾವಿರ ಹೆಂಡತಿಯರಲ್ಲಿ ಒಬ್ಬಳ ಮಗ ಭರತ. ಭರತನ ತಾಯಿಗೆ ದಶರಥನು ಕೊಟ್ಟಿದ್ದ ವರದ ನಿಮಿತ್ತ ರಾಮ ಲಕ್ಷ್ಮಣ ಸೀತೆಯರು ವನವಾಸ ಕೈಗೊಳ್ಳುವರು. ಭರತನು ಅಣ್ಣನ ಬಳಿಗೆ ಬಂದು ವನವಾಸವನ್ನು ಬಿಟ್ಟು ರಾಜ್ಯ ಸ್ವೀಕಾರ ಮಾಡಲು ಆಗ್ರಹ ಮಾಡಿದರೂ ರಾಮನು ಒಪ್ಪದೆ ವನವಾಸವನ್ನು ಮುಗಿಸಿಬಂದು, ಸೀತೆಯನ್ನು ಮದುವೆಯಾಗಿ ರಾಜ್ಯಭಾರ ಮಾಡುವನು. ಹೀಗೆ ಅಣ್ಣನು ತಂಗಿಯನ್ನು ವರಿಸುವುದು ನಮಗೆ ವಿಚಿತ್ರವಾಗಿ ತೋರಿದರೂ ಬುದ್ಧನು ಹುಟ್ಟಿಬಂದ ಶಾಕ್ಯಕುಲದಲ್ಲಿ ಇದು ರೂಢಿಯಲ್ಲಿದ್ದಿತೆಂದು ಹೇಳುತ್ತಾರೆ. ರಾಮನನ್ನು ಹಲವು ವಿಧದಲ್ಲಿ ಬುದ್ಧನಿಗೆ ಸದೃಶನಾಗಿ ಈ ರಾಮಾಯಣದಲ್ಲಿ ಚಿತ್ರಿಸಲಾಗಿದೆ. ಇದರಿಂದ ಬೌದ್ಧ ರಾಮಾಯಣವು ವಸ್ತುರಚನೆ-ಪಾತ್ರವಿನ್ಯಾಸಗಳ ದೃಷ್ಟಿಯಿಂದ ಅಷ್ಟೇನೂ ಬೆಳವಣಿಗೆ ಹೊಂದದೆ ಪ್ರಾಕೃತವಾಗಿದ್ದಂತೆ ತೋರುತ್ತದೆ.

ಅನಾಮಕ ಜಾತಕ[೧೨] ಕಥಾಸ್ವರೂಪ :- ಅನಾಮಕ ಜಾತಕ ಕಥೆಯು ಸ್ವಲ್ಪ ಭಿನ್ನವೂ ವಿಶಿಷ್ಟವಾದುದು ಆಗಿದೆ. ಇದರ ಪ್ರಕಾರ ರಾಮನಿಗೆ ವನವಾಸ ಪ್ರಾಪ್ತವಾಗುವುದಿಲ್ಲ. ಸೋದರಮಾವನು ದಂಡೆತ್ತಿ ಬಂದಾಗ ಅವನ ಸೈನ್ಯವನ್ನು ಅನವಶ್ಯಕವಾಗಿ ಸಂಹರಿಸಲೊಲ್ಲದ ರಾಮನು ಬೋಧಿಸತ್ವನ ವಾಣಿಯೊಂದಿಗೆ ವನಕ್ಕೆ ತೆರಳುತ್ತಾನೆ. ಬೋಧಿಸತ್ವನ ಮಿತ್ರನಾದ ಕಪಿಯೊಬ್ಬನು ರಾಣಿಯನ್ನು

ಶೋಧಿಸುವ ವಚನವನ್ನೀಯುತ್ತಾನೆ. ರಾಣಿಯನ್ನು ಮುಕ್ತಗೊಳಿಸಿದ ನಂತರ ರಾಜನು "ಪತಿಯಿಂದ ದೂರವಿದ್ದು ಅನ್ಯರ ಮನೆಯಲ್ಲಿ ವಾಸಿಸಿದ ಸ್ತ್ರೀಯರ ವಿಷಯದಲ್ಲಿ ಜನರಿಗೆ ಸಂದೇಹ ಹುಟ್ಟುತ್ತದೆ. ನಿನ್ನನ್ನು ಸ್ವೀಕರಿಸುವಲ್ಲಿ ಪರಂಪರೆಗನುಸರಿಸಿ ಔಚಿತ್ಯವೆಲ್ಲಿದೆ?" ಎಂದಾಗ ರಾಣಿಯು "ನಾನು ಒಬ್ಬ ನೀಚನ ಗುಹೆಯಲ್ಲಿದ್ದೆನಾದರೂ, ನಾನು ಕಮಲದಂತೆ ನಿರ್ಮಲಳಾಗಿರುವೆನು. ನನ್ನಲ್ಲಿ ಸತೀತ್ವವಿದ್ದರೆ ಭೂಮಿಯು ಬಿರಿಯಲಿ ಎಂದು ಹೇಳಿ ತನ್ನ ಸತೀತ್ವವನ್ನು ಪ್ರಮಾಣೀಸುತ್ತಾಳೆ. ಉತ್ತರಕಾಂಡದ ಕಥೆಯ ಸ್ಪಷ್ಟ ಪ್ರಭಾವವಿರುವುದು ಇಲ್ಲಿ ಕಂಡುಬರುತ್ತವೆ.

ದಶರತಕಥನಂ[೧೩] :- ಚೀನಾದ ಕಿಕ್‌ಕಾಯಮ್ ಎಂಬುವವನು ಕ್ರಿ.ಶ.೪೨೭ರಲ್ಲಿ ಝೋ-ಹೋ-ಝೋಕಿಯೋ ಎಂಬ ಗ್ರಂಥವನ್ನು ರಚಿಸಿದ. ಇದರಲ್ಲಿ ಮೊದಲನೆಯ ಕಥೆಯ ಹೆಸರು 'ಹತ್ತು ಭೋಗಗಳ ರಾಜ'. ದಶರಥ ಶಬ್ದದ ರಥ ಎಂಬುದನ್ನು 'ರತ' ಎಂದು ಗ್ರಹಿಸಿ ಈ ಹೆಸರನ್ನೇ ಕೊಟ್ಟಿದ್ದಾನೆ. ಈ ದಶರಥನಿಗೆ ರಾಮ, ರಾಮನ್, ಬರದ ಮತ್ತು ದುಷ್ಟಪರಿಹಾರಕ ಎಂಬ ನಾಲ್ಕು ಮಕ್ಕಳು. ಬರದನ ತಾಯಿಂದ ಪಟ್ಟಾಭಿಷೇಕಕ್ಕೆ ಅಡ್ಡಿ. ರಾಮನು ರಾಮನ್ ಜೊತೆಗೆ ವನವಾಸಕ್ಕೆ ಹೋಗುತ್ತಾನೆ. ದಶರಥ ಸಾಯುತ್ತಾನೆ. ಬರದನಿಗೆ ತಾಯಿಯ ಕೃತ್ಯ ಹಿಡಿಸದೇ, ಕಾಡಿಗೆ ಹೋಗಿ ರಾಮನನ್ನು ಕರೆತರಲು ವಿಫಲನಾಗಿ ಅವನ ಪಾದುಕೆಗಳೊಂದಿಗೆ ಹಿಂದಿರುಗುತ್ತಾನೆ. ಹನ್ನೆರಡು-ವರ್ಷಗಳ ನಂತರ ವನವಾಸ ಮುಗಿಸಿ ಬಂದ ರಾಮನು ಬರದನೇ ರಾಜ್ಯವನ್ನು ಆಳಬೇಕೆಂದು ಬಯಸುತ್ತಾನೆ. ಆದರೆ ಬರದನ ಒತ್ತಾಯಕ್ಕೆ ಮಣಿದು ರಾಮ ರಾಜ್ಯಾಭಿಷೇಕಕ್ಕೆ ಒಪ್ಪಿಕೊಳ್ಳುತ್ತಾನೆ. ಈ ಕಥೆಯಲ್ಲಿ ಸೀತೆ, ರಾವಣರ ಪ್ರಸ್ತಾಪವೇ ಬಂದಿಲ್ಲ.

**೨.೪ ಜಾನಪದ ರಾಮಾಯಣಗಳ ಕಥಾಸ್ವರೂಪ:-**

ಶಿಷ್ಟರಾಮಾಯಣ ಪರಂಪರೆಯಂತೆ ಜಾನಪದ ರಾಮಾಯಣ ಪರಂಪರೆಯು ಶತಮಾನಗಳಿಂದ ಭಾರತದಲ್ಲಿ ಚಾಲ್ತಿಯಲ್ಲಿದೆ. ಜನಪದ ರಾಮಾಯಣಗಳಲ್ಲಿ ರಾಮಾಯಣದ ಬೇರೆ ಬೇರೆ ಪ್ರಸಂಗಗಳು ಬೇರೆ ಬೇರೆ ರೀತಿಯಲ್ಲಿ ಕಥನಕ್ಕೆ ಒಳಪಟ್ಟಿವೆ. ಉದಾಹರಣೆಗಾಗಿ ಕೆಲವು ಪ್ರಸಂಗಗಳನ್ನು ಗಮನಿಸಬಹುದು. 'ಹೇಳುತ್ತೇವೋ ಗುಮ್ಟೆಪದನಾವಾ' ಎಂಬ ಗೀತಸಂಗ್ರಹದಲ್ಲಿ ಸಂಗ್ರಹಿತವಾಗಿರುವ ದಶರಥನಿಗೆ ಸಂತತಿ ಎಂಬ "ಪದವು" ಶಿಷ್ಟ ರಾಮಾಯಣದಿಂದ ಸಾಕಷ್ಟು ಭಿನ್ನವಾಗಿದೆ. ಇಲ್ಲಿ ದಶರಥ ಮಹಾರಾಜನಿಗೆ ಮದುವೆಯಾಗಿ ೬೦ ಸಾವಿರ ವರ್ಷಗಳಾಗಿದ್ದರೂ

ಮಕ್ಕಳಾಗಿಲ್ಲ. ಒಮ್ಮೆ ದಾರಿಯಲ್ಲಿ ಸಿಕ್ಕ ನಾರದ ಮುನಿಯ ಬಳಿ ದಶರಥ ತನ್ನ ದುಃಖವನ್ನು ತೋಡಿಕೊಳ್ಳುತ್ತಾನೆ.

**"ಕೇಳೊ ಕೇಳೊ ನಾರದಮುನಿ ಜೋಮಿ**
**ನನಗೆ ಮೂರು ಮಂದೀ ಹಿಂಡಾರು**
**ಮಕ್ಕಳೊಂದು ಚಂತಾನಿಲ್ಲೆಂದೆ**
**ಎಡೆಬಿಡದೆ ದುಃಖ ಮಾಡೀನೊ"**[೧೪]

ಆಗ ನಾರದ ಮುನಿ ದಶರಥನಿಗೆ ಸಂತಾನ ಪಡೆಯುವ ಮಾರ್ಗವನ್ನು ಹೇಳಿಕೊಡುತ್ತಾನೆ. ಪಾಯಸವನ್ನು ಮಾಡಿ ದಶರಥನ ಮೂರು ಜನ ಹೆಂಡಿರೂ ಸ್ವೀಕರಿಸಬೇಕು. ಹಾಗೆ ಮಾಡಿದಲ್ಲಿ ಅವರಿಗೆ ಸಂತಾನ ಪ್ರಾಪ್ತಿಯಾಗುವುದು. ಹೀಗೆ ಕಥೆ ಮುಂದುವರೆಯುತ್ತದೆ.

ಜನಪದ ರಾಮಾಯಣಗಳಲ್ಲಿ ಸೀತೆಯನ್ನು ಕುರಿತಂತೆ ಕಥಾಪ್ರಸಂಗಗಳೇ ಹೆಚ್ಚು. ಜನಪದ ಕವಿಗಳಲ್ಲಿ ಸ್ತ್ರೀಯರೇ ಹೆಚ್ಚಾದುದರಿಂದ ಅವರು ಹೆಣ್ಣು ಮಕ್ಕಳ ನೋವು ನಲಿವಿನ ಮೇಲೆ ತಮ್ಮ ಮನಸ್ಸನ್ನು ಕೇಂದ್ರೀಕರಿಸಿರುವುದು ಸಹಜವಾಗಿಯೇ ಇದೆ. ಸೀತೆಯ ಹುಟ್ಟಿನ ಬಗ್ಗೆ ಜಾನಪದ ಕವಿಗಳು ವಿಭಿನ್ನ ನೆಲೆಯಿಂದ ಕಥನವನ್ನು ಮಂಡಿಸುತ್ತಾರೆ. ಸೀತೆಯ ಜನನದ ವಿಚಾರ ತಾವರೆ ಹೂವಿನ ಪ್ರಸಂಗ ಮತ್ತು ತಂಬೂರಿ ರಾಮಾಯಣದ ಪ್ರಸಂಗಗಳಲ್ಲಿ ವಿಭಿನ್ನವಾಗಿ ಚಿತ್ರಿತವಾಗಿದೆ. "ತಂಬೂರಿ ರಾಮಾಯಣ"[೧೫]ದ ಪ್ರಕಾರ ಮಂಡೋದರಿಗೆ ಬಹಳ ಕಾಲ ಮಕ್ಕಳಾಗುವುದಿಲ್ಲ. ಹೇಗಾದರೂ ಸರಿ ಮಕ್ಕಳನ್ನು ಪಡೆಯಲೇಬೇಕೆಂದು ಅವಳು ರಾವಣನನ್ನು ಪೀಡಿಸುತ್ತಾಳೆ. ರಾವಣನು ಶಿವನನ್ನು ಕುರಿತು ಘೋರವಾದ ತಪಸ್ಸನ್ನು ಆಚರಿಸಿ, ಶಿವನಿಂದ ಮಾವಿನಹಣ್ಣೊಂದನ್ನು ವರವಾಗಿ ಪಡೆಯುತ್ತಾನೆ. ಹಣ್ಣಿನ ಭಾಗವನ್ನು ಮಂಡೋದರಿಗೆ ಕೊಟ್ಟು, ವಾಟೆಯ ಭಾಗವನ್ನು ರಾವಣನು ತೆಗೆದುಕೊಳ್ಳಬೇಕೆಂದು ಶಿವನು ಆಜ್ಞಾಪಿಸುತ್ತಾನೆ. ಆದರೆ ರಾವಣ ತಾನೇ ಹಣ್ಣನ್ನು ತಿಂದು ವಾಟೆಯನ್ನು ಹೆಂಡತಿಗೆ ಕೊಡುತ್ತಾನೆ. ಇದರಿಂದಾಗಿ ರಾವಣನೇ ಗರ್ಭಧರಿಸುತ್ತಾನೆ.

'ತಾವರೆಹೂವಿನ ಪ್ರಸಂಗ'[೧೬]ದಲ್ಲಿ ರಾವಣನು ತಾವರೆಹೂವನ್ನು ಕಿತ್ತು ಮೂಸಿದ್ದರಿಂದ ತಾವರೆಯ ರೂಪದಲ್ಲಿದ್ದ ಸೀತೆಯು ರಾವಣನ ಮೂಗಿಗೆ ಹೋಗಿ ಸೇರಿಕೊಳ್ಳುತ್ತಾಳೆ. ರಾವಣನು ಸೀನಿದಾಗ ರಾವಣನ ಮೂಗಿನಿಂದ ಸೀತೆ ಉದ್ಭವಿಸುತ್ತಾಳೆ. ರಾವಣ ಸೀನಿದ್ದರಿಂದ ಸೀತೆ ಹುಟ್ಟಿದ್ದು

ಎನ್ನುವ ಕಥೆಯು ಈ ಎರಡು ಪ್ರಸಂಗಗಳಲ್ಲಿ ಸಾಮಾನ್ಯವಾದ ವಿಷಯವಾಗಿದೆ. ಸೀತೆಯಿಂದ ಲಂಕೆಗೆ ಅಮಂಗಳ ಎಂದು ಜ್ಯೋತಿಷಿಗಳು ಹೇಳಿದ್ದರಿಂದ ಮಗುವನ್ನು ಪರಿತ್ಯಜಿಸಲು ರಾವಣ, ಮಂಡೋದರಿ ನಿರ್ಧರಿಸುತ್ತಾರೆ. ಮಗು ಸೀತೆಯನ್ನು ರಾವಣ ಮಂಡೋದರಿಯರು ಒಂದು ಪೆಟ್ಟಿಗೆಯಲ್ಲಿಟ್ಟು ತೇಲಿ ಬಿಡುತ್ತಾರೆ. ನದಿಗೆ ಸ್ನಾನಕ್ಕೆ ಬಂದಿದ್ದ ಜನಕರಾಜನಿಗೆ ಆ ಪೆಟ್ಟಿಗೆ ಸಿಗುತ್ತದೆ. ಹೀಗೆ ಸೀತೆ ಜನಕರಾಜನಿಗೆ ಸಾಕು ಮಗಳಾಗುತ್ತಾಳೆ.

ಜನಪದ ರಾಮಾಯಣದಲ್ಲಿ ನಾವು ಕಾಣುವ ಇನ್ನೊಂದು ಆಕರ್ಷಕ ಪ್ರಸಂಗ ಶ್ರೀರಾಮನ ವನವಾಸಕ್ಕೆ ಸಂಬಂಧಿಸಿದ್ದಾಗಿದೆ. ವಾಲ್ಮೀಕಿ ರಾಮಾಯಣದಲ್ಲಿ ಕಾಣುವಂತೆ ಇಲ್ಲಿಯೂ ಕೂಡ ದಶರಥ ಕೈಕೆಯರೊಡನೆ ವಾದವಿವಾದಗಳಾಗುತ್ತವೆ. ಕೊನೆಗೆ ದಶರಥ ಅಂತಿಮ ತೀರ್ಮಾನವನ್ನು ದಂಡಿನ ತೀರ್ಮಾನಕ್ಕೆ[೧೭] ಒಪ್ಪಿಸುತ್ತಾನೆ. "ದಂಡು" ರಾಮನೇ ರಾಜನಾಗಬೇಕೆಂದು ನಿರ್ಣಯಿಸುತ್ತದೆ. ಆದರೆ ಕೈಕೆಯು ಆ ತೀರ್ಮಾನವನ್ನು ತಿರಸ್ಕರಿಸಿ ತನ್ನ ನಿರ್ಧಾರವನ್ನು ಪ್ರಕಟಿಸುತ್ತಾಳೆ. "ಶ್ರೀರಾಮನು ನಿಜವಾದ ಸತ್ಯವಂತ ಮಗನೇ ಆಗಿದ್ದರೆ ಅವನು ಆನಂದದಡವಿಗೆ ಹೋಗಿ, ಜೇನುಕಲ್ಲು ಮರಡಿಯಲ್ಲಿ ಹನ್ನೆರಡು ವರ್ಷ ತಪಸ್ಸು ಮಾಡಿ ಬರಲಿ ಆಗ ಅವನು ಪಟ್ಟವನ್ನು ಪಡೆಯಲಿ" ಎನ್ನುತ್ತಾಳೆ. ರಾಮ ಕಾಡಿಗೆ ಹೋಗಬೇಕಾಗುತ್ತದೆ. ಆ ವೇಳೆಗೆ ರಾಮನ ತಾಯಿ ಕೌಸಲ್ಯೆ ಸಾವನ್ನಪ್ಪಿರುತ್ತಾಳೆ. ಇಲ್ಲಿ ಮಂಥರೆಯ ಪ್ರಸಂಗ ಬರದಿರುವುದು ವಿಶೇಷವಾಗಿದೆ.

'ದಶರಥನಿಗೆ ಮುಪ್ಪು'[೧೮] ಎಂಬ ಇನ್ನೊಂದು ಪ್ರಸಂಗದಲ್ಲಿ ಆತನು ರಾಮನಿಗೆ ಪಟ್ಟಕಟ್ಟಲು ಏಕೆ ನಿರ್ಧರಿಸಿದ ಎಂಬ ಬಗ್ಗೆ ಒಂದು ವಿಶಿಷ್ಟ ರೀತಿಯ ವಿವರಣೆಯಿದೆ. ಒಮ್ಮೆ ದಶರಥನು ಕೈಯಲ್ಲಿ ಕನ್ನಡಿ ಹಿಡಿದು ತನ್ನ ಮುಖಕಮಲವನ್ನು ನೋಡಿಕೊಳ್ಳುತ್ತಾನೆ. ಆಗ ಅವನಿಗೆ ಒಂದು ಹಣ್ಣುಗೂದಲು ಕಾಣುತ್ತದೆ. ಅವನಿಗೆ ತಾನು ಮುದುಕನಾಗಿರುವುದು ತಿಳಿಯುತ್ತದೆ. ತಕ್ಷಣ ರಾಮನಿಗೆ ಪಟ್ಟಗಟ್ಟಲು ನಿರ್ಧರಿಸುತ್ತಾನೆ.

ಜಾನಪದ ಕವಿಗಳಿಗೆ ಪ್ರಿಯವಾದ ಇನ್ನೊಂದು ರಾಮಾಯಣದ ಪ್ರಸಂಗವೆಂದರೆ ಸೀತಾ ಸ್ವಯಂವರ ಪ್ರಸಂಗ. ಒಂದು ಜನಪದ ರಾಮಾಯಣದಲ್ಲಿ ರಾಮನು ಕಾಡಿಗೆ ಹೋಗುವಾಗ

ಅವನಿಗಿನ್ನೂ ಮದುವೆಯಾಗಿರುವುದಿಲ್ಲ. ರಾಮಲಕ್ಷ್ಮಣರು ಮಾತ್ರ ಕಾಡಿಗೆ ಹೋಗುತ್ತಾರೆ. ವನವಾಸದ ಮಧ್ಯದಲ್ಲಿ ಸೀತೆ ಮತ್ತು ರಾಮರ ವಿವಾಹ ಘಟಿಸುತ್ತದೆ.

'ರಾಗೌ ಅವರು ಸಂಪಾದಿಸಿರುವ, ಹೊನ್ನಾಜಮ್ಮ'[೧೯] ಎಂಬಾಕೆ ಹೇಳಿರುವ 'ಸೀತಾಸ್ವಯಂವರ' ಪ್ರಸಂಗದಲ್ಲಿ, ಸೀತೆ ತನ್ನ ಮಗಳೆಂದು ಗೊತ್ತಿದ್ದೂ ಅವಳನ್ನು ಮದುವೆಯಾಗಲು ರಾವಣ ಬಯಸುತ್ತಾನೆ.

**ನೀವು ಪಡೆದ ಮಕ್ಕಳ ನೀವೇಯೇ ಕೇಳೋದ**
**ನೀವು ಬಿತ್ತಿದ ಬೆಳೆಯ ನೀವೇಯೇ ಉಂಡಾರೆ**
**ಯಾವ ದೇವರಿಗೆ ಸಲ್ಯಾತುರಾವಾಳ**
**ನಾಚಿಕೆಯಿಲ್ಲದೆ ಮಾತಾಡಿ ತಗ್ಗಬೇಡ ರಾವಾಳ**
**ಎದ್ದು ಹೋಗು ನಿನ್ನ ಅರಮನೆಗೆ**

ಜಾನಪದ ರಾಮಾಯಣದ ಈ ಪ್ರಸಂಗದಲ್ಲಿ ಕನ್ಯಾರ್ಥಿಯು ಎತ್ತಬೇಕಾದದ್ದು ಶಿವಧನಸ್ಸನಲ್ಲ, 'ಮದಲಿಂಗಧನಸ್ಸ'ನ್ನು, ರಾವಣ ಧನಸ್ಸನ್ನು ಎತ್ತಲಾರದೆ ಮೈಮೇಲೆ ಎಳೆದುಕೊಳ್ಳುತ್ತಾನೆ. ರಾಮನು ಧನಸ್ಸನ್ನು ಮುರಿದು ಸೀತೆಯನ್ನು ಮದುವೆಯಾಗುತ್ತಾನೆ. ಕಾಡಿನಲ್ಲಿದ್ದ ರಾಮಲಕ್ಷ್ಮಣರು ಸೀತಾಸ್ವಯಂವರಕ್ಕೆ ಬರುವ ಮೊದಲು ಕ್ರೂರವಾದ ಕಾಡುಮೃಗಗಳನ್ನು ಕೊಂದು ತಮ್ಮ ಧೈರ್ಯ ಸಾಹಸಗಳನ್ನು ಮೆರೆಯುತ್ತಾರೆ. ದಾರಿಹೋಕರಿಂದ ಸೀತಾ ಸ್ವಯಂವರದ ವಿಷಯ ತಿಳಿದು ಸ್ವಯಂವರಕ್ಕೆ ಹೋಗುತ್ತಾರೆ. ಸೀತೆಯ ಗುಟ್ಟನ್ನು ತಿಳಿಯಲು ರಾಮಲಕ್ಷ್ಮಣರು ಅನೇಕ ಪರೀಕ್ಷೆಗಳನ್ನು ಒಡ್ಡುತ್ತಾರೆ. ಕೊನೆಗೆ ಸೀತೆಯನ್ನು ಶ್ರೀರಾಮನ ಬಿಲ್ಲುಬಾಣಗಳ ಜೊತೆಗೆ ಮದುವೆ ಮಾಡಲಾಗುತ್ತದೆ.

'ಧನಸ್ಸು ಎತ್ತಿದ್ದು'[೨೦] ಎಂಬ ಮತ್ತೊಂದು ಪ್ರಸಂಗದಲ್ಲಿ ಸೀತೆಯಿನ್ನೂ ಚಿಕ್ಕ ಹುಡುಗಿ. ಮದುವೆಯಾದ ಮೇಲೆ ಅವಳು ಋತುಮತಿಯಾಗುತ್ತಾಳೆ. ಸೀತೆ ಋತುಮತಿಯಾದ ಮೇಲೆ ರಾಮಲಕ್ಷ್ಮಣರು ಅವಳಿಗೆ ಕೊಬ್ಬರಿ, ಬೆಲ್ಲ, ಎಣ್ಣೆ, ಹಣ್ಣುಕಾಯಿ, ಬಾಚಣಿಗೆ, ಅರಿಶಿಣ, ಕುಂಕುಮ, ಚಿಗಳಿ, ತಂಬಿಟ್ಟು ಇತ್ಯಾದಿಗಳನ್ನು ತಂದು ಮಡಿಲು ತುಂಬುತ್ತಾರೆ.

ಇನ್ನೊಂದು ಪ್ರಸಂಗದಲ್ಲಿ ಸ್ವಯಂವರಕ್ಕೆ ಬಂದ ದೂರದೇಶದ ರಾಜರುಗಳಿಗೆ ಜನಕರಾಜನು 'ಕಬ್ಬಿನಹಾಲು, ಎಳನೀರು' ಕೊಟ್ಟು ಸತ್ಕಾರ ಮಾಡುತ್ತಾನೆ. ಋಷಿಮುನಿಗಳು ರಾಮನನ್ನು ಸಭಾಭವನಕ್ಕೆ ಕರೆತರುತ್ತಾರೆ. 'ಚಂದ್ರಶೇಖರ' ಎಂಬ ಹೆಸರಿನ ಧನಸ್ಸನ್ನು ರಾಮನು ಬಗ್ಗಿಸುತ್ತಾನೆ. ಸೀತೆಯು ರಾಮನ ಕಾಲುಗಳಿಗೆ ಎರಗಿ ಅವನ ವಕ್ಷಸ್ಥಳದಲ್ಲಿ ನೆಲೆಸುತ್ತಾಳೆ[೨೧]

ಸೀತಾಸ್ವಯಂವರ[೨೨] ಪ್ರಸಂಗದ ಇನ್ನೊಂದು ಹಾಡಿನಲ್ಲಿ ತುಂಬಾ ವಿಲಕ್ಷಣವಾದ ಕಲ್ಪನೆಗಳಿವೆ. ಒಂದು ಕಾಗೆ ನೈವೇದ್ಯವನ್ನು ಮುಟ್ಟಿ ಕೆಡಿಸಿದ್ದರಿಂದ ಜನಕರಾಜನು ಕೋಪಗೊಳ್ಳುತ್ತಾನೆ. ಆ ಕಾಗೆಯನ್ನು ಹುಡುಕಿ ಕೊಲ್ಲುವುದಕ್ಕೆ ರಾಮಲಕ್ಷ್ಮಣರು ಹೋಗುತ್ತಾರೆ. ಒಬ್ಬನು ಕಾಗೆಯ ರುಂಡವನ್ನು ಮತ್ತೊಬ್ಬನು ಕಾಗೆಯ ಮುಂಡವನ್ನು ಹಿಡಿದುಕೊಂಡು ಬರುತ್ತಾರೆ. ರಾಮ,ಲಕ್ಷ್ಮಣ ಇಬ್ಬರ ಕೈಯಲ್ಲೂ ಕಾಗೆಯ ದೇಹದ ಭಾಗಗಳಿರುವುದರಿಂದ ಸೀತೆಯನ್ನು ಯಾರಿಗೆ ಕೊಡಬೇಕೆಂಬುದರ ಬಗ್ಗೆ ಜನಕರಾಜನಿಗೆ ಗೊಂದಲವಾಗುತ್ತದೆ.[೨೩] ಕಾಡಿನಲ್ಲಿ ನಡೆಯುವಾಗ ಕಲ್ಲು ಮುಳ್ಳು ಚುಚ್ಚಿ ಸೀತೆಯ ಕಾಲಲ್ಲಿ 'ಗುರುಳಿ' ಏಳುತ್ತದೆ. ಆಗ ಲಕ್ಷ್ಮಣ ಸೀತೆಯನ್ನು ತನ್ನ ಹೆಗಲ ಮೇಲೆ ಕುಳಿತುಕೊಳ್ಳಲು ಹೇಳುತ್ತಾನೆ. ಆದರೆ ಪತಿವ್ರತೆಯಾದ ಸೀತೆ ಮೈದುನನ ಹೆಗಲಮೇಲೆ ಕುಳಿತುಕೊಳ್ಳುವುದಿಲ್ಲ. ಮುಂದೆ ರಾಮ, ಹಿಂದೆ ಲಕ್ಷ್ಮಣ, ನಡುವೆ ಸೀತೆ ಹೀಗೆ ಮೂವರು ನಡೆಯುತ್ತಾ ಹಂಪಿಯ ಹೊಳೆಯ ಕಡೆ ಹೋಗುತ್ತಾರೆ.

'ಜಾನಪದ ರಾಮಾಯಣದಲ್ಲಿ ಬರುವ ಸೀತಾಪಹರಣ ಪ್ರಸಂಗವು[೨೪] ವಿಶಿಷ್ಟವಾದುದಾಗಿದೆ. ಇಲ್ಲಿ ರಾವಣನೇ ಮಾಯದ ಜಿಂಕೆಯಾಗಿ ಬರುತ್ತಾನೆ. ಇನ್ನೊಂದು ಪ್ರಸಂಗದಲ್ಲಿ ರಾವಣನು ರಾಮನ ರೂಪದಲ್ಲಿ ಬಂದು ಸೀತೆಯನ್ನು ಅಪಹರಿಸುತ್ತಾನೆ.

'ಇನ್ನೊಂದು ರಾಮಾಯಣ ಪ್ರಸಂಗದಲ್ಲಿ[೨೫] ರಾಮಲಕ್ಷ್ಮಣರು ಜಟಾಯುವಿನ ಮಾತಿನಂತೆ ರಾವಣನನ್ನು ಹುಡುಕುತ್ತಾ ಹೋಗುತ್ತಾರೆ. ದಾರಿಯಲ್ಲಿ ಮರದ ಮೇಲೆ ಹೊನ್ನಿನ ಮೈ, ಹೊನ್ನಿನ ಬಾಲ, ಹೊನ್ನಿನ ಕುಂಡಲದ ಹನುಮಂತ ಕಾಣಿಸುತ್ತಾನೆ. ಹಿಂದ ಬಂಗಾರದ ಜಿಂಕೆ ಬಂದು ನಮ್ಮಿಂದ ಸೀತೆಯನ್ನು ಅಗಲಿಸಿತು. ಈಗ ಈ ಬಂಗಾರದ ಮುದಿಕೋತಿ ಬಂದು ನಮ್ಮಿಬ್ಬರನ್ನು ಅಗಲಿಸುವುದು

ಎಂದು ರಾಮಲಕ್ಷ್ಮಣರು ಮಾತನಾಡಿಕೊಳ್ಳುತ್ತಾರೆ. ಆಗ ಹನುಮಂತನು ಮುಂದೆ ಬಂದು ತನ್ನ ಪರಿಚಯವನ್ನು ಹೇಳಿಕೊಂಡು ರಾಮನ ಸೇವಕನಾಗುವ ಅವಕಾಶವನ್ನು ಪಡೆಯುತ್ತಾನೆ.

'ಮತಿಘಟ್ಟ ಕೃಷ್ಣಮೂರ್ತಿಯವರು ಸಂಪಾದಿಸಿರುವ ರಾಮಾಯಣದ ಪ್ರಸಂಗವೊಂದರಲ್ಲಿ ರಾಮಲಕ್ಷ್ಮಣ ಸೀತೆಯರ ಮುಂದೆ ಸುಳಿದಾಡುವುದು ಕೆಂಪು ಹಳದಿ ಬಣ್ಣದ ಎರಡು ಪಕ್ಷಿಗಳು. ಅವನ್ನು ಬೇಟೆಯಾಡಲು ರಾಮಲಕ್ಷ್ಮಣರಿಬ್ಬರು ಹೊರಟುಹೋಗುತ್ತಾರೆ'[೨೬]

'ಜಾನಪದ ರಾಮಾಯಣದ ಇನ್ನೊಂದು ಪ್ರಸಂಗದಲ್ಲಿ ವನವಾಸ ಕಾಲದಲ್ಲಿ, ಸೀತಾರಾಮರು ಪಗಡೆಯಾಡುವ ಸಂದರ್ಭದ ವರ್ಣನೆಯಿದೆ'[೨೭] 'ಶೂರ್ಪನಖಾ ಪ್ರಸಂಗ'[೨೮]ದಲ್ಲಿ ಶಂಭುಕನ ಕಥೆ ಕಾಕಾಸುರನ ಕಥೆಗಳು ಸೇರಿಕೊಂಡು ಬಿಡುತ್ತದೆ. ಪಾತಾಳಲೋಕದ ಬ್ಯಾತಾಳಪುರದಲ್ಲಿ ಹಲ್ಲೂರನೆಂಬ ಅರಸನಿದ್ದಾನೆ. ರಾವಣನ ತಂಗಿ ಶೂರ್ಪನಖಿಯೇ ಅವನ ಹೆಂಡತಿ. ಇವರ ಮಗನೇ ಸುಣ್ಣುಮಾರ. ರಾವಣ ದಾಳಿ ಮಾಡಿ ಹಲ್ಲೂರನನ್ನು ಕೊಲ್ಲುತ್ತಾನೆ. ಇದರಿಂದ ದುಃಖಗೊಂಡ ಶೂರ್ಪನಖಿಯು ಸುಣ್ಣುಮಾರನಿಗೆ ಪ್ರತೀಕಾರಕ್ಕೆ ಪ್ರಚೋದಿಸುತ್ತಾಳೆ. ಸುಣ್ಣುಮಾರ ದೇವೇಂದ್ರನಿಂದ ಚಂದ್ರಾಯುಧ ಪಡೆಯಲು ತಪಸ್ಸು ಮಾಡುತ್ತಾನೆ. ಅವನ ಮೇಲೆ ಹುತ್ತ ಬೆಳೆಯುತ್ತದೆ. ಆ ಹುತ್ತದ ಮೇಲೆ ಬೆಳೆದಿರುವ ಗಿಡದಿಂದ ಲಕ್ಷ್ಮಣ ಹಣ್ಣುಕೊಯ್ಯಲು ಬರುತ್ತಾನೆ. ದೇವೇಂದ್ರನಿಂದ ಕಳುಹಿಸಲ್ಪಟ್ಟ ಚಂದ್ರಾಯುಧಕ್ಕೆ ಹುತ್ತದ ಮೇಲಿರುವವನು ಮತ್ತು ಒಳಗಿರುವವನು ಇವರಿಬ್ಬರಲ್ಲಿ ಯಾರ ಬಳಿಗೆ ಹೋಗಬೇಕೆಂಬ ಗೊಂದಲ ಉಂಟಾಗುತ್ತದೆ. ಯಾರು ಮೊದಲು ಕರೆಯುತ್ತಾರೊ ಅವರ ಬಳಿಗೆ ಹೋಗು ಎಂದು ದೇವೇಂದ್ರ ಹೇಳುತ್ತಾನೆ. ಲಕ್ಷ್ಮಣ ಮೊದಲು ಕರೆದಿದ್ದರಿಂದ ಚಂದ್ರಾಯುಧ ಲಕ್ಷ್ಮಣನ ವಶವಾಗುತ್ತದೆ. ಚಂದ್ರಾಯುಧದ ಹರಿತವನ್ನು ಪರೀಕ್ಷೆಮಾಡಲು ಲಕ್ಷ್ಮಣ ಹುತ್ತಕ್ಕೆ ಹೊಡೆದಾಗ ಸುಣ್ಣುಮಾರನ ಕತ್ತು ಕತ್ತರಿಸಿಹೋಗುತ್ತದೆ. ತನ್ನ ಮಗನ ಕೊಲೆಯನ್ನು ತಿಳಿದ ಶೂರ್ಪನಖಿಯು ಶೋಕಿಸುತ್ತಾ ಇದಕ್ಕೆ ಪ್ರತೀಕಾರ ಮಾಡಬೇಕೆಂದು ಕಾಗೆಯೊಂದನ್ನು ಬೇಡಿಕೊಳ್ಳುತ್ತಾಳೆ. ಕಾಗೆಯು ರಾಮಲಕ್ಷ್ಮಣಸೀತೆ ಇದ್ದ ಕಡೆ ಬಂದು ಅವರನ್ನು ಹಿಂಸಿಸುತ್ತದೆ. ರಾಮನು ಬಾಣವನ್ನು ಬಿಟ್ಟು ಕಾಗೆಯನ್ನು ಕೊಲ್ಲುತ್ತಾನೆ. ಹೀಗೆ ಜಾನಪದ ರಾಮಾಯಣದ ಈ ಪ್ರಸಂಗದಲ್ಲಿ ಶಿಷ್ಟರಾಮಾಯಣದ ಮೂರು ಪ್ರಸಂಗಗಳು ಮೇಳೈಸಿರುವುದನ್ನು ನೋಡಬಹುದು.

'ಸೇತುವೆ ಸಂಧಿ'[೨೯] ಪ್ರಸಂಗದಲ್ಲಿ ರಾಮನು ರಾವಣನನ್ನು ಕೊಂದು ಲಂಕೆಯಿಂದ ಹಿಂದಿರುಗಿ ರಾಮೇಶ್ವರದ ಬಳಿಬರುತ್ತಾನೆ. ಅಲ್ಲಿ ಒಂದು ಲಿಂಗವನ್ನು ಸ್ಥಾಪಿಸಲು ನಿರ್ಧರಿಸಿ ಹನುಮಂತನನ್ನು ಕಾಶಿಗೆ ಕಳುಹಿಸುತ್ತಾನೆ. ಕಾಶಿಯಿಂದ ಹನುಮಂತ ಬರುವುದು ಸ್ವಲ್ಪ ವಿಳಂಬವಾಗುತ್ತದೆ. ಆಗ ರಾಮನು ಮರಳಿನಲ್ಲಿ ಲಿಂಗ ಮಾಡಿ ಪೂಜಿಸುತ್ತಾನೆ. ಆ ವೇಳೆಗೆ ಹನುಮಂತ ಹಿಂದಿರುಗಿ ಮರಳುಲಿಂಗವನ್ನು ಕಿತ್ತುಹಾಕಲು ಪ್ರಯತ್ನಿಸುತ್ತಾನೆ. ಎಷ್ಟು ಎಳೆದರೂ ಮರಳುಲಿಂಗ ಅಲುಗಾಡುವುದಿಲ್ಲ. ರಾಮ ಹನುಮಂತನನ್ನು ಸಮಾಧಾನಪಡಿಸಿ ಶಿವನ ಗುಡಿಯ ಮುಂದೆ ನಿನ್ನ ಗುಡಿಯನ್ನು ಕಟ್ಟಿಸುತ್ತೇನೆಂದು ಹನುಮಂತನಿಗೆ ಮಾತು ಕೊಡುತ್ತಾನೆ. ಇಲ್ಲಿ ಜಾನಪದರು ಶಿವನ ಆತ್ಮಲಿಂಗದ ಕಥೆಯನ್ನು ರಾಮಾಯಣದ ಕೃತಿಗೆ ಕಸಿಮಾಡಿರುವುದು ಕಂಡುಬರುತ್ತದೆ.

ಕೆಲವು ಜಾನಪದ ರಾಮಾಯಣ ಪ್ರಸಂಗಗಳಲ್ಲಿ ರಾಮರಾವಣರ ನಡುವೆ ಯುದ್ಧವೇ ನಡೆಯುವುದಿಲ್ಲ. ರಾವಣನು ಸೀತೆಯನ್ನು ಅಪಹರಿಸಿ ಮಂಡೋದರಿಯನ್ನು ಒಂದು ಊರಿನಲ್ಲೂ, ಸೀತೆಯನ್ನು ಮತ್ತೊಂದು ಊರಿನಲ್ಲೂ ಇಟ್ಟಿರುತ್ತಾನೆ. ಸೀತೆಯನ್ನು ಹುಡುಕಿಕೊಂಡು ಬರುವ ರಾಮ ಲಕ್ಷ್ಮಣರು ಮೊದಲು ಮಂಡೋದರಿ ಊರಿಗೆ ಬರುತ್ತಾರೆ. ರಾಮ ಲಕ್ಷ್ಮಣರು ದಶರಥನ ಮಕ್ಕಳೆಂದು ಅವರನ್ನು ನೋಡಿದ ಕೂಡಲೇ ಮಂಡೋದರಿ ಗುರುತಿಸುತ್ತಾಳೆ. ರಾಮನನ್ನು ತನ್ನೊಂದಿಗೆ ಪ್ರೀತಿಯಿಂದ ವೀಳ್ಯವನ್ನು ಮೆಲ್ಲಬೇಕೆಂದು ಆಹ್ವಾನಿಸುತ್ತಾಳೆ. ರಾಮ ಇದಕ್ಕೆ ಒಪ್ಪುವುದಿಲ್ಲ. "ಮಂಡೋದರಿಯು ರಾಮ ಲಕ್ಷ್ಮಣರಿಗೆ ಸಮುದ್ರದ ನಡುವೆ ಇರುವ ಉಕ್ಕಿನ ಪಂಜರದೊಳಗಿರುವ ಗಿಳಿಯಲ್ಲಿ ರಾವಣನ ಜೀವ ಇರುವುದನ್ನು ಸೂಚಿಸುತ್ತಾಳೆ. ಆ ಗಿಳಿಯ ರೆಕ್ಕೆಯನ್ನು ಮುರಿದರೆ ರಾವಣನ ರಟ್ಟೆಯು ಮುರಿದು ಹೋಗುತ್ತದೆ. ಗಿಳಿಯ ಕಾಲು ಮುರಿದರೆ ರಾವಣನ ಕಾಲು ಮುರಿದುಹೋಗುತ್ತದೆ. ಗಿಳಿಯ ಕತ್ತುಮುರಿದರೆ ರಾವಣ ಸತ್ತುಹೋಗುತ್ತಾನೆ ಎಂಬ ಗುಟ್ಟನ್ನು ರಾಮ–ಲಕ್ಷ್ಮಣರಿಗೆ ತಿಳಿಸುತ್ತಾಳೆ. ಹೀಗೆ ಗಿಳಿಯ ವಧೆಯ ಮೂಲಕ ರಾವಣನ ವಧೆ ನಡೆದು ಹೋಗುತ್ತದೆ."[೩೦]

'ಕರಿಂಖಾನರು ಸಂಪಾದಿಸಿರುವ ಇನ್ನೊಂದು ಪ್ರಸಂಗದಲ್ಲಿ'[೩೧] ಹನುಮಂತನು ಲಂಕಾದಹನ ಮಾಡಿದಾಗ ಬೆಂಕಿಯನ್ನು ಆರಿಸಲು ರಾವಣನು ನೀರು ಹಾಕುತ್ತಿರುತ್ತಾನೆ. ಆಗ ರಾಮನು ಮಾರುವೇಷದಲ್ಲಿ ಬಂದು ರಾವಣನನ್ನು ಕೊಲ್ಲಲು ಬಾಣ ಹೂಡಿದಾಗ ರಾವಣ ರಾಮನನ್ನು

ಗುರುತಿಸಿ 'ತನ್ನದು ತಪ್ಪಾಯಿತೆಂದು ಕ್ಷಮೆಯನ್ನು ಯಾಚಿಸುತ್ತಾನೆ' ಆದರೂ ರಾಮನು ಬಾಣವನ್ನು ಬಿಟ್ಟು ರಾವಣನನ್ನು ಕೊಲ್ಲುತ್ತಾನೆ. ಹೀಗೆ ಲಕ್ಷಾಂತರ ಯೋಧರ ಸಾವಿಲ್ಲದೆ ರಾವಣನ ವಧೆಯಾಗುತ್ತದೆ.

ಇದೆಲ್ಲಕ್ಕಿಂತ ವಿಶಿಷ್ಟವಾದದ್ದು ಸೀತೆಯ ಅಗ್ನಿಪರೀಕ್ಷೆಯ ಸಂದರ್ಭ. ರಾಗೌ ಮತ್ತು ಸಂಗಡಿಗರು ಸಂಗ್ರಹಿಸಿರುವ, 'ಹೊನ್ನಾಜಮ್ಮ ಹಾಡಿರುವ ಕಥಾಪ್ರಸಂಗ'[೩೨]ದಲ್ಲಿ ಈ ಕಥೆಯ ಪ್ರಸಂಗ ಬಂದಿದೆ. ಇಲ್ಲಿ ರಾಮನು ಸೀತೆಗೆ ಮೂರು ಪರೀಕ್ಷೆಗಳನ್ನು ಒಡ್ಡುತ್ತಾನೆ. ಆ ಪರೀಕ್ಷೆಗಳಲ್ಲಿ ಸೀತೆ ಜಯಶಾಲಿಯಾಗುತ್ತಾಳೆ. ಮರಳಲ್ಲಿ ಮಡಕೆ ಮಾಡಿ ನೀರು ತರುತ್ತಾಳೆ. ಸರ್ಪವನ್ನು ಸಿಂಬೆ ಮಾಡಿ ಕೊಳ್ಳುತ್ತಾಳೆ. ಮುಡಿದ ಮಲ್ಲಿಗೆ ಬಾಡದ ಹಾಗೆ ಉಟ್ಟಿದ್ದ ಪಟ್ಟೆ ಸೀರೆ ಮಾಸದ ಹಾಗೆ ಹಚ್ಚಿಕೊಂಡಿದ್ದ ಅರಿಶಿನಕುಂಕುಮ ಕೆಡದ ಹಾಗೆ "ಕೊಂಡವ"ಹಾದು ಹೊರಗೆ ಬರುತ್ತಾಳೆ. ಆಗ ದಶರಥ ಪ್ರತ್ಯಕ್ಷನಾಗಿ 'ಸೀತೆ ಪರಿಶುದ್ಧಳು'ಎಂದು ಹೇಳುತ್ತಾನೆ.

ಉತ್ತರ ರಾಮಾಯಣದ ಕಥೆಯನ್ನು ಬಳಸಿಕೊಂಡು ಜಾನಪದ ಕವಿಗಳು ಅನೇಕ ಪ್ರಸಂಗಗಳನ್ನು ಕಟ್ಟಿದ್ದಾರೆ. ಅದರಲ್ಲಿ ವಿಶೇಷವಾಗಿ ಗಮನಿಸಬೇಕಾದದ್ದು ಸೀತಾಪರಿತ್ಯಾಗ ಪ್ರಸಂಗ.[೩೩] ರಾಮ ಬೇಟೆಗೆಂದು ಕಾಡಿಗೆ ಹೊರಟಾಗ ಸೀತೆ ಹಟ ಮಾಡಿ ತಾನೂ ಅವನ ಹಿಂದೆ ಹೋಗುತ್ತಾಳೆ. ರಾಮ ಅವಳನ್ನು ಕೊಲ್ಲಲು ಕತ್ತಿಯೆತ್ತಿದಾಗ ಕತ್ತಿಯಲ್ಲಿ ಮಕ್ಕಳ ಪ್ರತಿಬಿಂಬ ಕಾಣಿಸುತ್ತದೆ. ಇನ್ನೊಂದು ಪ್ರಸಂಗದಲ್ಲಿ[೩೪] ಸೀತೆಗೆ ಕಾಡಿನಲ್ಲಿ ಹುಟ್ಟುವುದು ಒಂದೇ ಮಗು. ಆ ಮಗು ಕಾಣದಾದಾಗ ವಾಲ್ಮೀಕಿ ಇನ್ನೊಂದು ಮಗುವನ್ನು ತನ್ನ ಮಂತ್ರಶಕ್ತಿಯಿಂದ ಸೃಷ್ಟಿಸುತ್ತಾನೆ.

ಲವ-ಕುಶರ ಜನನದ ಬಗ್ಗೆ ಕಂಸಾಳೆ ಸಂಪ್ರದಾಯದ ಕುಶ್ಚುಲವುಲು[೩೫] ಎಂಬ ಕಥೆ ಕುತೂಹಲಕಾರಿಯಾಗಿದೆ. ರಾಮನು ಹೊಳೆಯಲ್ಲಿ ಎಸೆದ ಗೊಣ್ಣೆಯು ಕುಶ್ಚಲವುಲು ಎಂಬ ಮೀನುಗಳಾಗುತ್ತವೆ. ಹೊಳೆಯಲ್ಲಿ ಬಿದ್ದ ಸೀತೆಯನ್ನು ಆ ಎರಡು ಮೀನುಗಳು ರಕ್ಷಿಸುತ್ತವೆ. ಅವುಗಳ ಬೇಡಿಕೆಯಂತೆ ಸೀತೆ ತನ್ನ ಮಕ್ಕಳಿಗೆ ಅವುಗಳ ಹೆಸರನ್ನಿಡುತ್ತಾಳೆ.

ತೆಲುಗಿನಲ್ಲಿ ಬರುವ ಜಾನಪದ ರಾಮಾಯಣ[೩೬]ವೊಂದರಲ್ಲಿ ಒಂದು ಆಕರ್ಷಕ ಪ್ರಸಂಗದ ವರ್ಣನೆ ಬರುತ್ತದೆ. ಸೀತೆಯ ಸ್ವಯಂವರವಾಗಿ, ಸೀತೆ ಹೊಸದಾಗಿ ಅಯೋಧ್ಯೆಗೆ ಬಂದಿರುತ್ತಾಳೆ. ರಾತ್ರಿ

ರಾಮ ಬೇಗ ಮಲಗುವ ಕೋಣೆಗೆ ಬರಲು ಸೀತೆಗೆ ಕರೆಯುತ್ತಾನೆ. ಆದರೆ ಸೀತೆ ಬರುವುದು ತಡವಾಗುತ್ತದೆ. ಕಾರಣ ಅವಳು ತನ್ನ ಅತ್ತೆ ಕೌಸಲ್ಯೆಯ ಪಾದಗಳನ್ನು ಒತ್ತ ಬೇಕಾಗಿರುತ್ತದೆ. ತನ್ನ ಮಾವ ದಶರಥನಿಗೆ ಎಲೆ ಅಡಿಕೆ ಮಡಿಸಿಕೊಡಬೇಕಾಗಿರುತ್ತದೆ. ಕೈಕೇಯಿ ಮತ್ತು ಸುಮಿತ್ರ ಇವರಿಗೆ ಗಾಳಿ ಹಾಕಬೇಕಾಗಿರುತ್ತದೆ, ಅಷ್ಟಕ್ಕೆ ಮುಗಿಯಲಿಲ್ಲ. ಅತ್ತೆ ಕೌಸಲ್ಯೆಯ ಹಾಸಿಗೆ ಹಾಸಬೇಕಾಗಿರುತ್ತದೆ. ಇಷ್ಟೆಲ್ಲ ಆದ ಮೇಲೆ ಸೀತೆ ಸ್ನಾನ ಮುಗಿಸಿ, ಅಲಂಕಾರ ಮಾಡಿಕೊಂಡು, ಕನ್ನಡಿ ನೋಡಿ ಸಮಾಧಾನ ಪಟ್ಟುಕೊಂಡು, ತನ್ನನ್ನು ತಾನೇ ನೋಡಿ ಮುಗುಳ್ನಕ್ಕು ಗಂಡನ ಕೋಣೆಗೆ ಧಾವಿಸಿ ಬರುತ್ತಾಳೆ. ಅಷ್ಟರಲ್ಲಿ ಸೀತೆಗಾಗಿ ಕಾದು ಕಾದು ಬೇಸರಗೊಂಡಿದ್ದ ರಾಮ ಬಾಗಿಲನ್ನು ಭದ್ರಪಡಿಸಿ ಮಲಗಿಬಿಟ್ಟಿರುತ್ತಾನೆ. ಸೀತೆ ಏನು ಮಾಡಬೇಕು ಪಾಪ! ಗಟ್ಟಿಯಾಗಿ ಕೂಗುವಂತಿಲ್ಲ, ರಾಮನಿಗೆ ನಿದ್ದೆಯೋ, ಕೋಪವೋ– ಒಟ್ಟಿನಲ್ಲಿ ಅವನು ಕೋಣೆಯ ಬಾಗಿಲು ತೆಗೆಯುತ್ತಿಲ್ಲ.

ಸೀತೆ ಹೇಳುತ್ತಾಳೆ; ನನ್ನ ದೇವರೇ_ ನಿನಗಾಗಿ ನಾನು ಮಲ್ಲಿಗೆ ಹೂ ತಂದಿದ್ದೀನಿ_ನನ್ನ ಕಾಲು ನೋಯುತ್ತಿವೆ_ ಮಳೆ ಪ್ರಾರಂಭವಾಗಿದೆ__ ನನ್ನ ಬಟ್ಟೆ ತೋಯುತ್ತಿವೆ_ ಬಂಗಾರದ ಅಗುಳಿ ತೆಗಿ ನನ್ನ ಪ್ರಭುವೆ_! ನನ್ನ ಚೆಲುವಾ_ ಮಳೆ ಜೋರಾಗುತ್ತಿದೆ.. ನನ್ನ ಸೀರೆಯೆಲ್ಲ ತೊಯ್ದು ಹೋಗಿದೆ_ ಇದು ರಾತ್ರಿಯ ನಾಲ್ಕನೇ ಜಾವ_.! ನಿನ್ನ ಕಾಲ ಬಳಿ ಮಲಗಿ ಸ್ವಲ್ಪ ನಿದ್ದೆ ಮಾಡುತ್ತೇನೆ.. ಬಾಗಿಲು ತೆಗಿ ಪ್ರಭುವೇ..!

ರಾಮ ಹೇಳುತ್ತಾನೆ: ನಿನ್ನ ನಿದ್ದೆ ಕೆಟ್ಟರೆ ಕೆಡಲಿ_. ಅದಕ್ಕೆ ನಾನೇನು ಮಾಡಲಿಕ್ಕಾಗುತ್ತೇ ನಿನ್ನ ಕೈಯಲ್ಲಿ ಉರಿಯುತ್ತಿರುವ ದೀಪವೇ ನನ್ನ ಈ ರಾತ್ರಿಯ ಜೊತೆ! ಮಳೆ ಬರುತ್ತಿದ್ದರೆ ನಾನೇನು ಮಾಡಲಿ..? ಹಾಸಿಗೆ ದಿಂಬು ನನಗಂತೂ ಜತೆ ಕೊಡುತ್ತಿವೆ! ನೀನು ತೊಯ್ದರೆ ನನಗೇನಂತೆ?

ಸೀತೆ ರಾಮನ ಮಾತುಗಳಿಂದ ದುಃಖಿತಳಾಗಿ ಆ ಅಪರಾತ್ರಿ ಅತ್ತೆ ಕೌಸಲ್ಯೆಯ ಕೋಣೆಯ ಬಳಿ ಹೋಗುತ್ತಾಳೆ. ರಾಮ ಮಲಗುವ ಕೋಣೆಯ ಬಾಗಿಲು ತೆಗೆಯುತ್ತಿಲ್ಲ ಎಂದು ಅಳುತ್ತಾ ಹೇಳುತ್ತಾಳೆ. ಕೌಸಲ್ಯ ರಾಮನ ಖೋಲಿಯ ಬಳಿ ಬರುತ್ತಾಳೆ. ರಾಮನಿಗೆ ಹೇಳುತ್ತಾಳೆ ರಾಮಾ_ ನೀನು ಮಹಾರಾಜ ದಶರಥನ ಪುತ್ರ_. ನಿನ್ನ ಪತ್ನಿ ರಾಜರ್ಷಿ ಜನಕ ಮಹಾರಾಜನ ಮಗಳು_. ನಿನಗೇನು

ತಲೆಗಿಲೆ ಕೆಟ್ಟಿದೆಯೇ? ಸೀತೆ ಇನ್ನೂ ಚಿಕ್ಕವಳು_..! ಅವಳು ಏನು ತಪ್ಪು ಮಾಡಿದ್ದಾಳೆ ಹೇಳು? ನನ್ನ ಮಗುವೇ ಅವಳನ್ನು ಬಾಗಿಲು ತೆರೆದು ಒಳಗೆ ಕರೆದುಕೋ_.

ರಾಮ ನಗುತ್ತಾ ಬಾಗಿಲು ತೆರೆಯುತ್ತಾನೆ: ಅಮ್ಮ_.. ಹೀಗೆ ನೀನು ಸೊಸೆಯನ್ನು ಉಬ್ಬಿಸಿದರೆ ನಾಳೆ ಅವಳು ನನಗೆ ಮಣೆ ಹಾಕುತ್ತಾಳೆಯೇ?!

ಸೀತೆ ತಲೆ ಬಗ್ಗಿಸಿ ಕೌಸಲ್ಯೆಗೆ ಹೇಳುತ್ತಾಳೆ: ಅತ್ತೇ_.. ನೀವಿನ್ನು ಹೊರಡಿ_. ಪಾಪ! ಮಾವ ಕಾಯುತ್ತಿರುತ್ತಾರೆ_.!

ಕೌಸಲ್ಯೆ ನಿರ್ಗಮಿಸುತ್ತಾಳೆ! ರಾಮ ಸೀತೆಗೆ ಬೆನ್ನುಹಾಕಿ ಮಂಚದ ಮೇಲೆ ಮಲಗಿದ್ದಾನೆ! ಎಷ್ಟು ಕೋಪ ಬಂದಿರಬೇಕು ಸೀತೆಗೆ! ಸ್ವಲ್ಪ ಸಮಯ ಅಷ್ಟೇ! ಬೆಣ್ಣೆ ಬೆಂಕಿಯ ಸಮೀಪ ಎಷ್ಟು ಹೊತ್ತು ಕರಗದೆ ಇರಬಲ್ಲದು? ಸೀತ ತಾನೇ ರಾಮನನ್ನು ಬಾಚಿ ತಬ್ಬಿಕೊಳ್ಳುತ್ತಾಳೆ! ಅಲ್ಲಿಗೆ ಗಂಡ ಹೆಂಡಿರ ನಡುವಿನ ಈ ಸಣ್ಣ ಜಗಳ ಮುಗಿದು ಸುಖಾಂತ ಆದಂತೆ!

ಕೇರಳದ ಮಲಬಾರ್ ಪ್ರಾಂತ್ಯದಲ್ಲಿ ಮುಸ್ಲಿಮರು ರಾಮಕಥೆಯನ್ನು ಕಟ್ಟಿಹಾಡುತ್ತಾರೆ. ಮಲಬಾರ್ ಪ್ರಾಂತ್ಯದ ಈ ಮುಸ್ಲಿಮರನ್ನು ಕೇರಳದಲ್ಲಿ ಮಾಪಿಳ್ಳೆಗಳು ಎಂದು ಕರೆಯುತ್ತಾರೆ. ಸುಮಾರು ಅರವತ್ತು ವರ್ಷಗಳ ಹಿಂದೆ ಅರೆಮರುಳ ಹಸನ್ಕುಟ್ಟಿ ಎಂಬಾತ ಹಾಡುತ್ತಿದ್ದ ರಾಮಾಯಣದ ಒಂದು ಪದ್ಯವಿದು[೩೭]. ಇದರಲ್ಲಿ ರಾಮಾಯಣದ ಹಿಂದೂ ಪಾತ್ರಗಳು ಮಾಪಿಳ್ಳೆಗಳಂತೆ ವರ್ಣಿತರಾಗಿದ್ದಾರೆ! ಕಥೆಯ ಹಿನ್ನೆಲೆ ಹೀಗೆ. ಕಾಡಿನಲ್ಲಿ ಶೂರ್ಪನಖಿ ರಾಮನನ್ನು ನೋಡುತ್ತಾಳಷ್ಟೇ. ಆಗ ಅವಳಿಗೆ ಕೇವಲ ಐವತ್ತಾರು ವರ್ಷ! ದುರಾದೃಷ್ಟವಶಾತ್ ಅವಳ ಸುಲ್ತಾನ್ ತೀರಿಕೊಂಡಿರುವುದರಿಂದ ಇವಳು ಇನ್ನೊಬ್ಬನನ್ನು ಮರುಮದುವೆ ಮಾಡಿಕೊಳ್ಳಲು ಈಗಾಗಲೇ ಲಾವಣ (ರಾವಣ)ನಿಂದ ಅನುಮತಿ ಪಡೆದಾಗಿದೆ. ಯೋಗ್ಯ ವರ ಸಿಕ್ಕರೆ ಮದುವೆ ಮಾಡೋಣೇಳು ಎಂದು ಅಣ್ಣ ಲಾವಣನೂ ಅವಳಿಗೆ ಒಪ್ಪಿಗೆ ಕೊಟ್ಟಿದ್ದಾನೆ. ಶೂರ್ಪನಖಿಗೆ ತಲೆಯಲ್ಲಿ ಬಿಳಿಕೂದಲು ಶುರುವಾಗಿವೆ. ಅವಳು ಇಜ್ಜಿಲು ಮತ್ತು ಜೇನುತುಪ್ಪದ ಲೇಹ ಮಾಡಿಕೊಂಡು ಅದನ್ನು ತಲೆಗೆ ಬಳಿದು ತನ್ನ ವಯಸ್ಸನ್ನು ನಲವತ್ತರ ಸುಮಾರಿಗೆ ಇಳಿಸಿಕೊಂಡಿದ್ದಾಳೆ! ಹಾಳು ಬಾವಿಯಂತೆ ಗುಳಿಬಿದ್ದ ತನ್ನ ಕಣ್ಣುಗಳ ಸುತ್ತಾ ಮೇಕಪ್ಪಿನ ಗೋಡೆ ಕಟ್ಟಿಸಿಕೊಂಡಿದ್ದಾಳೆ. ವಕ್ರಂಬಕ್ರ ಹಲ್ಲುಗಳನ್ನು ಸುತ್ತಿಗೆಯಿಂದ ಜಜ್ಜಿಕೊಂಡು ಸಮಾ ಮಾಡಿಕೊಂಡಿದ್ದಾಳೆ.

ಸದಾ ತಾಂಬೂಲ ಜಗಿಯುತ್ತಾ ತನ್ನ ತುಟಿಗಳನ್ನು ಕೆಂಪಾಗಿ ಇರಿಸಿಕೊಂಡಿದ್ದಾಳೆ. ಜೋತು ಬಿದ್ದ ಸ್ತನಗಳನ್ನು ಹಗ್ಗದಿಂದ ಎತ್ತಿಕಟ್ಟಿಕೊಂಡಿದ್ದಾಳೆ! ಮತ್ತು ಎರಡು ಮಾವಿನ ಹಣ್ಣುಗಳನ್ನು ಕುಪ್ಪಸದಲ್ಲಿ ಬಚ್ಚಿಟ್ಟುಕೊಂಡು ತನ್ನ ವಕ್ಷಪ್ರದೇಶವನ್ನು ಆಕರ್ಷಕವಾಗಿಸಿಕೊಂಡಿದ್ದಾಳೆ! ಈ ಸ್ಥಿತಿಯಲ್ಲಿ ಅವಳು ಲಾಮ(ರಾಮ)ನನ್ನು ನೋಡಿದ್ದು! ಆಕೆ ಏಕ್ ದಂ ಪ್ರೇಮಾಲಾಪಕ್ಕೆ ಶುರುಹಚ್ಚಿಯೇ ಬಿಡುತ್ತಾಳೆ. ಲಾಮ ಅವಳಿಗೆ ಇನ್ನಿಲ್ಲದಂತೆ ಬುದ್ಧಿ ಹೇಳುತ್ತಾನೆ. ಎಲೈ ಸುಂದರೀ_. ಒಂದು ಗಂಡಿಗೆ ಒಂದು ಹೆಣ್ಣು; ಒಂದು ಹೆಣ್ಣಿಗೆ ಒಂದು ಗಂಡು ಇದು ಷರೀಯತ್ತಿನ ನಿಯಮ! ನಿನ್ನ ಸ್ನಾನಕ್ಕೆ ಹೊಂದದ ಎಣ್ಣೆಯನ್ನು ಬಿಸಾಕಿ ಬೇರೆ ಎಣ್ಣೆ ಹಚ್ಚಿ ಸ್ನಾನ ಮಾಡುವುದರಲ್ಲಿ ಏನೂ ತಪ್ಪಿಲ್ಲ! ನನ್ನ ತಮ್ಮ ಲಕ್ಷ್ಮಣನನ್ನು ನೋಡು. ಅವನು ನಿನಗೆ ಸರಿಯಾದ ವರ! ಅವನನ್ನು ನಿಖಾ ಮಾಡಿಕೊ! ಯಾರು ಬೇಡ ಎನ್ನುತ್ತಾರೆ!

ಶೂರ್ಪನಖಿ ಹೇಳುತ್ತಾಳೆ; "ಅಪ್ಪಾ ತರುಣಾ_ ಗಂಡಸು ಐದು ಮಂದಿ ಹುಡುಗಿಯರನ್ನು ಮದುವೆಯಾದರೂ ತಪ್ಪಿಲ್ಲಾ__ ಹುಡುಗಿ ಮಾತ್ರ ಒಬ್ಬನನ್ನೇ ವರಿಸತಕ್ಕದ್ದು_. ಇದು ಮದುವೆಯ ನಿಯಮ_.. ನನ್ನ ಸರದಾರ! ನನ್ನ ಹೂವೇ_. ನನ್ನ ಹಾಲೇ_. ನನ್ನ ಸಕ್ಕರೆಯೇ_. ನನ್ನನ್ನು ನೀನೇ ಮದುವೆಯಾಗೊ ಮಾರಾಯ_..!" ಹೀಗೆ ಕಥೆ ಮುಂದುವರೆಯುತ್ತದೆ! ಕಥನದಲ್ಲಿ ಉದ್ದಕ್ಕೂ ಕಾಣುವ ತಮಾಷೆ ರಂಜಕವಾಗಿದೆ.

ಹೀಗೆ ಜಾನಪದ ಕವಿಗಳು ರಾಮಾಯಣದ ಪ್ರಸಂಗಗಳನ್ನು ನಾನಾ ಬಗೆಯಲ್ಲಿ ಕಥನ ಮಾಡಿದ್ದಾರೆ. ಈ ಕಥನದಲ್ಲಿ ಮುಖ್ಯವಾಗಿ ಗಮನಿಸಬೇಕಾದ್ದು ಕಥೆಯನ್ನು ವಾಸ್ತವಿಕ ನೆಲೆಗೆ ತರುವ ಯತ್ನವನ್ನು. ಪಾತ್ರಗಳು ತಮ್ಮ ಧೀರೋದಾತ್ತತೆಯಿಂದ ದೂರವಾಗಿ ಪಕ್ಕಾ ಹಳ್ಳಿಗರಂತೆ ಇಲ್ಲಿ ವ್ಯವಹರಿಸುತ್ತಾರೆ. ಘಟನೆಗಳ ಚಿತ್ರಣದಲ್ಲಿ ಸಂಭಾವ್ಯತೆಯೇ ಪ್ರಧಾನ ನಿಕಷವಾಗುತ್ತದೆ. ಗ್ರಾಮೀಣ ಆಚರಣೆಗಳು ನಂಬಿಕೆಗಳು ಕಥನದಲ್ಲಿ ಸಹಜವಾಗಿಯೇ ಸ್ಥಾನವನ್ನು ಪಡೆಯುತ್ತವೆ. ಬೇರೆ ಬೇರೆ ಕಥೆಗಳು ಇಲ್ಲಿ ವಿಲಕ್ಷಣವಾಗಿ ಹೆಣೆದುಕೊಳ್ಳುತ್ತವೆ. ಕೆಲವೊಮ್ಮೆ ಮೂಲ ಕಥೆ ಸಂಪೂರ್ಣವಾಗಿ ರೂಪಾಂತರಗೊಳ್ಳುತ್ತದೆ. ಮತ್ತೆ ಕೆಲವು ಬಾರಿ ಹೊಚ್ಚ ಹೊಸ ಕಥೆಗಳನ್ನು ಜಾನಪದ ಕವಿಗಳು ಸ್ವಯಂಕಲ್ಪಕತೆಯಿಂದ ಹೆಣೆಯುತ್ತಾರೆ. ಎಲ್ಲ ಕಥನದ ಹಿಂದಿರುವುದು ಒಂದು ನಿರ್ಬಿಡೆಯ ಮುಕ್ತ ಮನೋಧರ್ಮ; ಖಚಿತವಾದ ಸ್ತ್ರೀಪರ ದೃಷ್ಟಿಕೋನ; ಯುದ್ಧವಿರೋಧಿ ನಿಲುವು; ತಮ್ಮ ತಮ್ಮ ಪರಿಸರವನ್ನು ಕಥೆಯ ಹಂದರಲ್ಲಿ ಜಾಣ್ಮೆಯಿಂದ ಬೆರೆಸಿ ವರ್ಣಿಸುವ ಮನೋಧರ್ಮ ಮತ್ತು ಎಲ್ಲ ಕಡೆಯು ಕಾಣುವ ಗ್ರಾಮೀಣ ಭಾಷೆ ಮತ್ತು ನುಡಿಗಟ್ಟಿನ ಅಕೃತ್ರಿಮ ಬಳಕೆ. ಈ ಜಾನಪದ

ರಾಮಾಯಣ ಪರಂಪರೆಯು ಸಹ ಶಿಷ್ಟ ಕಾವ್ಯ ಪರಂಪರೆಯೊಂದಿಗೆ ಹೇಗೆ ಸಂಬಂಧ ಹೊಂದಿದೆಯೋ ಹಾಗೆಯೇ ಶಿಷ್ಟ ಸಂಪ್ರದಾಯದ ಕಾವ್ಯಗಳಿಗೂ ತನ್ನದೇ ಆದ ಪ್ರಚೋದನೆ ಮತ್ತು ಪ್ರೇರಣೆಗಳನ್ನು ನೀಡುತ್ತದೆ ಎಂಬುದು ಗಮನಿಸಬೇಕಾದ ಮುಖ್ಯವಾದ ಮಾತು.

## ಟಿಪ್ಪಣಿ

೧. ಡಾ.ಹಿರಣ್ಮಯ : ತುಲಸೀದಾಸ, ೧೯೮೧, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ

೨. ಅದೇ : ಪುಟ-೬

೩. ಅದೇ : ಪುಟ-೭

೪. ಲಕ್ಷ್ಮಣದಾಸ್ ವೇಲಣಕರ್ (ಅನು) : ಶ್ರೀರಾಮಚರಿತ ಮಾನಸ, ೨೦೦೮, ಪುಟ-viii

೫. ಅದೇ : ಪುಟ-೧೫೬

೬. ಅದೇ : ಪುಟ-೨೪೦

೭. ಅದೇ : ಪುಟ-೧೬೪

೮. ಅದೇ : ಪುಟ-೧೬೫

೯. ಅದೇ : ಪುಟ-೨೯೧

೧೦. ಎಂ.ವೀರಪ್ಪಮೊಯಿಲಿ : ಶ್ರೀರಾಮಾಯಣ ಮಹಾನ್ವೇಷಣಂ, ಪ್ರಸ್ಥಾನ-೩೬, ಪುಟ-೩೫೬

೧೧. ೧೨. ಡಾ.ಎಸ್.ವಿ.ಪ್ರಭಾವತಿ : ರಾಮಾಯಣ ಪರಂಪರೆಯಲ್ಲಿ ಕನ್ನಡ ರಾಮಾಯಣಗಳು ೨೦೦೫, ಸುಮುಖ ಪ್ರಕಾಶನ, ವಿದ್ಯಾರಣ್ಯನಗರ, ಬೆಂಗಳೂರು.

೧೩. ಡಾ.ಶ್ರೀಧರ ಹೆಗಡೆ ಭದ್ರನ್ : ಆಧುನಿಕ ಕನ್ನಡ ಮಹಾಕಾವ್ಯಗಳು, ೨೦೦೭, ಅಭಿನವ ಪ್ರಕಾಶನ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು.

೧೪. ಎನ್.ಆರ್.ನಾಯಕ. ಸಂ.ಹೇಳುತೇವೋ ಗುಮ್ಮೆ ಪದನಾವಾ. ಜನಪದ ಪ್ರಕಾಶನ, ಹೊನ್ನಾವರ ಪುಟ-೧೭

೧೫. ರಾಗೌ ಮತ್ತು ಸಂಗಡಿಗರು : ಜನಪದ ರಾಮಾಯಣ-ಸೀನುವೆ ಬಂದಾಗ, ಸೀತಮ್ಮ ಹುಟ್ಟುತ್ತಾಳೆ ಪುಟ-೧೫೧

೧೬. ರಾಗೌ ಮತ್ತು ಸಂಗಡಿಗರು : ಜನಪದ ರಾಮಾಯಣ 'ತಾವರೆಹೂವಾಗಿ ಹೊಳೆದಾರ' ಪುಟ-೪

೧೭. ರಾಗೌ ಮತ್ತು ಸಂಗಡಿಗರು : ಜನಪದ ರಾಮಾಯಣ ಪುಟ-೧೭೬

೧೮. ಎನ್.ಆರ್.ನಾಯಕ : ಹೇಳುತೇವೋ ಗುಮ್ಮೆ ಪದನಾವಾ. ಜನಪದ ಪ್ರಕಾಶನ, ಹೊನ್ನಾವರ. ಪುಟ-೧೯

೧೯. ರಾಗೌ ಮತ್ತು ಸಂಗಡಿಗರು : ಜನಪದ ರಾಮಾಯಣ, ಪುಟ-೭

೨೦. ಮತಿಘಟ್ಟ ಕೃಷ್ಣಮೂರ್ತಿ (ಸಂ) : ಗೀತೆಗಳು ಕನ್ನಡ ಜನಪದ ಸಾಹಿತ್ಯ ಭಂಡಾರ, ಸಂಪುಟ-೧, ಪುಟ-೬೫೯ರಿಂದ ೬೬೨. ೧೯೭೫

೨೧. ಮತಿಘಟ್ಟ ಕೃಷ್ಣಮೂರ್ತಿ (ಸಂ) : ಗೀತೆಗಳು ಕನ್ನಡ ಜನಪದ ಸಾಹಿತ್ಯ ಭಂಢಾರ, ಸಂಪುಟ-೧ ಪುಟ-೬೬೨. ೧೯೭೫

೨೨. ರಾಗೌ ಮತ್ತು ಸಂಗಡಿಗರು : ಜನಪದ ರಾಮಾಯಣ, ಪುಟ-೧೯೦

೨೩. ಅಭಿಶಂಕರ್.ಕೆ. : 'ಕಂಪಿಲೆ ಕಮ್ಮಟ' ಇತಿಹಾಸ ದರ್ಶನ, ಸಂಪುಟ-೧, ಬೆಂಗಳೂರು. ಪುಟ-೪೦

೨೪. ರಾಗೌ ಮತ್ತು ಸಂಗಡಿಗರು : ಜನಪದ ರಾಮಾಯಣ, ಪುಟ-೧೨೨

೨೫. ಮತಿಘಟ್ಟ ಕೃಷ್ಣಮೂರ್ತಿ(ಸಂ) : ಗೀತೆಗಳು, ಸಂಪುಟ-೧, ಪುಟ-೬೬೩. ೧೯೭೫

೨೬. ಎಂ.ಬಿ.ನಟರಾಜ್ (ಸಂ), ಎಸ್.ರಾಮಸ್ವಾಮಿ : ಹಾಡಾಕೆ ಬೈಗುಂಟಿ ಬೆಳಗುಂಟಿ, ಕನ್ನಡ ಅಧ್ಯಯನ ಸಂಸ್ಥೆ, ಪುಟ-೨೧,೨೨

೨೭. ಮತಿಘಟ್ಟ ಕೃಷ್ಣಮೂರ್ತಿ (ಸಂ) : ಗೀತೆಗಳು, 'ಲೆತ್ತದ ಸಂಧಿ' ಪುಟ-೬೮೧, ಸಂಪುಟ-೧.೧೯೭೫

೨೮. ರಾಗೌ ಮತ್ತು ಸಂಗಡಿಗರು : ಜನಪದ ರಾಮಾಯಣ, ಪುಟ-೨೫

೨೯. ಮತಿಘಟ್ಟ ಕೃಷ್ಣಮೂರ್ತಿ(ಸಂ) : ಗೀತೆಗಳು, ಸೇತುವೆಸಂಧಿ, ಪುಟ-೬೮೩

೩೦. ರಾಗೌ ಮತ್ತು ಸಂಗಡಿಗರು : ಜನಪದ ರಾಮಾಯಣ, ಪುಟ-೨೨೭

೩೧. ಅದೇ ಪುಟ -೨೩೦

೩೨. ರಾಗೌ ಮತ್ತು ಸಂಗಡಿಗರು : ಜನಪದ ರಾಮಾಯಣ, ಶೂರ್ಪನಖಿ, ಪುಟ-೨೩೦

೩೩. ರಾಗೌ ಮತ್ತು ಸಂಗಡಿಗರು : ಜನಪದ ರಾಮಾಯಣ

೩೪. ಎನ್.ಆರ್.ನಾಯಕ : ಹೇಳುತೇವೋ ಗುಮ್ಮೆ ಪದನಾವಾ, ಪುಟ-೨೪

೩೫. ರಾಗೌ ಮತ್ತು ಸಂಗಡಿಗರು : ಜನಪದ ರಾಮಾಯಣ, ಪುಟ-೧೦೩

೩೬. ಎಚ್.ಎಸ್.ವೆಂಕಟೇಶಮೂರ್ತಿ : ಈ ಮುಖೇನ ರಾಮಾಯಣದ ಎರಡು ಬಗೆಯ ಓದುಗಳು, ಅಂಕಿತ ಪುಸ್ತಕ, ಪುಟ-೨೮೨,೨೮೩. ೨೦೦೮

೩೭. ಅದೇ ಪುಟ-೨೮೩. ೨೮೪

# ಅಧ್ಯಾಯ – ೩

## ಆಧುನಿಕ ಕನ್ನಡ ಸಾಹಿತ್ಯದಲ್ಲಿ ರಾಮಾಯಣದ ಕಥಾಂತರಗಳು

### ೩.೧ ಶ್ರೀರಾಮಾಯಣದರ್ಶನಂ : ಕಥಾಹಂದರ:-

ಈ ಶತಮಾನದ ಮೇರು ಕವಿ ಕುವೆಂಪು ವಿರಚಿತ ಶ್ರೀರಾಮಾಯಣದರ್ಶನಂ ಕಾವ್ಯದ ಕಥಾಹಂದರವನ್ನು ಸ್ಥೂಲವಾಗಿ ಕೆಳಕಂಡಂತೆ ನಿರೂಪಿಸಬಹುದು.

ಋಷಿ ವಾಲ್ಮೀಕಿಯು ಕ್ರೌಂಚಮಿಥುನವನ್ನು ನೋಡುತ್ತಾನೆ. ಅವುಗಳಲ್ಲಿ ಒಂದನ್ನು ಬೇಡನೊಬ್ಬ ಕೊಂದಾಗ ಇನ್ನೊಂದು ಹಕ್ಕಿ ಶೋಕಿಸುತ್ತದೆ. ವಾಲ್ಮೀಕಿಯು ತನ್ನ ತಪಃಶಕ್ತಿಯಿಂದ ಕೆಳಗೆ ಬಿದ್ದ ಹಕ್ಕಿಯನ್ನು ಬದುಕಿಸಿ ತನ್ನ ಕರುಣೆಯನ್ನು ಮೆರೆಯುತ್ತಾನೆ. ಈ ಸಂದರ್ಭದಲ್ಲಿ ವಾಲ್ಮೀಕಿಯ ಜೀವನದ ಪೂರ್ವವೃತ್ತಾಂದ ಪ್ರಸ್ತಾಪವಿದೆ. ಒಂದಾನೊಂದು ಕಾಲದಲ್ಲಿ ವಾಲ್ಮೀಕಿಯೂ ಕೂಡ ಕೊಲೆಯ ಕಲೆಯಲ್ಲಿ ಬಲ್ಲಿದನಾಗಿದ್ದು, ಗರ್ವದಿಂದ ವರ್ತಿಸುತ್ತಿದ್ದನು. ನಾರದ ಮಹಾಋಷಿಯ ದಯೆಯಿಂದ ವಾಲ್ಮೀಕಿಗೆ ಕರುಣೆಯ ಮಹತ್ವ ಅರಿವಾಯಿತು. ಆ ನಂತರ ಅವನು ಅಹಿಂಸಾ ತತ್ವವನ್ನು ಪರಿಗ್ರಹಿಸಿ ತಪಸ್ವಿಯಾದನು. ಈ ಸಂಗತಿಯನ್ನು ವಾಲ್ಮೀಕಿಯು ವ್ಯಾಧನಿಗೆ ತಿಳಿಸಿ ಕ್ರೌಂಚಪಕ್ಷಿಯ ಮೈಯಿಂದ ಬಾಣವನ್ನು ತೆಗೆದು ಸಂಜೀವನಿ ಶಕ್ತಿಯಿಂದ ಅದಕ್ಕೆ ಪ್ರಾಣವನ್ನು ಬರಸಿ, ಹೆಣ್ಣು ಕೊಂಚೆಯ ಸಂಕಟವನ್ನು ಪರಿಹರಿಸಿ ತನ್ನ ಪರ್ಣಕುಟಿಗೆ ಮರಳಿ ಧ್ಯಾನಲೀನನಾದನು. “ಆಗ ಅವನ ಒಳಗಣ್ಣಿಗೆ ಕಾವ್ಯಹೇತುವೂ ನವನವೋನ್ವೇಷಶಾಲಿನಿಯೂ ಆದ ಶಾಶ್ವತ ಪ್ರತಿಭೆಯೂ ದಿವ್ಯಪ್ರಜ್ಞೆಯೂ ಹೊಳೆಯಲಾರಂಭಿಸಿದವು. ಮನಸ್ಸಿಗೆ ದರ್ಶನವೂ ನಾಲಗೆಗೆ ವರ್ಣನೆಯೂ ಚಿಮ್ಮಿದವು. ಭೂತಕ್ಕೆ ಕನ್ನಡಿ ಹಿಡಿದಂತೆ, ಭವಿಷ್ಯಕ್ಕೆ ಮುನ್ನುಡಿಯನ್ನು ನುಡಿದಂತೆ ಕೇಳಿದ ಲೋಕಗಳೆಲ್ಲ ತಣಿಯುವಂತೆ ದರ್ಶನಕ್ಕೆ ತೋರಿದ ರಾಮಾಯಣವನ್ನು ಹಾಡಿದನು”[೧]

ಸರಯೂ ನದೀ ತೀರದಲ್ಲಿ ಇರುವ ಅಯೋಧ್ಯೆಯ ವರ್ಣನೆಯೊಂದಿಗೆ ಪ್ರಧಾನ ಕಥೆ ಪ್ರಾರಂಭವಾಗುತ್ತದೆ. ಮೂವರು ಪತ್ನಿಯರಿದ್ದೂ ಮಕ್ಕಳಿಲ್ಲದ ದಶರಥ ಯಾವುದೇ ರೀತಿಯ ಹಿಂಸೆಗೂ ಅವಕಾಶವಿಲ್ಲದ ವ್ರತವನ್ನು ಆಚರಿಸಿ ಅಗ್ನಿದೇವನಿಂದ ಪಾಯಸವನ್ನು ಪಡೆಯುತ್ತಾನೆ. ದಶರಥನ ರಾಜ್ಯಭಾರದ ವೈಶಿಷ್ಟ್ಯವನ್ನು ಈ ಭಾಗದಲ್ಲಿ ವರ್ಣಿಸಲಾಗಿದೆ. ಅವನು ದೇವೇಂದ್ರನಿಗೆ ಸಮಾನನಾದ

ಚಕ್ರವರ್ತಿಯಾಗಿದ್ದನು. ರಾಜರ್ಶಿಯೂ, ದೀರ್ಘದರ್ಶಿಯೂ, ಸಮದರ್ಶಿಯೂ ಆಗಿದ್ದ ಆ ದೊರೆಗೆ ಉಚ್ಚಕುಲ, ನೀಚಕುಲ ಎಂಬ ಭಿನ್ನ ಭಾವಗಳಿರಲಿಲ್ಲ. ಸಮಬುದ್ಧಿ ಮತ್ತು ದರ್ಪದಿಂದ ಅವನು ರಾಜ್ಯಭಾರವನ್ನು ನಿರ್ವಹಿಸುತ್ತಿದ್ದನು. ತಾನು ಪ್ರಜೆಗಳ ಪ್ರತಿನಿಧಿ ಎಂದು ಭಾವಿಸಿದ್ದನು. ಅವರ ಹಿತರಕ್ಷಣೆ ತನ್ನ ಹೊಣೆ ಎಂಬುದು ಆತನ ನಿಲುವಾಗಿತ್ತು. ಇಷ್ಟು ವೈಭೋಗದಿಂದ ರಾಜ್ಯಭಾರ ಮಾಡುತ್ತಿದ್ದ ದಶರಥನಿಗೆ, ಮೂವರು ಚೆಲುವೆಯರಾದ ಪತ್ನಿಯರಿದ್ದರೂ ಸಂತಾನ ಪ್ರಾಪ್ತಿಯಾಗಿರಲಿಲ್ಲ. ಒಮ್ಮೆ ದಶರಥನು ಅರಮನೆಯ ತೋಟದಲ್ಲಿ, ತಾಯಿಗುಬ್ಬಿಯೊಂದು ತನ್ನ ಮರಿಗೆ ಕೊಡುತ್ತಿದ್ದ ದೃಶ್ಯವನ್ನು ನೋಡಿದನು. ಸಂತಾನಭಾಗ್ಯವಿದ್ದ ಆ ಹಕ್ಕಿಯ ಐಶ್ವರ್ಯದ ಮುಂದೆ ತನ್ನ ಶ್ರೀಮಂತಿಕೆ ಅರ್ಥಹೀನ ಎಂದು ಅವನಿಗೆ ಅನ್ನಿಸಿತು. ಮಕ್ಕಳನ್ನು ಪಡೆಯುವ ಕಾತರತೆ ಅವನಲ್ಲಿ ಮೂಡಿತು. ಆ ವೃದ್ಧನ ಎದೆಯಲ್ಲಿ ಸಂತಾನವನ್ನು ಪಡೆಯಲೇಬೇಕೆಂಬ ಇಚ್ಛೆ ಮೊಳೆಯಿತು. ವಸಿಷ್ಠ, ವಾಮದೇವ ಮೊದಲಾದ ಗುರುಗಳನ್ನು ಕರೆಸಿಕೊಂಡು ತನ್ನ ಚಿಂತೆಗೆ ಕಾರಣವನ್ನು ತಿಳಿಸಿದನು. ಅವನಿಗೆ ಪುತ್ರಕಾಮೇಷ್ಟಿಯಾಗವನ್ನು ಮಾಡುವಂತೆ ಸೂಚಿಸಿದರು. ಆಗ ವಿಚಾರಮತಿಯಾದ ಜಾಬಾಲಿ ಮಹರ್ಷಿಯು ದೊರೆಯ ಬಳಿಗೆ ಬಂದು, ಪೂರ್ವಪದ್ಧತಿಯಂತೆ ಹಿಂಸೆಯಿಂದ ಕೂಡಿದ ಅಶ್ವಮೇಧವನ್ನು ಮಾಡದೆ ಸಾತ್ವಿಕ ವಿಧಾನದಿಂದ ಅಗ್ನಿದೇವತೆಯನ್ನು ಭಜಿಸು. ಪ್ರಜೆಗಳನ್ನೂ ಬಡವರನ್ನೂ ಅವರ ಮನಸ್ಸು ಸತ್ಕರಿಸುವಂತೆ ತಣಿಸು. ಜನ ಮನಸ್ಸಿನ ಶಕ್ತಿಯೇ ಮತ್ತು ಅವರ ಅಭೀಪ್ಸೆಯೆ ಮಹಾತ್ಮರನ್ನು ನಮ್ಮ ಭೂಮಿಗೆ ತಪ್ಪದೇ ಎಳೆದು ತರುತ್ತದೆ ಎಂದು ಬೋಧಿಸಿದರು. ಜಾಬಾಲಿಗಳ ಮಾತಿನಂತೆ ದಶರಥನು ಸಾತ್ವಿಕ ರೀತಿಯಲ್ಲಿ ಯಜ್ಞವನ್ನು ನಡೆಸಿದನು. ಇದರ ಫಲವಾಗಿ ಒಂದು ಹುಣ್ಣಿಮೆಯ ರಾತ್ರಿ ದಶರಥನೂ ಋತ್ವಿಜರೂ ಧ್ಯಾನ ಮಗ್ನರಾಗಿದ್ದಾಗ ಅಗ್ನಿಕುಂಡದಿಂದ ಒಬ್ಬ ತೇಜಸ್ವಿ ಮೂರ್ತಿ ಉದ್ಭವಿಸಿ, ತಾನು ಸೃಷ್ಟಿಶಕ್ತಿಯ ದೂತನೆಂದು, ವಿಶ್ವಶಕ್ತಿ ನಿನ್ನ ವ್ರತವನ್ನು ಮೆಚ್ಚಿದೆಯೆಂದೂ ತಾನು ಕೊಡುತ್ತಿರುವ ಪಾಯಸವನ್ನು ನಿನ್ನ ಪತ್ನಿಯರು ಸ್ವೀಕರಿಸಿದರೆ ಅವರಿಗೆ ಸಂತಾನ ಪ್ರಾಪ್ತಿಯಾಗುವುದೆಂದು ಹೇಳಿದರು. ಪಾಯಸವನ್ನು ಸ್ವೀಕರಿಸಿದ ಕೌಸಲ್ಯೆ, ಸುಮಿತ್ರಾದೇವಿ ಮತ್ತು ಕೈಕೆಯರು ಗರ್ಭಿಣಿಯರಾದರು.

ಚಂದ್ರನಿಗಾಗಿ ಹಂಬಲಿಸುತ್ತಿರುವ ರಾಮನಿಗೆ ಕೈಕೆಯ ದಾಸಿಯಾದ ಮಂಥರೆಯು ಕನ್ನಡಿಯ ಮೂಲಕ ಚಂದ್ರನನ್ನು ತೋರಿಸುತ್ತಾಳೆ. ಈ ಪ್ರಸಂಗವನ್ನು ಕಾವ್ಯದಲ್ಲಿ ಕುವೆಂಪು ಧ್ವನಿಪೂರ್ಣವಾಗಿ ಚಿತ್ರಿಸಿದ್ದಾರೆ. ಶಿಶುರಾಮನು ಆಕಾಶದ ಪೂರ್ಣಚಂದ್ರನನ್ನು ನೋಡಿ, ಚಂದ್ರನು

ತನಗೆ ಬೇಕೆಂದು ತಾಯಿಯನ್ನು ಕಾಡಿದನು. ಅವನ ಕಣ್ಣುಗಳು ಅತ್ತು ಅತ್ತು ಕೆಂಪಾದವು. ಚಿನ್ನದ ಒಡವೆ, ಹಣ್ಣು, ಭಕ್ಷ್ಯಭೋಜ್ಯ ಯಾವುದನ್ನು ಕೊಟ್ಟರೂ ಅವು ಮಗು ರಾಮನಿಗೆ ಬೇಡವಾಯಿತು. ಮಗುವಿನ ರೋಧನವನ್ನು ಕೇಳಿ ದಶರಥನೂ ಅಲ್ಲಿಗೆ ಬಂದನು. ಕೌಸಲ್ಯೆಯಿಂದ ಮಗುವನ್ನು ಎತ್ತಿಕೊಂಡು ಪ್ರಾಣಿ ಪಕ್ಷಿಗಳನ್ನು ತೋರಿಸಿದನು. ಆದರೂ ಮಗು ಅಳುವನ್ನು ನಿಲ್ಲಿಸಲಿಲ್ಲ. ದಾರಿಕಾಣದ ದಶರಥ ಸುಮಂತ್ರನನ್ನು ಕರೆಸಿದನು. ಅವನಿಗೂ ಏನು ಮಾಡಬೇಕೆಂಬುದು ತೋರಲಿಲ್ಲ. ಆಗ ಕೈಕೆಯ ದಾಸಿಯಾಗಿದ್ದ ಕುರೂಪಿ ಮಂಥರೆ, ಮಗುವನ್ನು ಸಮಾಧಾನ ಪಡಿಸುವ ಉಪಾಯವನ್ನು ಸೂಚಿಸಿದಳು. ತನ್ನ ಮಡಿಲಲ್ಲಿದ್ದ ಕನ್ನಡಿಯನ್ನು ತೆಗೆದುಕೊಟ್ಟಳು. ಕೈಕೆ ಕನ್ನಡಿಯನ್ನು ಮಗುವಿಗೆ ತೋರಿಸಿದಾಗ ಅದರಲ್ಲಿ ಚಂದ್ರಬಿಂಬವನ್ನು ಕಂಡು ತಾನು ಚಂದ್ರನನ್ನು ಪಡೆದನೆಂದು ರಾಮ ನಲಿಯತೊಡಗಿದನು. ಆಗ ಮಂಥರೆ ಮುಂದೆ ಬಂದು ರಾಮನನ್ನು ಎತ್ತಿಕೊಳ್ಳಲು ಕೈ ಚಾಚಿದಾಗ, ಕೌಸಲ್ಯೆ, "ಮುಟ್ಟಬೇಡ, ಮುಟ್ಟಬೇಡ, ಮುಟ್ಟಿದರೆ ಅಮಂಗಳ" ಎಂದು ಆಕೆಯನ್ನು ತಡೆದಳು. ಅವಮಾನದಿಂದ ಮಂಥರೆಯ ಕಣ್ಣಲ್ಲಿ ನೀರು ಬಂತು. ಕೋಪದಿಂದ ಅವಳು ಹೆಡೆತುಳಿದ ಹಾವಿನಂತಾದಳು. ಭರತನನ್ನು ಬಿಗಿಯಾಗಿ ಅಪ್ಪಿಕೊಂಡು ಅಲ್ಲಿಂದ ಹೊರಟುಹೋದಳು. ಮುಂದೆ ರಾಮನ ವಿರುದ್ಧ ಮಂಥರೆ ಮನಸ್ಸು ಕಠೋರವಾಗಲು ಈ ಪ್ರಸಂಗವು ಕಾರಣವಾಯಿತು ಎಂಬುದು ಗಮನಿಸಬೇಕಾದ ವಿಶೇಷವಾದ ಅಂಶವಾಗಿದೆ.

ಮಂಥರೆಯ ಪೂರ್ವಕಥೆಯನ್ನು ಸವಿವರವಾಗಿ ನೀಡಲಾಗಿದೆ. ಅವಳು ಕೇಕೆಯ ರಾಜನಿಗೆ ಬೇಟೆಯ ಸಂದರ್ಭದಲ್ಲಿ ಸಿಕ್ಕಿದ ಅನಾಥಶಿಶು. ವಿಕೃತಾಕಾರದ ಅನಾಥ ಮಗುವನ್ನು ರಾಜ ಸಾಕುತ್ತಾನೆ. ಮಂಥರೆ ಕನ್ಯೆಯಾಗಿ ಬೆಳೆಯುತ್ತಿದ್ದಾಗ ಕೈಕೆಯ ಜನನವಾಗುತ್ತದೆ. ಕೈಕೆಯನ್ನು ಆಡಿಸಿ ಬೆಳೆಸುವ ಕೈಂಕರ್ಯ ಮಂಥರೆಗೆ ದೊರಕುತ್ತದೆ. ಮುಂದೆ ದಶರಥನು ಕೈಕೆಯನ್ನು ಮದುವೆಯಾದಾಗ ಮದುವೆಯ ಬಳುವಳಿಯಾಗಿ ಮಂಥರೆ ಅಯೋಧ್ಯೆಗೆ ಬರುತ್ತಾಳೆ. ಅರಮನೆಯಲ್ಲಿ ಎಲ್ಲರಿಂದಲೂ ತಿರಸ್ಕಾರಕ್ಕೆ ಗುರಿಯಾಗುತ್ತಾಳೆ. ಹಾಗಾಗಿ ಅವಳಿಗೆ ಪ್ರಿಯರಾದವರು ಕೈಕೆ ಮತ್ತು ಭರತ ಮಾತ್ರ. ಭರತನ ಬಗ್ಗೆ ಅವಳಿಗಿದ್ದ ಪ್ರೀತಿಯೇ ಕೈಕೆಗೆ ದುರ್ಬೋಧನೆ ನೀಡುವಲ್ಲಿ ಪ್ರೇರಕವಾಗುತ್ತದೆ. ರಾಮ ಕಾಡಿಗೆ ಹೋದ ಮೇಲೆ ಭರತನಿಂದಲೂ ಮಂಥರೆ ತಿರಸ್ಕೃತಳಾಗುತ್ತಾಳೆ. ಭರತನ ಸಂತೋಷಕ್ಕಾಗಿ ರಾಮನನ್ನು ಕರೆತರಲು ಕಾಡಿಗೆ ಹೋಗುತ್ತಾಳೆ. ಅಲ್ಲಿ ದಾವಾಗ್ನಿಯಲ್ಲಿ ಬೆಂದು ಬೂದಿಯಾಗುತ್ತಾಳೆ. ಇಲ್ಲಿಗೆ ಮಂಥರೆ ಕಥೆ ಮುಗಿಯುವುದಿಲ್ಲ. ರಾಮನು ವನವಾಸವನ್ನು ಮುಗಿಸಿಕೊಂಡು ಬರುವುದು ತಡವಾದಾಗ

ಭರತನು ಅಗ್ನಿಪ್ರವೇಶಕ್ಕೆ ಸಿದ್ಧನಾಗುತ್ತಾನೆ. ಚೆಂಕಿಯ ಜ್ವಾಲೆಯಿಂದ ಸುಂದರಮೂರ್ತಿಯೊಂದು ಅವತರಿಸಿ, ರಾಮನು ಹಿಂದಿರುಗುತ್ತಿರುವ ವಿಷಯವನ್ನು ತಿಳಿಸಿ ಭರತನ ಅಗ್ನಿಪ್ರವೇಶವನ್ನು ತಡೆಯುತ್ತದೆ. ಅವಳು ಯಾರೆಂದು ವಿಚಾರಿಸಿದಾಗ 'ಮತ್ತಾರ್ ನಿನ್ನ ಸುಕ್ಷೇಮ ಚಿಂತೆಯೊಳಿರ್ಪಳಾಮಂಥರೆವಿನಾ' ಎಂದು ಉತ್ತರ ಬರುತ್ತದೆ. ಇದು ರಾಮಾಯಣದರ್ಶನದಲ್ಲಿ ಬರುವ ಮಂಥರೆಯ ವೃತ್ತಾಂತ. ಹೀಗೆ ಮಂಥರೆ ಕುವೆಂಪು ಕಾವ್ಯದಲ್ಲಿ ಪ್ರೇಮಮಯಿಯಾಗಿ ಪತಿತೆಯರ ಪ್ರತಿನಿಧಿಯಾಗಿ ಚಿತ್ರಿತಳಾಗಿದ್ದಾಳೆ. ಮಂಥರೆಯ ಪೂರ್ವವೃತ್ತಾಂತ ಈ ಮೊದಲ ಯಾವ ರಾಮಾಯಣ ಪ್ರಸಂಗಗಳಲ್ಲೂ ಕಂಡು ಬರುವುದಿಲ್ಲ. ಇದು ಕುವೆಂಪುರವರ ಸ್ವತಂತ್ರ ಕಲ್ಪನೆಯಾಗಿದೆ. ಒಂದು ದಿನ ಬೈಗಿನಲ್ಲಿ ಕೈಕೆಯ ತಾನು ಬೇಟೆ ಮುಗಿಸಿ ಕಾಡಿನಿಂದ ಹಿಂತಿರುಗುತ್ತಿರುವಾಗ ಶಿಶುವಿನ ರೋಧನ ಅವನಿಗೆ ಕೇಳುತ್ತದೆ. ಹೋಗಿ ನೋಡಿದಾಗ ಮುಳ್ಳು, ಮಣ್ಣು ಮತ್ತು ತರಗೆಲೆಯ ರಾಶಿಯಲ್ಲಿ ಇರುವೆಗಳು ಮುತ್ತಿರುವ ದಸ್ಯುಶಿಶುವೊಂದು ಕಾಣಿಸುತ್ತದೆ. ಆಗ ಮಗು ಅತ್ಯಂತ ಕುರೂಪಿಯಾದ ವಕ್ರತೆಯೇ ಮೈವೆತ್ತ ಹೆಣ್ಣು ಮಗು. ರಾಜನು ಕರುಣೆಯಿಂದ ಆ ಪುಟ್ಟ ಮಗುವನ್ನು ಎತ್ತಿಕೊಂಡು ಇರುವೆಯನ್ನು ವರಸಿ, ಗೂಬೆಯ ಕೂಗಿನ ಅಪಶಕುನವನ್ನು ಅಲಕ್ಷಿಸಿ ಕೂಸನ್ನು ಊರಿಗೆ ತಂದು ಸಾಕುತ್ತಾನೆ. ಕುಳ್ಳಾಗಿ, ಗೂನಾಗಿ, ಕರ್‍ರಗೆ ಆ ಮಗು ಬೆಳೆಯುತ್ತದೆ. ಅರಮನೆಯಲ್ಲಿ ಅವಳು ಯಾರಿಗೂ ಬೇಡವಾದ ಹುಡುಗಿಯಾಗಿ ಬೆಳೆಯುತ್ತಾಳೆ. ಮಾನವ ಪ್ರೇಮದ ಸವಿಯನ್ನೇ ಕಾಣದೇ ಬೆಳೆದ ಈ ಹುಡುಗಿ ಕೌಮಾರ್ಯವನ್ನು ಮುಟ್ಟುವಷ್ಟರಲ್ಲಿ ಕೇಕೆಯ ರಾಜನಿಗೆ ಕೈಕೆ ಮಗಳಾಗಿ ಹುಟ್ಟುತ್ತಾಳೆ. ಕೈಕೆಯನ್ನು ಆಡಿಸುವ ಕೆಲಸಕ್ಕೆ ಅವಳನ್ನು ನೇಮಿಸುತ್ತಾನೆ. ರಾಜಕುಮಾರಿ ಕೈಕೆಯೇ ಮಂಥರೆಗೆ ಜೀವನ ಸರ್ವಸ್ವವಾಗುತ್ತಾಳೆ. ಮಂಥರೆಯ ಈ ಪೂರ್ವವೃತ್ತಾಂತವು ಮುಂದೆ ಕಾವ್ಯದಲ್ಲಿ ಕೈಕೆಯ ಬಗೆಗಿನ ಅದಮ್ಯಪ್ರೀತಿಗೆ ಕಾರಣವಾಯಿತೆಂಬುದನ್ನು ಬಳಸಿಕೊಳ್ಳಲಾಗುತ್ತದೆ.

ವಿಶ್ವಾಮಿತ್ರ ಆಗಮಿಸಿ ರಾಮಲಕ್ಷ್ಮಣರನ್ನು ಯಜ್ಞ ರಕ್ಷಣೆಗೆ ಕರೆದೊಯ್ಯುತ್ತಾನೆ. ತಾಟಕಿಯ ಸಂಹಾರ ಮತ್ತು ಜಾನಕಿಯ ಸ್ವಯಂವರ ನಡೆಯುತ್ತದೆ. ವಿಶ್ವಾಮಿತ್ರನೊಂದಿಗೆ ರಾಮಲಕ್ಷ್ಮಣರು ತಮ್ಮ ಜೀವನದಲ್ಲಿ ಮೊಟ್ಟಮೊದಲಿಗೆ ಕಾಡಿನ ಚೆಲುವನ್ನು ಆಸ್ವಾದಿಸುತ್ತಾರೆ. ಅರಣ್ಯದ ರಮಣೀಯತೆಯ ಮುಂದೆ ತಮ್ಮ ಅರಮನೆಯ ಸಂಪತ್ತು ಅವರಿಗೆ ತೃಣಪ್ರಾಯವೆನಿಸುತ್ತದೆ. ಶ್ರೀರಾಮನು "ಗುರುದೇವ ನಿಮ್ಮ ಕರುಣೆಯಿಂದ ನಮಗೆ ಈ ವನಸುಖ ಲಭಿಸಿತು. ಈ ವನ್ಯಸಂಸ್ಕೃತಿಯ ಮುಂದೆ ಆ ನಾಗರೀಕ ಸಂಸ್ಕೃತಿ ನಿಸ್ಸಾರವಾಗಿ ಕಾಣಿಸುತ್ತಿದೆ" ಎಂದು ವಿಶ್ವಾಮಿತ್ರನಿಗೆ ಹೇಳುತ್ತಾನೆ. ಇಲ್ಲಿ ಕುವೆಂಪುರವರ ಪ್ರಕೃತಿ

ಪ್ರೇಮ, ಪ್ರಕೃತಿಯಲ್ಲೇ ದೈವವನ್ನು ಕಾಣುವ ದಾರ್ಶನಿಕತೆ ಅಭಿವ್ಯಕ್ತಿಪಡೆಯಲು ಅವಕಾಶವಾಗುತ್ತದೆ. ಸೃಷ್ಟಿ ಸೌಂದರ್ಯವನ್ನು ಪ್ರೀತಿಸುವುದೇ ಸೃಷ್ಟಿಕರ್ತನ ಪೂಜೆಯೆಂಬ ಕುವೆಂಪುರವರ ತಾತ್ವಿಕ ದರ್ಶನ ವಿಶ್ವಾಮಿತ್ರನ ಮೂಲಕ ರಾಮನಿಗೆ ಬೋಧಿಸಲ್ಪಡುತ್ತದೆ. ತಾಟಕಿಯ ಸಂಹಾರವಾದ ಮೇಲೆ ರಾಮಲಕ್ಷ್ಮಣರನ್ನು ವಿಶ್ವಾಮಿತ್ರನು ಮಿಥಿಲೆಗೆ ಕರೆತರುತ್ತಾನೆ. ಅಲ್ಲಿ ಜನಕಮಹಾರಾಜನ ಮಗಳಾದ ಸೀತೆಯ ಸ್ವಯಂವರ ನಿಯೋಜಿತವಾಗಿರುತ್ತದೆ. ಹರಧನಸ್ಸನ್ನು ಎತ್ತಿ ಎದೆಯೇರಿಸಿದವರಿಗೆ ಸೀತೆಯನ್ನು ಕೊಟ್ಟು ಮದುವೆ ಮಾಡಲಾಗುವುದೆಂದು ಜನಕನು ಘೋಷಿಸಿರುತ್ತಾನೆ. ಮಿಥಿಲೆಗೆ ಬಂದ ರಾಮಲಕ್ಷ್ಮಣರು ಹೂ ದೋಟವೊಂದರಲ್ಲಿ ವಿಹಾರಿಸುತ್ತಿದ್ದಾಗ ಸೀತೆಯು ಅಲ್ಲಿಗೆ ಊರ್ಮಿಳಾ, ಮಾಂಡವಿ, ಶ್ರುತಕೀರ್ತಿಯರೊಂದಿಗೆ ಬರುತ್ತಾಳೆ. ಮಲ್ಲಿಗೆ ಬಳ್ಳಿಯ ಮರೆಯಲ್ಲಿ ನಿಂತು ಕೊಳದ ನೀರಿಗೆ ಕಲ್ಲು ಎಸೆಯುತ್ತಾ ಆಟವಾಡುತ್ತಿದ್ದ ಲಕ್ಷ್ಮಣನ ಜೊತೆಗಿದ್ದ ರಾಮನನ್ನು ನೋಡುತ್ತಾಳೆ. ರಾಮನನ್ನು ನೋಡಿದೊಡನೆಯೇ ಅವಳ ಮುಖ ಕೆಂಪಾಗುತ್ತದೆ. ನಿತ್ಯವು ಅವಳ ಕನಸಿನಲ್ಲಿ ಕಾಣುತ್ತಿದ್ದ ನೀಲಿಬಣ್ಣದ ತೇಜಸ್ವಿಯ ನೆನಪಾಗುತ್ತದೆ. ತಾನು ನೋಡುತ್ತಿರುವ ತರುಣನೂ, ಕನಸಿನಲ್ಲಿ ತಾನು ಕಾಣುತ್ತಿದ್ದ ಮೂರ್ತಿಯು ಬೇರೆ ಬೇರೆಯಲ್ಲ ಎಂಬುದು ಹೊಳೆಯುತ್ತದೆ. ಇದು ವಾಲ್ಮೀಕಿ ರಾಮಾಯಣದಲ್ಲಿ ಇಲ್ಲದ ಒಂದು ಕಲ್ಪನೆ. ಪ್ರಾಯಶಃ ಇದಕ್ಕೆ ಪ್ರೇರಣೆಯನ್ನು ಕುವೆಂಪುರವರು ತುಲಸೀದಾಸರ ಶ್ರೀರಾಮಚರಿತ ಮಾನಸದಿಂದ ಪಡೆದಿರಬಹುದು.

ದಶರಥ ಶ್ರೀರಾಮನಿಗೆ ಪಟ್ಟಗಟ್ಟಲು ಯೋಚಿಸಿದಾಗ ಮಂಥರೆಯು ಕೈಕೆಯ ಮನಸ್ಸನ್ನು ಕೆಡಿಸಿ ರಾಮನ ವನವಾಸಕ್ಕೆ ಕಾರಣಳಾಗುತ್ತಾಳೆ. ಈ ಸಂದರ್ಭದಲ್ಲಿ ಮಂಥರೆಯು ಕಂಡ ಕನಸಿನ ಚಿತ್ರ ವಿಶಿಷ್ಟವಾಗಿದೆ. ಮುದುಕಿಯಾದ ಕೈಕೆಯು, ಮಂಥರೆಯ ಕನಸಿನಲ್ಲಿ ವಿಧವೆಯ ರೂಪದಲ್ಲಿ ಕಾಣುತ್ತಾಳೆ. ಭರತನ ಕೈಹಿಡಿದು ಮರುಭೂಮಿಯೊಂದರಲ್ಲಿ ಅಲೆಯುತ್ತಿರುತ್ತಾಳೆ. ಮಂಥರೆ ಕೂಗಿದರೂ ಕೈಕೆ ಅದಕ್ಕೆ ಓಗೊಡುವುದಿಲ್ಲ. ಕವಿಯು ಕತ್ತಲಿನಲ್ಲಿ ಕೈಕೆ ಮತ್ತು ಭರತ ಮರೆಯಾಗಿ ಹೋಗುತ್ತಾರೆ. ಈ ಘೋರವಾದ ಸ್ವಪ್ನವನ್ನು ಕಂಡ ಎಚ್ಚರಗೊಂಡ ಮಂಥರೆ ಜೇಡನ ಬಲೆಯೊಳಗೆ ಸಿಕ್ಕಿಬಿದ್ದ ಹುಳುವಿನಂತೆ ಒದ್ದಾಡುತ್ತಾಳೆ. ಅಷ್ಟರಲ್ಲಿ ಬೆಳಗಾಗಿ ಶ್ರೀರಾಮನ ಪಟ್ಟಾಭಿಷೇಕದ ಸೂಚನೆಯಾಗಿ, ಮಂಗಳವಾದ್ಯಗಳ ಸಂಭ್ರಮ ಪ್ರಾರಂಭವಾಗಿರುತ್ತದೆ. ಕಾರಣವನ್ನು ತಿಳಿಯುವ ಕುತೂಹಲದಿಂದ ಮಂಥರೆ ರಾಜಬೀದಿಗೆ ಬರುತ್ತಾಳೆ. ಕಲ್ಯಾಣ ಮಂಟಪದ ಬಳಿ ರಾಮನ ದಾಸಿ ರಾಮಪಟ್ಟಾಭಿಷೇಕದ ವಿಷಯವನ್ನು ಮಂಥರೆಗೆ ತಿಳಿಸುತ್ತಾಳೆ. ಮಂಥರೆ ಕಾಣುವ ಸ್ವಪ್ನ ಭರತನಿಗೆ ಒದಗುವ ಅಮಂಗಳದ

ಸೂಚನೆಯನ್ನು ಅವಳಿಗೆ ಸೂಚಿಸುವಂತಿದೆ. ಶ್ರೀರಾಮನಿಗೆ ಪಟ್ಟವೆಂದರೆ ಮಂಥರೆಯ ದೃಷ್ಟಿಯಲ್ಲಿ ಭರತನಿಗೆ ಅಮಂಗಳದ ಸಂಗತಿತಾನೆ. ಸ್ವಪ್ನ ತಂತ್ರದ ಮೂಲಕ ಭವಿಷ್ಯವನ್ನು ಸೂಚಿಸುವ ತಂತ್ರ ಕಾವ್ಯದ ಉದ್ದಕ್ಕೂ ಕಂಡು ಬರುವುದನ್ನು ನಾವಿಲ್ಲಿ ನೆನೆಯಬೇಕಾಗಿದೆ.

ರಾಮನ ವನವಾಸ ಕಾಲದಲ್ಲಿ ಅವನು ಋಷಿಮುನಿಗಳೊಂದಿಗೆ ಶಾಸ್ತ್ರಾಧ್ಯಯನದಲ್ಲಿ ತೊಡಗುವ ಚಿತ್ರ ಬರುತ್ತದೆ. ಮೂಲದಲ್ಲಿ ಇಲ್ಲದ ಸೀತೆಯ ಅಡುಗೆಯ ಪ್ರಸಂಗದಂತಹ ದೈನಿಕ ವೃತ್ತಾಂತಗಳ ಮತ್ತು ಶ್ರೀರಾಮನ ಹಾಸ್ಯ ಪ್ರವೃತ್ತಿಯನ್ನು ಸೂಚಿಸುವ ಪ್ರಸಂಗದ ವರ್ಣನೆ ಕಾಣುತ್ತದೆ. ಸೀತೆಯು ಹಸಿಯ ಸೌದೆ ಹತ್ತದೆ ಹೊಗೆ ತುಂಬಿಕೊಂಡು ಮುಖಮೋರೆಯೆಲ್ಲ ಕಪ್ಪಾಗಿಸಿಕೊಳ್ಳುತ್ತಾಳೆ. ಅದೇ ವೇಳೆಗೆ ವಜ್ರರೋಮ ಎಂಬ ಋಷಿಯ ಆಶ್ರಮದಿಂದ ಅಧ್ಯಯನವನ್ನು ಮುಗಿಸಿಕೊಂಡು ಪರ್ಣಕುಟಿಗೆ ರಾಮನು ಹಿಂದಿರುಗುತ್ತಾನೆ. ತುಂಬಾ ಹಸಿವು, ಉಣಿಸಬೇಕು ಎಂದು ರಾಮ ಕೇಳಿದಾಗ, ಹೊಗೆಯನ್ನೇ ಉಣ್ಣಿ, ಹಸಿಯ ಸೌದೆಯಿಂದ ಅಡುಗೆಯಾಗುತ್ತದೆಯೇ ಎಂದು ಸೀತೆ ಉತ್ತರಿಸುತ್ತಾಳೆ. ರಾಮ ಹೊಗೆ ತುಂಬಿದ ಪರ್ಣಕುಟಿಯೊಳಗೆ ಹೋಗಿ ನೋಡಿದಾಗ, ಮುಸುಡಿಯೆಲ್ಲ ಮಸಿಯಾದ ಮಡದಿ ಕಾಣುತ್ತಾಳೆ. ಹೊರಗೆ ಬಂದು ಅಳ್ಳೆ ಬಿರಿಯುವಂತೆ ನಗತೊಡಗುತ್ತಾನೆ. ಆಗ ತಾನೆ ಲಕ್ಷ್ಮಣ ಬರಲು ರಾಮ ಅವನಿಗೆ 'ಒಳಗೆ ಹೋಗಿ ನೋಡು ಅತ್ತಿಗೆಗೆ ಬದಲು ಒಂದು ಕೋತಿ ಮನೆಯೊಳಗೆ ಸೇರಿಕೊಂಡಿದೆ ಎಂದು ಹೇಳುತ್ತಾನೆ. ಲಕ್ಷ್ಮಣ ಒಳಗೆ ಹೋಗಿ ನೋಡುತ್ತಾನೆ. ಆದರೆ ನಗುವುದಿಲ್ಲ. ತಪ್ಪು ನನ್ನದು, ಹಸಿಯ ಸೌದೆಯನ್ನು ತಂದ ಅಪರಾಧಿಯನ್ನು ಕ್ಷಮಿಸಿ ಎನ್ನುತ್ತಾನೆ. ಒಣಪುಳ್ಳೆಯನ್ನು ತಂದು, ಹೆಂಡತಿಯನ್ನು ನೆನೆಯುತ್ತ ಲಕ್ಷ್ಮಣನ ಒಲೆ ಊದಿದಾಗ ಉರಿ ಧಗ್ಗನೆ ಹತ್ತಿಕೊಳ್ಳುತ್ತದೆ. ಸೀತೆಯ ಚಿಂತೆಯಿಂದ ಕೂಡಿದ ಮುಖದಲ್ಲಿ ಸಂತೋಷದ ಕಾಂತಿಯು ಚಿಮ್ಮುತ್ತದೆ. ಇದೊಂದು ಸಾಮಾನ್ಯ ದೈನಿಕ ಪ್ರಸಂಗ. ಮೂಲದಲ್ಲಿ ಇಲ್ಲದಂತಹ ಪ್ರಸಂಗ. ಕುವೆಂಪು ಇಂಥ ಪ್ರಸಂಗವನ್ನು ಸೃಷ್ಟಿಸುವ ಮೂಲಕ, ಸೀತಾರಾಮ ಲಕ್ಷ್ಮಣರನ್ನು ಓದುಗರ ಸಮೀಪಕ್ಕೆ ತರುತ್ತಾರೆ. ಹಸಿಸೌದೆಯಿಂದ ಸೀತೆ ಪಡುವ ಸಂಕಟ, ಅವಳ ಮಸಿ ಮೆತ್ತಿದ ಮುಖವನ್ನು ನೋಡಿ ರಾಮನು ಹಾಸ್ಯ ಮಾಡುವ ರೀತಿ, ಆದರೆ ಸೀತೆಯನ್ನು ನೋಡಿ ಲಕ್ಷ್ಮಣ ನಗದೆ ಕ್ಷಮಾಪಣೆ ಕೇಳುವುದು. ಆಯಾ ವ್ಯಕ್ತಿಗಳ ಸ್ವಭಾವವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ. ಲಕ್ಷ್ಮಣ ಊರ್ಮಿಳೆಯ ಹೆಸರನ್ನು ಹೇಳಿ ಒಲೆ ಊದಿದಾಗ ಒಲೆ ಹತ್ತಿಕೊಂಡಿತು ಎನ್ನುವುದಂತೂ ಧ್ವನಿ ಪೂರ್ಣವಾದ ಸಂಗತಿಯಾಗಿದೆ. ಹೀಗೆ

ಸಾಮಾನ್ಯ ಘಟನೆಗಳ ಮೂಲಕ ವ್ಯಕ್ತಿಗಳ ಸ್ವಭಾವವನ್ನು ಚಿತ್ರಿಸುವುದು ಮಹಾಕಾವ್ಯದ ರಚನೆಯ ಸಂದರ್ಭದಲ್ಲಿ ವಿಶಿಷ್ಟವಾಗಿ ಕಂಡುಬರುತ್ತದೆ.

ಜಟಾಯು ಮತ್ತು ಸಂಪಾತಿ,(ಗುಹನೂ ಕೂಡ) ದಶರಥನ ಮಿತ್ರರೆಂಬಂತೆ ಚಿತ್ರಿತರಾಗಿದ್ದಾರೆ. ಸೀತೆಯನ್ನು ಕೊಂಡೊಯ್ಯುವ ಸಂದರ್ಭದಲ್ಲಿ, ಜಟಾಯುವು ದೂರದ ಮರದ ಮಂಚದಲ್ಲಿ ಮಲಗಿದ್ದನು. ರಾವಣನ ವಿರುದ್ಧ ಭಾರಿ ಕಾಳಗಕ್ಕೆ ತೊಡಗಿದನು. ಕೊನೆಗೆ ರಾವಣನು ಜಟಾಯುವಿನ ಉಗುರು ಕೊಕ್ಕೆ ರೆಕ್ಕೆಗಳನ್ನು ಕತ್ತರಿಸಿದನು. ಜಟಾಯುವು ಬಿದ್ದ ರಭಸಕ್ಕೆ ಕಾಡೇ ಗೋಳಿಟ್ಟಿತು. ಆ ವೇಳೆಗೆ ರಾಮ ಲಕ್ಷ್ಮಣರು ಅಲ್ಲಿಗೆ ಬಂದರು. ಸೀತೆ ಇಲ್ಲದಿರಲು ರಾಮನು ಮಗುವಿನಂತೆ ರೋಧಿಸಿದನು. ಲಕ್ಷ್ಮಣ ಅಣ್ಣನಿಗೆ ಶಶಿರೋಪಚಾರ ಮಾಡಿ ರಾಮನು ಚೇತರಿಸಿಕೊಂಡ ಮೇಲೆ ಜಟಾಯುವಿನಿಂದ ದೇವಿಯ ಇರವನ್ನು ತಿಳಿದು ಮುಂದಿನ ಕಾರ್ಯವನ್ನು ನಿರ್ಣಯ ಮಾಡೋಣ ಎಂದು ಹೇಳಿದನು. ರಾಮನು ಹೊಸ ನಚ್ಚು ಮೂಡಿ ಜಟಾಯುವನ್ನು ಕೂಗಿದನು. ಉತ್ತರ ಬರಲಿಲ್ಲ. ಆಗ ರಾಮನಿಗೆ ಜಟಾಯುವಿನ ಮೇಲೆ ಅನುಮಾನ ಬಂತು. ಸಂಜೆಯಾಗುವ ತನಕ ರಾಮ ಲಕ್ಷ್ಮಣರು ಜಟಾಯುವನ್ನು ಹುಡುಕಿಕೊಂಡು ಅಲೆದಾಡಿದರು. ಕೊನೆಗೆ ಒಂದು ದಿಣ್ಣೆಯ ಮೇಲೆ ರಕ್ತದ ಮಡುವಿನಲ್ಲಿ ಬಿದ್ದಿರುವ ಜಟಾಯುವನ್ನು ಅವರು ನೋಡಿದರು. ರಾಮನ ಕೋಪ ಅನುತಾಪವಾಗಿ ಪರಿಣಮಿಸಿತು. ಜಟಾಯು ಹೇಗೆ ಬಿದ್ದನು ಎಂಬುದನ್ನು ವರ್ಣಿಸಲು ಕುವೆಂಪು ಈ ಸಂದರ್ಭದಲ್ಲಿ ಮಹೋಪಮೆಯೊಂದನ್ನು ಬಳಸುತ್ತಾರೆ. ಈ ಮಹೋಪಮೆಯ ಚಿತ್ರಣವು ಕನ್ನಡ ಕಾವ್ಯ ಸಂದರ್ಭಕ್ಕೆ ಹೊಸದು. ಮಹಾವೃಕ್ಷದಂತೆ ಜಟಾಯು ಭೂಮಿಗೆ ಬಿದ್ದನು ಎಂದರೆ ಅದು ಬರಿ ಉಪಮೆ. ಆದರೆ ಮೊದಲು ಆ ಮಹಾವೃಕ್ಷವನ್ನು ಸವಿವರವಾಗಿ ವರ್ಣಿಸಿ, ಅದು ಹೇಗೆ ಅನೇಕ ಜೀವಜಾಲಕ್ಕೆ ಆಸರೆಯಾಗಿದೆ ಎಂಬುದನ್ನು ಹೇಳಿ; ಅಂತಹ ಮಹಾತರುವನ್ನು ದುರ್ಗದ ಅರಮನೆ ಹೆಗಡೆ ನೇಮಿಸಿದ ಕೊಡಲಿ ಆಳುಗಳು ಹೇಗೆ ಕಡಿದರು ಎಂಬುದನ್ನು ಸವಿವರವಾಗಿ ವರ್ಣಿಸಿ, ಕೊನೆಗೆ ಆ ಮಹಾವೃಕ್ಷ ಹಿಂದೆಮುಂದೆ ತೂಗುತ್ತಾ ನಿರಿ ನಿಟಿಲ್ ಎಂದು ಸದ್ದುಮಾಡುತ್ತ ಕೆಳಗೆ ಬಿದ್ದಾಗ ಇಡೀ ಕಾಡೇ ಬಯಲಾದಂತಾಗುತ್ತದೆ ಎಂದು ಹೇಳುತ್ತ; ಎಂದಿನಂತೆ ಸಂಧ್ಯಾದೇವಿ ಹಿಂದಿರುಗಿ ಬಂದು ನೋಡಿದರೆ, ಅರಣ್ಯ ಸಾಮ್ರಜ್ಯದ ಚಕ್ರವರ್ತಿ ಇರಲಿಲ್ಲ ಎಂಬುದಾಗಿ ವಿವರಿಸಿದರೆ ಅದು ಮಹೋಪಮೆಯಾಗುತ್ತದೆ. ಜಟಾಯುವಿನ ರಕ್ತಸಿಕ್ತ ಕೊರಳನ್ನು ರಾಮನು ಅಪ್ಪಿಕೊಂಡು "ವಿಹಗೇಂದ್ರ, ಈ ಸ್ಥಿತಿ ನಿನಗೆ ಹೇಗೆ ಬಂತು? ಯಾರಿಂದ ಈ ಸೋಲು ಉಂಟಾಯಿತು. ನಿನ್ನ ಮಗಳು ಎಲ್ಲಿ,

ರಾಮನ ಮಡದಿ ಎಲ್ಲಿ? ದಶರಥ ಮಿತ್ರ ಜನಕದೇವನ ಮಗಳು ಎಲ್ಲಯ್ಯ ನನ್ನ ಮನದನ್ನೆ[1] ಎಂದು ರೋಧಿಸುತ್ತಾನೆ. ಮಹೋಪಮೆಯಿಂದ ಜಟಾಯುವಿನ ಘನತೆಯನ್ನು ಉನ್ನತೀಕರಿಸುವ ಅದ್ಭುತಕಾವ್ಯ ತಂತ್ರವನ್ನು ನಾವಿಲ್ಲಿ ನೋಡುತ್ತೇವೆ.

ಸೀತಾ ವಿರಹದಿಂದ ರಾಮನು ಮತಿಭ್ರಾಂತನಂತೆ ಪ್ರಲಾಪಿಸುತ್ತಾನೆ. ಅವನನ್ನು ಆವರಿಸಿದ ನೈರಾಶ್ಯವೇ ಕಬಂಧನೆಂಬಂತೆ ಚಿತ್ರಿತವಾಗಿದೆ. ಕಬಂಧ ರಾಕ್ಷಸನಲ್ಲ, ಶಾಪಗ್ರಸ್ತನಲ್ಲ, ರಾಮನಲ್ಲಿ ಉಂಟಾದ ಹತಾಶೆಯ ವ್ಯಕ್ತ ರೂಪ "ಪೃಥ್ವಿಗೆ ರಾಹು ಬೇರೆಯೇನ್? ತನ್ನ ನೆಳಲಲ್ಲದೆಯೇ?" ರಾಮನ ಹತಾಶೆಯ ಪ್ರತೀಕವಾದ ಕಬಂಧವನ್ನು ಧೀರನಾದ ಲಕ್ಷ್ಮಣನು ಸಂಹಾರ ಮಾಡುತ್ತಾನೆ. ಈ ಭಾಗದಲ್ಲಿ ಬರುವ ಕಬಂಧನ ವರ್ಣನೆ ಅದ್ಭುತವಾಗಿದೆ. "ಕಾಡಿನಲೆಲ್ಲಾ ಮಂಜು ತುಂಬಿತು. ಸೃಷ್ಟಿ ಅಸ್ಪಷ್ಟವಾಯಿತು. ಎಲ್ಲೆಲ್ಲಿಯೂ ಭೀತಿ ರಾಹುವಿನಂತೆ ಅಲೆಯಿತು. ಇದ್ದಕ್ಕಿದ್ದಂತೆ ಆ ಮಂಜೇ ಆ ಭೀತಿಯೇ ಮೈಗೊಂಡಂತೆ ಸರ್ಪಾಕೃತಿಯ ರಾಕ್ಷಸ ಶರೀರ ಮೂಡಿತು. ಅದಕ್ಕೆ ಕೈಯಿಲ್ಲ, ಕಾಲಿಲ್ಲ, ಎಲ್ಲವೂ ಮೆಯ್, ಹೊಟ್ಟೆಯೇ ಮಂಡೆ! ಕಾಲೋ ತೋಳೊ, ಅಂತು ಎರಡು ಬಾಹುಗಳು ಕಿವಿಯಿಂದ ಯೋಜನ ದೂರ ಚಾಚಿಕೊಂಡಿದ್ದವು. ಭೀತಿಯೇ ತೂತಾದಂತೆ ಅಕ್ಷಿ–ಕುಕ್ಷಿಗಳು ಭಯಂಕರವಾಗಿದ್ದವು. ನನ್ನ ನಿರಾಶೆಯೇ ಮೂರ್ತಿವೆತ್ತಂತಿದ್ದ ಕಬಂಧನ ನೋಡಿ ರಾಮ ನಡುಗಿದನು"[2] ಕಬಂಧನನ್ನು ಒಂದು ಬಹಿರಂಗದ ಕೇಡು ಎಂದು ಭಾವಿಸದೆ; ರಾಮನ ನಿರಾಶೆಯೇ ಕಬಂಧನಾಗಿ ಅವನನ್ನು ಕಬಳಿಸಲು ಯತ್ನಿಸಿತು ಎಂದು ವರ್ಣಿಸಿರುವುದು ಧ್ವನಿಪೂರ್ಣವಾಗಿದೆ. ಇಂತಹ ವರ್ಣನೆಗಳಿಂದ ಕುವೆಂಪು ಅವರ ಕಾವ್ಯವು ಉದ್ದಕ್ಕೂ ಕಥನದಿಂದ ದರ್ಶನದ ನೆಲೆಗೆ ಏರಲು ಹವಣಿಸುತ್ತಾ ಇರುತ್ತದೆ.

ಶಬರಿಯ ವೃತ್ತಾಂತವು ಸವಿವರವಾಗಿ ಚಿತ್ರಿತವಾಗಿದೆ. ರಾಮಲಕ್ಷ್ಮಣರು ಬಂದಾಗ ಶಬರಿ ಅವರನ್ನು ಬೇಡರು ಎಂದು ತಪ್ಪಾಗಿ ಭಾವಿಸುತ್ತಾಳೆ. ಹೇಗೂ ಸಮಾಧಾನ ಮಾಡಿಕೊಂಡು ಅವರಿಗೆ ಹಣ್ಣು ಹಂಪಲು ನೀಡುತ್ತಾಳೆ. ರಾತ್ರಿ ಕನಸಿನಲ್ಲಿ ರಾಮಸೀತೆಯ ಹೆಸರನ್ನು ಹೇಳಿದಾಗ ಬಂದಿರುವವರು ರಾಮ ಲಕ್ಷ್ಮಣರೆಂದು ಅವಳಿಗೆ ತಿಳಿಯುತ್ತದೆ. ಆ ಬಳಿಕ ಶಬರಿ ತಾಯಿಯ ಹಾಗೆ ಅವರನ್ನು ನೋಡಿಕೊಳ್ಳುತ್ತಾಳೆ. ರಾಮನಿಗೆ ಒಂದು ವಿಚಿತ್ರ ಕಾಯಿಲೆಯುಂಟಾಗಿ ಉಲ್ಬಣಿಸತೊಡಗುತ್ತದೆ. ಆಗ ಶಬರಿಯು ಅಲ್ಲಿಗೆ ಬಂದು ಅಳುತ್ತಿದ್ದ ಲಕ್ಷ್ಮಣನಿಗೆ ಸಮಾಧಾನ ಪಡಿಸುತ್ತಾಳೆ. 'ನನ್ನ ಗುರುವಿನ ಕೃಪೆಯಿಂದ ರಾಮನ ರುಜೆಯನ್ನು ಹೀರಿ ಬಿಸುಡುತ್ತೇನೆ' ಎನ್ನುತ್ತಾಳೆ. ರಾಮನಿಗೆ ಪ್ರದಕ್ಷಿಣೆ ಬಂದು

ತನ್ನ ಗುರುವನ್ನು ಪ್ರಾರ್ಥಿಸುತ್ತಾಳೆ. ರಾಮ ಚೇತರಿಸಿಕೊಳ್ಳುತ್ತಾನೆ. ಆ ದಿನವೇ ಶಬರಿ ಹಾಸಿಗೆ ಹಿಡಿದು ಮಲಗುತ್ತಾಳೆ. ಸೀತೆಯನ್ನು ರಾವಣನ ಉದ್ಯಾನವನದಲ್ಲಿ ಕಂಡುದಾಗಿಯೂ, ಸುಗ್ರೀವನ ಸಖ್ಯವನ್ನು ಪಡೆದು ರಾಮನು ಮುಂದುವರೆಯ ಬೇಕೆಂದು ಸೂಚಿಸಿ ಶಬರಿಯು ಗತಪ್ರಾಣಳಾಗುತ್ತಾಳೆ. ಈ ವಿವರಗಳೆಲ್ಲವೂ ವಾಲ್ಮೀಕಿ ರಾಮಾಯಣದಲ್ಲಿ ಕಾಣದ ವಿವರಗಳು. ಶಬರಿಯು ಸಾಯುವ ಮುನ್ನ ತಾನು ಕಂಡ ಕನಸೊಂದನ್ನು ರಾಮಲಕ್ಷ್ಮಣರಿಗೆ ವಿವರಿಸುತ್ತಾಳೆ. ಆ ಕನಸಿನಲ್ಲಿ ರಾವಣನ ಉದ್ಯಾನದಲ್ಲಿ ಸೊರಗುತ್ತಾ ಕುಳಿತಿರುವ ಸೀತೆಯನ್ನು ಅವಳು ಕಾಣುತ್ತಾಳೆ. ಹೀಗೆ ಶಬರಿಯ ಕನಸಿನ ಮೂಲಕ ಸೀತೆಯು ರಾವಣನ ಉದ್ಯಾನವನದಲ್ಲಿರುವುದು ರಾಮನಿಗೆ ತಿಳಿಯುತ್ತದೆ.

ರಾಮನು ಸುಗ್ರೀವನ ಸ್ನೇಹವನ್ನು ಪಡೆಯುತ್ತಾನೆ. ವಾಲಿಯನ್ನು ಮರೆಯಲ್ಲಿ ನಿಂತು ಕೊಲ್ಲುತ್ತಾನೆ ಮತ್ತು ತನ್ನ ಕ್ರಿಯೆಯನ್ನು ವಾದಮಂಡನೆ ಮಾಡಿ ಸಮರ್ಥಿಸಿಕೊಳ್ಳುತ್ತಾನೆ. ವಾಲ್ಮೀಕಿ ರಾಮಾಯಣದಲ್ಲಿ ಬರುವ ವಾಲಿಗಿಂತ ರಾಮಾಯಣದರ್ಶನಂ ಕಾವ್ಯದಲ್ಲಿ ಬರುವ ವಾಲಿ ವಿಭಿನ್ನನಾಗಿದ್ದಾನೆ. ಅವನು ತನ್ನ ತಮ್ಮನ ಹೆಂಡತಿಯಾದ ರುಮೆಯನ್ನು ಗೌರವದಿಂದಲೇ ನೋಡಿಕೊಂಡಿದ್ದಾನೆ. ತಾರೆಯ ಹಿತವಚನದಿಂದ ತಮ್ಮನ ಬಗೆಗಿದ್ದ ಅವನ ದ್ವೇಷ ನಾಶವಾಗುತ್ತದೆ. ಅವನನ್ನು ಹಿಡಿದು ತಂದು ರುಮೆಗೆ ಒಪ್ಪಿಸಬೇಕು ಎಂದು ಯುದ್ಧಕ್ಕೆ ಹೊರಡುತ್ತಾನೆ. "ತಾರೆ ಸುಗ್ರೀವನನ್ನು ತಂದು ರುಮೆಗಿತ್ತು ಸಂತೋಷಪಡಿಸುತ್ತೇನೆ. ನಿನ್ನ ತಂಗಿಯನ್ನು ಅಲಂಕರಿಸು ಹೋಗು. ಚಿಕ್ಕಂದಿನ ಉಪ್ಪಾಟವನ್ನಿಂದು ಮತ್ತೆ ತಮ್ಮನಿಗೆ ತೋರಿಸುತ್ತೇನೆ. ಕಾಳಗದ ನೆವದಿಂದ ಅವನನ್ನು ಹೊತ್ತು ತರುತ್ತೇನೆ"[9]. ಇಂತಹ ಸಂಕಲ್ಪದಿಂದ ವಾಲಿಯು ಸುಗ್ರೀವನನ್ನು ಹೊತ್ತು ನಡೆಯುತ್ತಿರುವಾಗ ರಾಮನು ಹಿಂದಿನಿಂದ ಹೊಡೆದು ಅವನನ್ನು ಕೊಂದು ಹಾಕುತ್ತಾನೆ. ವಾಲಿ ರಾಮನನ್ನು ಹೆಂಬೇಡಿ ಎಂದು ನಿಂದಿಸುತ್ತಾನೆ. 'ನೀನು ಪತಿವ್ರತೆಯನ್ನು ಮೋಹಿಸಿದ್ದರಿಂದ ಈ ಫಲ' ಎಂದು ರಾಮ ಹೇಳಿದಾಗ ವಾಲಿ ಕಿವಿ ಮುಚ್ಚಿಕೊಂಡು 'ರುಮೆ ನನ್ನ ಮಗಳು, ತಾರೆಯೆ ಇದಕ್ಕೆ ಸಾಕ್ಷಿ ಎನ್ನುತ್ತಾನೆ. ಆಗ ರಾಮ ನಿರ್ದೋಷಿಯಾದ ಸಹೋದರನನ್ನು ತಾಯಿಗಾಡಿನಿಂದ ಅಟ್ಟಿದ್ದಕ್ಕೆ ಈ ಶಿಕ್ಷೆ ಎನ್ನುತ್ತಾನೆ. ಆಗ ವಾಲಿ 'ನಾನೀಗ ಬ್ರಾತ್ರು ಪ್ರೇಮದಿಂದ ಶುದ್ಧನಾಗಿದ್ದೇನೆ. ನನಗೀಗ ಸುಗ್ರೀವನ ಬಗ್ಗೆ ಹಗೆತನವಿಲ್ಲ ಎನ್ನುತ್ತಾನೆ. ರಾಮ ಕಣ್ಣೀರು ಸುರಿಸುತ್ತಾ 'ಮಹಾವೀರ ತಪ್ಪಾಯಿತು ಮನ್ನಿಸು ಬ್ರಹ್ಮವರವೇ ನಿನಗೆ ಶಾಪವಾಯಿತು. ಅದೇ ನನ್ನನ್ನು ಮರದ ಮರೆಯಲ್ಲಿ ಅಡಗಿಸಿತು. ತಪ್ಪನ್ನು ಒಪ್ಪಿಕೊಳ್ಳುವುದು ವೀರನ ಸಲ್ಲಕ್ಷಣ. ಸತಿ ವಿರಹದಿಂದ ನನಗೆ ಮಂಕು ಬಡಿದಿದೆ. ಶೀಘ್ರ ಸಿದ್ಧಿಯ ಬಯಕೆಯಿಂದ ಐಹಿಕದ

ಕೀರ್ತಿಧರ್ಮಗಳನ್ನೂ, ನಿನ್ನನ್ನೂ ಆಹುತಿ ಮಾಡಿದೆ; ಎಂದು ರಾಮನು ರೋಧಿಸ ತೊಡಗುತ್ತಾನೆ. ಇದೆಲ್ಲ ಒಟ್ಟಿನಲ್ಲಿ ವಿಧಿಯ ಕೈವಾಡವೆಂಬ ನಿಲುವು ಕಾವ್ಯದಲ್ಲಿ ಕಂಡುಬರುತ್ತದೆ. ವಾಲಿಯು ತೀರಿಕೊಂಡ ಮೇಲೆ ಅವನ ಪತ್ನಿ ತಾರೆ, ಪತಿಯ ಚಿತೆಯನ್ನೇರಿ ಸಹಗಮನ ಮಾಡುತ್ತಾಳೆ. ಹೀಗೆ ವಾಲಿಯ ಪ್ರಸಂಗವನ್ನು ಕುವೆಂಪು ಸಂಪೂರ್ಣವಾಗಿ ಭಿನ್ನ ರೀತಿಯಲ್ಲಿಯೇ ಚಿತ್ರಿಸಿದ್ದಾರೆ.

ಆಂಜನೇಯನು ವಾನರ ಸಮೇತ ಸಮುದ್ರತೀರಕ್ಕೆ ಬರುತ್ತಾನೆ. ಸಮುದ್ರಲಂಘನ ಮಾಡಿ ಅಶೋಕ ವನದಲ್ಲಿ ಸೀತೆಯನ್ನು ಭೇಟಿ ಮಾಡುತ್ತಾನೆ. ಅಶೋಕವನವನ್ನು ಹಾಳು ಮಾಡುವುದಾಗಲೀ, ಲಂಕಾದಹನವನ್ನು ಮಾಡಿದುದಾಗಲಿ ಶ್ರೀರಾಮಾಯಣದರ್ಶನಂನಲ್ಲಿ ಬರುವುದಿಲ್ಲ. ರಾವಣನ ಸಭೆಯಲ್ಲಿ ವಿಭೀಷಣನು ರಾವಣನಿಗೆ ಹಿತವಚನ ನೀಡುತ್ತಾನೆ. ರಾವಣನು ಅವನ ಹಿತವಚನಗಳನ್ನು ಕೇಳುವುದಿಲ್ಲ. ವಿಭೀಷಣನು ತನ್ನ ಮಗಳಾದ ಅನಲೆಯನ್ನು ಅಸ್ವಸ್ಥನಾದ ರಾವಣನ ಸೇವೆ ಮಾಡುವುದಕ್ಕೆ ಕಳುಹಿಸಿಕೊಡುತ್ತಾನೆ. ರಾಮ-ರಾವಣರ ನಡುವೆ ಯುದ್ಧ ಪ್ರಾಪ್ತವಾದಾಗ ವಿಭೀಷಣನನು ರಾವಣನನ್ನು ತ್ಯಜಿಸಿ ಕಾಡುಮೇಡುಗಳಲ್ಲಿ ಅಲೆಯುತ್ತಾ ಇರುತ್ತಾನೆ. ರಾಮನೇ ಅವನನ್ನು ತನ್ನ ಬಳಿಗೆ ಕರೆಸಿಕೊಳ್ಳುತ್ತಾನೆ. ಮೂಲದಲ್ಲಿರುವಂತೆ ವಿಭೀಷಣನು ರಾವಣನನ್ನು ತ್ಯಜಿಸಿ ಪ್ರತಿಪಕ್ಷ ಸೇರಿದನು ಎಂಬ ಚಿತ್ರ ಇಲ್ಲಿ ಕಾಣುವುದಿಲ್ಲ.

ಅನಲೆಯ ಪ್ರಸಂಗ ಮೂಲ ರಾಮಾಯಣದಲ್ಲಿ ಇಲ್ಲ. ರಾಮಾಯಣದರ್ಶನಂ ಕಾವ್ಯದಲ್ಲಿ ಆಕೆಯದು ಬಹುಮುಖ್ಯ ಪಾತ್ರ. ಹೆಣ್ಣುಮಕ್ಕಳಿಲ್ಲದ ರಾವಣನಿಗೆ ಆಕೆಯೇ ಪ್ರೀತಿಯ ಮಗಳು. ರಾವಣನು ಕೊನೆಗೆ ಸೀತೆಯ ಮೋಹವನ್ನು ತ್ಯಜಿಸುವಲ್ಲಿ, ಅನಲೆಯ ಪ್ರಭಾವವೇ ಕಾರಣವಾಗುತ್ತದೆ. ಅವಳು ರಾವಣನ ಕಾಮವನ್ನು ಪ್ರೇಮವನ್ನಾಗಿ ಪರಿವರ್ತಿಸುತ್ತಾಳೆ. ಜೊತೆಗೆ ಸೀತೆಗೆ ಆಪ್ತಳಾಗಿದ್ದು, ಆಕೆಯ ಹೃದಯವನ್ನು ಗೆದ್ದುಕೊಳ್ಳುತ್ತಾಳೆ. ರಾಮಾಯಣ ದರ್ಶನಂ ಕಾವ್ಯದಲ್ಲಿ ಚಿತ್ರಿತವಾಗಿರುವ ಅನಲೆ ಹದಿನಾರು ವರ್ಷದ ಎಳೆಯ ಪ್ರಾಯದ ಹುಡುಗಿ. ಆದರೆ ಅವಳ ಅಂತರಂಗದ ಘನತೆ ಮಾತ್ರ ಹಿರಿದಾದುದು. ಕುಂಭಕರ್ಣನ ಸಾವಿನ ನಂತರ ರೋಷಾವೇಶದಿಂದ ಇಂದ್ರಜಿತು ಒಂದು ಮಹಾಯಾಗಕ್ಕೆ ತೊಡಗಿಕೊಳ್ಳುತ್ತಾನೆ. ಆ ಯಾಗವೇನಾದರೂ ನಿರ್ವಿಘ್ನವಾಗಿ ಪೂರ್ಣಗೊಂಡರೆ ಜಗತ್ತಿನಲ್ಲಿ ಅವನನ್ನು ಎದುರಿಸುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ಭುವನ ತ್ರಯದಲ್ಲಿ ಅವನು ಅಜೇಯನಾಗಿ ಬಿಡುತ್ತಾನೆ. ಆಗ ಅವನಿಗೆ ವಾನರರೊಂದು ಲೆಕ್ಕವೇ? ಆದುದರಿಂದ ಹೇಗಾದರೂ

ಮಾಡಿ, ಇಂದ್ರಜಿತನ ಯಾಗವು ಪೂರ್ಣಗೊಳ್ಳದಂತೆ ತಡೆಯಬೇಕೆಂದು ಅನಲೆ ನಿರ್ಧರಿಸುತ್ತಾಳೆ. ಅದಕ್ಕಾಗಿ ಇಂದ್ರಜಿತ್ ಯಾಗವನ್ನು ಕೈಗೊಂಡಿರುವ ವಿಷಯವನ್ನು ಹಿರಣ್ಯಕೇಶಿ ಕೈಯಲ್ಲಿ ತನ್ನ ತಂದೆಯಾದ ವಿಭೀಷಣನಿಗೆ ಹೇಳಿ ಕಳುಹಿಸುತ್ತಾಳೆ. ವಾನರರು ಹೇಗಾದರೂ ಮಾಡಿ ಯಾಗಕ್ಕೆ ವಿಘ್ನ ಒಡ್ಡಬೇಕೆಂಬುದು ಅವಳ ಸೂಚನೆ. ಈ ವಿಷಯವನ್ನು ಅನಲೆಯು ಸೀತೆಗೆ ತಿಳಿಸಿದಾಗ ಆಕೆ ಆಶ್ಚರ್ಯಪಡುತ್ತಾಳೆ. ಹೀಗೆ ಅನಲೆಯು ರಾವಣ ಕುಂಭಕರ್ಣರ ಬಗ್ಗೆ ಅಪಾರವಾದ ಪ್ರೀತಿಯನ್ನು ಉಳ್ಳವಳಾಗಿದ್ದರೂ, ಧರ್ಮಪಕ್ಷಪಾತಿಯಾಗಿ ಇಂದ್ರಜಿತನ ವಿರುದ್ಧ ನಿಲ್ಲುತ್ತಾಳೆ. ಮಾರಕವಾದ ಯುದ್ಧ ಕೊನೆಗೊಳ್ಳಬೇಕು; ಜೀವ ಜಗತ್ತನ್ನು ಅದು ಸರ್ವನಾಶಕ್ಕೆ ದೂಡಬಾರದು ಎನ್ನುವುದೇ ಅನಲೆಯ ಈ ನಿಲುವಿಗೆ ಕಾರಣ. ಇಂಥ ಪಾತ್ರವನ್ನು ಸೃಷ್ಟಿಸುವ ಮೂಲಕ ಕುವೆಂಪು ಅವರು ಹೆಣ್ತನದ ಘನತೆಯನ್ನು ಮೇಲೆತ್ತಿರುವುದಲ್ಲದೆ ಲಂಕಾ ಸಂಸ್ಕೃತಿಯ ಇನ್ನೊಂದು ಮುಖವನ್ನು ಅನಾವರಣಗೊಳಿಸಿದ್ದಾರೆ ಎನ್ನಬಹುದು.

ಇಂದ್ರಜಿತ್‌ನ ಮರಣವಾದಾಗ ರಾವಣ, ಮೂಲ ರಾಮಾಯಣದಲ್ಲಿ ಕೋಪದಿಂದ ಸೀತೆಯನ್ನು ಕೊಲ್ಲಲು ನಿರ್ಧರಿಸಿ ಅಶೋಕವನಕ್ಕೆ ಹೋಗುತ್ತಾನೆ. ಮಂತ್ರಿಯ ಸಲಹೆಯಿಂದ ಆ ಯತ್ನವನ್ನು ಬಿಟ್ಟು ರಾಮವಧೆಯನ್ನು ನಿಶ್ಚಯಿಸಿ ಯುದ್ಧಭೂಮಿಗೆ ನಡೆಯುತ್ತಾನೆ. ಆದರೆ ಶ್ರೀರಾಮಾಯಣದರ್ಶನಂ ಕಾವ್ಯದಲ್ಲಿ ರಾವಣ ಸೀತೆಯ ಮೇಲೆ ದ್ವೇಷಸಾಧಿಸಲು ಹೋಗುವುದಿಲ್ಲ. ಮಂಡೋದರಿಯನ್ನು ತಾನೇ ಸಮಾಧಾನಗೊಳಿಸುತ್ತಾನೆ. ಸಾಯಲು ಸಿದ್ಧಳಾಗಿದ್ದ ಇಂದ್ರಜಿತುವಿನ ಪತ್ನಿ ತಾರಾಕ್ಷಿಯನ್ನು ಅವಳ ಮಗುವಿನ ರಕ್ಷಣೆಗಾಗಿ ಅವಳು ಬದುಕಿರಬೇಕೆಂದು ಮನವೊಲಿಸುತ್ತಾನೆ. ರಾವಣನಲ್ಲಿಗೆ ಬಂದ ಚಂದ್ರನಖಿ ಪಶ್ಚಾತ್ತಾಪದಿಂದ ಬೆಂದು ಸೀತೆಯನ್ನು ರಾಮನಿಗೆ ಒಪ್ಪಿಸುವಂತೆ ಬೇಡಿಕೊಳ್ಳುತ್ತಾಳೆ. ರಾವಣ ತನ್ನ ಛಲವನ್ನು ಬಿಟ್ಟುಕೊಡಲು ಸಿದ್ಧನಾಗುವುದಿಲ್ಲ. ತಾನು ಸೀತೆಗಾಗಿ ಯುದ್ಧಮಾಡುತ್ತಿಲ್ಲವೆಂದೂ ಛಲಕ್ಕಾಗಿ ಯುದ್ಧಮಾಡುತ್ತಿರುವುದಾಗಿಯೂ ತಿಳಿಸುತ್ತಾನೆ. ಮತ್ತು ರಾಮನನ್ನು ಸೆರೆ ಹಿಡಿದು ತಂದು ಸೀತೆಗೆ ಅವನನ್ನು ಕಾಣಿಕೆಯಾಗಿ ಒಪ್ಪಿಸುವ ತನ್ನ ಸಂಕಲ್ಪವನ್ನು ಹೇಳುತ್ತಾನೆ.

ಹೀಗೆ ರಾಮಾಯಣದರ್ಶನದಲ್ಲಿ, ರಾವಣನ ಮನಸ್ಸು ಹಂತ ಹಂತವಾಗಿ ಪರಿಪಾಕಗೊಳ್ಳುತ್ತಾ ಹೋಗಿದೆ. ಕೊನೆಯ ಬಾರಿ ಅವನು ಸೀತೆಯನ್ನು ನೋಡಲಿಕ್ಕೆ ಹೋದಾಗ

ಸೀತೆಯ ಪರ್ಣಕುಟಿಗೆ ಬೆಂಕಿ ಆವರಿಸಿರುವಂತೆ ಅವನಿಗೆ ಗೋಚರಿಸುತ್ತದೆ. ಆದರೆ ಕಂಚುಕಿ ತನಗೆ ಅಂತಹ ಬೆಂಕಿ ಕಾಣುತ್ತಿಲ್ಲವೆಂದು ಹೇಳುತ್ತಾನೆ. ಹೀಗೆ ಬೆಂಕಿಯು ಸೀತೆಯ ಪಾತಿವ್ರತ್ಯದ ಪ್ರಭಾವಳಿ ಎಂಬಂತೆ ವರ್ಣಿತವಾಗಿದೆ. ದಶಾನನ ಸ್ವಪ್ನಸಿದ್ಧಿ ವಾಲ್ಮೀಕಿ ರಾಮಾಯಣದಲ್ಲಿ ಇಲ್ಲದ ಕುವೆಂಪು ಅವರ ಅದ್ಭುತ ಕಲ್ಪನೆ. ಲಂಕಾಲಕ್ಷ್ಮಿಯು ಕಾಣಿಸಿಕೊಂಡು ರಾಮನನ್ನು ನೀನು ಗೆಲ್ಲುವೆ. ಸೀತೆ ನಿನಗೆ ಒಲಿಯುತ್ತಾಳೆ. ಆದರೆ ಈ ಜನ್ಮದಲ್ಲಿ ಅಲ್ಲ. ಮುಂದಿನ ಜನ್ಮದಲ್ಲಿ ಎನ್ನುತ್ತಾಳೆ. ಮುಂದೆ ರಾವಣ ಕುಂಭಕರ್ಣರು ಲವಕುಶರಾಗಿ ಜನಿಸಿ ಸೀತೆಯ ಪ್ರೀತಿಯನ್ನು ಪಡೆದು ರಾಮನನ್ನು ಗೆಲ್ಲುವರೆಂಬ ಭವಿಷ್ಯದ ಸೂಚನೆ ಈ ಮಾತುಗಳಲ್ಲಿ ಕಂಡು ಬರುತ್ತದೆ.

ಯುದ್ಧಭೂಮಿಯಲ್ಲಿ ರಾಮನ ಬಾಣವು ತನ್ನ ಎದೆಯಲ್ಲಿ ನಾಟಿದಾಗ 'ರಾಮನನ್ನು ನಾನು ಸೆರೆಹಿಡಿದ್ದಿದ್ದೇನೆ.' ಎನ್ನುತ್ತಾ ರಾವಣ ತನ್ನ ಅರಮನೆಗೆ ಹಿಂದಿರುಗುತ್ತಾನೆ. ಮಂಡೋದರಿಗೆ ರಾಮನನ್ನು ತಾನು ಕರೆತಂದಿರುವುದಾಗಿ ಹೇಳುತ್ತಾನೆ. ಇದು ರಾವಣನ ಭ್ರಾಂತಿ ಎಂಬುದನ್ನು ಮಂಡೋದರಿ ಗ್ರಹಿಸಿ ಬಾಣವನ್ನು ರಾವಣನ ಎದೆಯಿಂದ ಕಿತ್ತಾಗ ರಾವಣ ಗತಪ್ರಾಣನಾಗುತ್ತಾನೆ. "ಇದು ಕೇವಲ ರಾವಣ ಸಂಹಾರವಲ್ಲ. ರಾವಣತ್ವದ ಅಂತ್ಯ ಮತ್ತು ರಾಮತ್ವದ ವಿಜಯ"[3] ಎಂಬುದಾಗಿ ಚಿರಂತನ ಅವರು ತಮ್ಮ ಪ್ರಬಂಧವೊಂದರಲ್ಲಿ ಅಭಿಪ್ರಾಯ ಪಟ್ಟಿದ್ದಾರೆ. ಸೀತೆಯನ್ನು ರಾಮನು ತನ್ನ ಬಳಿಗೆ ಕರೆಸಿಕೊಂಡು ಆಕೆಯನ್ನು ತಾನು ಸ್ವೀಕರಿಸುವುದಿಲ್ಲವೆಂದೂ ಅವಳು ತಾನು ಬಯಸಿದಲ್ಲಿಗೆ ಹೋಗಬಹುದೆಂದು ಹೇಳುತ್ತಾನೆ. ಸೀತೆ ಅಗ್ನಿಪ್ರವೇಶಕ್ಕೆ ಸಿದ್ಧಳಾಗುತ್ತಾಳೆ. ಸಕಲ ಧರ್ಮವನ್ನು ಬಲ್ಲವಳಾದ ನಾನು ಮನಸಾವಾಚ ಕರ್ಮಣ ಅತಿಕ್ರಮಿಸದೆ ಇದ್ದಲ್ಲಿ ನನ್ನನ್ನು ಅಗ್ನಿಯು ರಕ್ಷಿಸಲಿ ಎಂದು ಬೆಂಕಿಯಲ್ಲಿ ಹಾರಿಕೊಳ್ಳುತ್ತಾಳೆ. ಸೀತೆಯ ಜೊತೆಗೆ ರಾಮನು ತಾನೂ ಗೋಪುರದ ಹಾಗೆ ಇದ್ದ ಆಗ್ನಿಯ ಒಳಗೆ ಪ್ರವೇಶ ಮಾಡುತ್ತಾನೆ. ಈ ಪ್ರಸಂಗ ವಾಲ್ಮೀಕಿ ರಾಮಾಯಣದಲ್ಲಿ ಇಲ್ಲದ ಕುವೆಂಪು ಅವರ ನವೋನವವಾದ ಕಲ್ಪನೆಯಾಗಿದೆ. ಈ ಪ್ರಸಂಗದಲ್ಲಿ ರಾಮ ಸೀತೆ ಇಬ್ಬರೂ ಅಗ್ನಿಯಿಂದ ಯಾವ ಬಾಧೆಗೂ ಒಳಗಾಗದೆ ಹೊರಬರುತ್ತಾರೆ.

ಕನ್ನಡದಲ್ಲಿ ರಾಮಾಯಣದ ಮೂರು ಪ್ರಧಾನಧಾರೆಗಳಿವೆ. ಒಂದು ಜೈನ ರಾಮಾಯಣ ಪರಂಪರೆಯ ಧಾರೆ, ಎರಡು ವೈದಿಕ ಪರಂಪರೆಯ ರಾಮಾಯಣಧಾರೆ, ಮೂರನೆಯದು ಜಾನಪದ ರಾಮಾಯಣ ಪರಂಪರೆಯ ಧಾರೆ. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮೊಟ್ಟಮೊದಲು ಕಾಣಿಸಿ

ಕೊಂಡದ್ದು ಜೈನ ರಾಮಾಯಣ ಪರಂಪರೆಯ ಕೃತಿ. ಕ್ರಿ.ಶ.೧೧೦೦ರಲ್ಲಿ ಜೈನಕವಿ ನಾಗಚಂದ್ರನು ರಾಮಚಂದ್ರಚರಿತಪುರಾಣ ಎಂಬ ಹೆಸರಿನಲ್ಲಿ ರಾಮಾಯಣ ಕಥೆಯನ್ನು ರಚಿಸಿರುವನು. ನಾಗಚಂದ್ರನು ಅಭಿನವಪಂಪನೆಂದು ಗುರುತಿಸಲ್ಪಟ್ಟಿದ್ದರೆ ಅವನು ರಚಿಸಿದ ರಾಮಚಂದ್ರಚರಿತ ಪುರಾಣವು ಪಂಪ ರಾಮಾಯಣ ಎಂದು ಪ್ರಖ್ಯಾತವಾಗಿದೆ. ಡಾ.ಹಾ.ಮಾ.ನಾಯಕ್ ಹೇಳುವಂತೆ "ಇದು ಕನ್ನಡದ ಜೈನರಾಮಾಯಣಗಳಲ್ಲಿ ನಿಸ್ಸಂದೇಹವಾಗಿ ಅಗ್ರಗಣ್ಯವಾದುದು ಮಾತ್ರವಲ್ಲ ಪ್ರಾಚೀನ ಕನ್ನಡ ಸಾಹಿತ್ಯದ ಅತ್ಯಂತ ಸುಂದರವಾದ ಕೃತಿಗಳಲ್ಲಿ ಒಂದು"[೬] ಈಗಾಗಲೇ ವಿದ್ವಾಂಸರು ಗುರುತಿಸಿರುವಂತೆ ಜೈನ ಸಂಪ್ರದಾಯದ ರಾಮಾಯಣಗಳಲ್ಲಿಯೂ ಎರಡು ವಿಭಿನ್ನ ಪರಂಪರೆಗಳಿವೆ. ಅವನ್ನು ವಿಮಲಸೂರಿಯ 'ಪಉಮಚರಿಯ' ಪರಂಪರೆಯೆಂದೂ, ಗುಣಭದ್ರನ 'ಉತ್ತರಪುರಾಣ' ಪರಂಪರೆಯೆಂದು ಗುರುತಿಸಲಾಗಿದೆ. ಈ ಎರಡೂ ಪರಂಪರೆಯ ರಾಮಾಯಣದಲ್ಲಿ ಕಥಾಹಂದರದ ದೃಷ್ಟಿಯಿಂದ ಹೇಳುವುದಾದರೆ ಅನೇಕ ವ್ಯತ್ಯಾಸಗಳು ಕಂಡುಬರುತ್ತವೆ. ಹಾಗೆಯೇ ವೈದಿಕರಾಮಾಯಣದ ಪರಂಪರೆಗೂ, ಜೈನರಾಮಾಯಣದ ಪರಂಪರೆಗಳಿಗೂ ಸಾಕಷ್ಟು ಕಥಾಂತರಗಳಿವೆ. ನಾಗಚಂದ್ರನ ರಾಮಚಂದ್ರಚರಿತ ಪುರಾಣವು ವಿಮಲಸೂರಿಯ 'ಪಉಮಚರಿಯ' ಪರಂಪರೆಯನ್ನು ಅನುಸರಿಸುತ್ತದೆ. ಕನ್ನಡದಲ್ಲಿ ಕಾಣಿಸಿಕೊಂಡ ಬೇರೆ ಜೈನ ರಾಮಾಯಣಗಳು ಕೆಳಕಂಡಂತಿದೆ.

| | |
|---|---|
| ೧."ಬಂಧುವರ್ಮ ವಿರಚಿತ ರಾಮಾಯಣ | ಕ್ರಿ.ಶ. ಸು. ೧೨೦೦ |
| ೨. ಕುಮುದೇಂದು ರಾಮಾಯಣ | ಕ್ರಿ.ಶ. ಸು. ೧೨೭೫ |
| ೩. ಚಂದ್ರಸಾಗರವರ್ಣಿ ವಿರಚಿತ ರಾಮಾಯಣ | ಕ್ರಿ.ಶ. ಸು. ೧೩೩೧ |
| ೪. ನಾಗರಾಜ ವಿರಚಿತ ರಾಮಾಯಣ | ಕ್ರಿ.ಶ. ಸು. ೧೩೩೧ |
| ೫. ಶಿಶುಮಾಯಣ ವಿರಚಿತ ರಾಮಾಯಣ | ಕ್ರಿ.ಶ. ೧೪೭೨ |
| ೬. ರಾಮವಿಜಯ ಚರಿತೆ ಕವಿ ದೇವಪ್ಪ | ಕ್ರಿ.ಶ. ೧೫೨೫ |
| ೭. ದೇವಚಂದ್ರ ವಿರಚಿತ ರಾಮಾಯಣ | ಕ್ರಿ.ಶ. ೧೭೭೦ –೧೮೪೧"[೭] |

ವೈದಿಕ ರಾಮಾಯಣ ಪರಂಪರೆಯ ರಾಮಕಥೆಗಳಿಗೆ ಆದಿಕವಿ ವಾಲ್ಮೀಕಿಯ ರಾಮಾಯಣ ಮಹಾಕಾವ್ಯವೇ ಮೂಲ ಆಕರ. ಕನ್ನಡದಲ್ಲಿ ಮೊಟ್ಟ ಮೊದಲಿಗೆ ಕಾಣಿಸಿಕೊಂಡ ವಾಲ್ಮೀಕಿ ಸಂಪ್ರದಾಯದ ಕೃತಿ, ಕವಿ ನರಹರಿ ವಿರಚಿತ (ಕ್ರಿ.ಶ.೧೫೦೦) ತೊರವೆ ರಾಮಾಯಣ. ನರಹರಿಯು ಕುಮಾರ ವಾಲ್ಮೀಕಿಯೆಂದೇ ಪ್ರಖ್ಯಾತನಾಗಿದ್ದಾನೆ. ಅವನು ತೊರವೆ ಎಂಬ

ಊರಿನವನಾದ್ದರಿಂದ; ಆತನು, ರಚಿಸಿದ ರಾಮಾಯಣವು, ತೊರವೆ ರಾಮಾಯಣವೆಂದು ಕರೆಯಲ್ಪಡುತ್ತದೆ. ಕನ್ನಡದಲ್ಲಿ ನಾಗಚಂದ್ರನ ಜೈನ ಸಂಪ್ರದಾಯದ ರಾಮಾಯಣವು ಕಾಣಿಸಿಕೊಂಡ ಮುನ್ನೂರು ವರ್ಷಗಳ ತರುವಾಯ ವೈದಿಕ ಸಂಪ್ರದಾಯದ ರಾಮಾಯಣ ಕೃತಿಯು ಕುಮಾರವಾಲ್ಮೀಕಿಯಿಂದ ರಚಿತವಾಯಿತು ಎಂಬುದು ಗಮನಿಸಬೇಕಾದ ಅಂಶ. ಮುಂದೆ ಲಕ್ಷ್ಮೀಶನ ಜೈಮಿನಿಭಾರತದಲ್ಲಿ ಸೀತಾವನವಾಸದ ಕಥೆಯನ್ನು ಚಿತ್ರಿಸಲಾಗಿದೆ. ಇವನ ಕಾಲ ಕ್ರಿ.ಶ.೧೫೫೦. ವೈದಿಕ ಪರಂಪರೆಯ ಅನೇಕ ರಾಮಾಯಣಗಳು ಮುಂದಿನ ಕಾಲದಲ್ಲಿ ರಚಿತವಾದರೂ ಗುಣಮಟ್ಟದ ದೃಷ್ಟಿಯಿಂದ ನಾಗಚಂದ್ರನ ಜೈನರಾಮಾಯಣ ಕೃತಿಗೆ ಹೆಗಲೆಣೆಯಾಗುವ ಕೃತಿ ವೈದಿಕರಿಂದ ರಚಿತವಾಗಲಿಲ್ಲವೆಂದೇ ಹೇಳಬೇಕು. ಇದಕ್ಕೆ ತಕ್ಕಮಟ್ಟಿನ ಅಪವಾದವೆಂದರೆ ಹತ್ತೊಂಬತ್ತನೇ ಶತಮಾನದಲ್ಲಿ ಜೀವಿಸಿದ್ದ ನಂದಳಿಕೆ ಲಕ್ಷ್ಮೀನಾರಾಯಣಪ್ಪನ ಪ್ರಸಿದ್ಧವಾದ ಮೂರು ರಾಮಾಯಣ ಕೃತಿಗಳು. ಮುದ್ದಣನೆಂದು ಪ್ರಖ್ಯಾತನಾಗಿರುವ ಈ ಕವಿಯು ಸಂಸ್ಕೃತದ ಬೇರೆ ಬೇರೆ ಸಂಪ್ರದಾಯದ ರಾಮಾಯಣಗಳನ್ನು ಕನ್ನಡಕ್ಕೆ ತಂದಿದ್ದಾನೆ. ಅದ್ಭುತ ರಾಮಾಯಣದ ಕಥೆಯನ್ನು ರಾಮಾಶ್ವಮೇಧ ಎಂಬ ಗದ್ಯಕೃತಿಯಲ್ಲಿ ಪುನಾರಚಿಸಿದ್ದಾನೆ.

ಕವಿವರ್ಯ ಕುವೆಂಪು ಅವರು ೨೦ನೇ ಶತಮಾನದಲ್ಲಿ 'ಶ್ರೀರಾಮಾಯಣದರ್ಶನಂ' ಎಂಬ ಹೆಸರಿನಲ್ಲಿ ತಮ್ಮ ಮಹಾಛಂದಸ್ಸಿನ ಮೇರು ಕೃತಿಯನ್ನು ರಚಿಸಿದ್ದಾರೆ. ಅವರೇ ಹೇಳುವಂತೆ ಅವರ ರಾಮಾಯಣದರ್ಶನಂ ಕಾವ್ಯಕ್ಕೆ ಆದಿಕವಿ ವಾಲ್ಮೀಕಿಯ ರಾಮಾಯಣ ಕೃತಿಯೇ ಮೂಲ ಆಕರ. ಆದಾಗ್ಯೂ ಮೂಲ ರಾಮಾಯಣವನ್ನು ಸಂಪೂರ್ಣವಾಗಿ ಶ್ರೀರಾಮಾಯಣದರ್ಶನಂ ಕಾವ್ಯದಲ್ಲಿ ಕುವೆಂಪು ಅನುಸರಿಸಿಲ್ಲ. ಪೂರ್ಣಯೋಗದ, ವೈಜ್ಞಾನಿಕ ದೃಷ್ಟಿಯ ದರ್ಶನಕಾವ್ಯವೊಂದನ್ನು ರಚಿಸುವುದು ಅವರ ಉದ್ದೇಶವಾಗಿದೆ. ಹಾಗಾಗಿ ರಾಮಾಯಣ ಕಥೆಯ ಪ್ರಸಂಗಗಳನ್ನು ತಮ್ಮ ದರ್ಶನದ ಅನುಸಂಧಾನಕ್ಕೆ ಕುವೆಂಪು ಅವರು ಉದ್ದಕ್ಕೂ ಬಳಸಿಕೊಳ್ಳುತ್ತಾ ಹೋಗಿದ್ದಾರೆ. ಹಾಗಾಗಿಯೇ ಇದು "ಶ್ರೀರಾಮಾಯಣದರ್ಶನಂ" ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಕುವೆಂಪು ಅವರು ವೈದಿಕ ಸಂಪ್ರದಾಯದ ಅಂದರೆ ಆದಿಕವಿ ವಾಲ್ಮೀಕಿ ವಿರಚಿತ ರಾಮಕಥಾಸಂಪ್ರದಾಯಕ್ಕೆ ಪೂರ್ಣವಾಗಿ ಕಟ್ಟುಬಿದ್ದಿಲ್ಲ. ಜೈನ ಪರಂಪರೆಯ ರಾಮಾಯಣಗಳಿಂದಲೂ ಅವರು ಸಾಕಷ್ಟು ಪ್ರಭಾವ ಮತ್ತು ಪ್ರೇರಣೆಗಳನ್ನು ಪಡೆದಿದ್ದಾರೆ. ತಮ್ಮ ಕಾವ್ಯದ ಅಖಂಡದರ್ಶನಕ್ಕೆ ಪೂರಕವಾಗುವಂತೆ ವೈದಿಕ, ಜೈನ, ಜಾನಪದ ರಾಮಾಯಣಗಳ ಕಥಾಂಶಗಳನ್ನು ಕುವೆಂಪು ಉದ್ದಕ್ಕೂ

ತಮ್ಮ ಕಾವ್ಯದಲ್ಲಿ ಬಳಸಿಕೊಳ್ಳುತ್ತಾ ಹೋಗುತ್ತಾರೆ. ಜೊತೆಗೆ ತಮ್ಮದೇ ಆದ ಹೊಸ ಕಲ್ಪನೆಗಳನ್ನು ಹೊಸ ಕಥಾ ಸಂದರ್ಭಗಳನ್ನು ಹೊಸ ಪಾತ್ರ ಪ್ರಪಂಚವನ್ನು ಅವರು ಸೃಷ್ಟಿಸುತ್ತಾರೆ ಮತ್ತು ವಾಲ್ಮೀಕಿಯ ಜೊತೆ ಜೊತೆಯಲ್ಲೇ ಸಂಸ್ಕೃತದ ಭವಭೂತಿಯಾದಿ ಇತರ ಸಂಸ್ಕೃತ ಮಹಾಕವಿಗಳ ರಾಮಕಥಾಹಂದರಗಳನ್ನು ಸೂಕ್ತವೆನಿಸುವಂತೆ ತಮ್ಮ ಕಾವ್ಯಶಿಲ್ಪದಲ್ಲಿ ಅವರು ಎರಕಗೊಳಿಸುತ್ತಾರೆ. ಹೀಗಾಗಿ ಭಾರತ ಮತ್ತು ಕರ್ನಾಟಕದ ಅನೇಕ ರಾಮಾಯಣ ಕೃತಿಗಳು ಕುವೆಂಪು 'ಶ್ರೀರಾಮಾಯಣದರ್ಶನಂ' ಕಾವ್ಯಕ್ಕೆ ತಮ್ಮ ಕಥಾ ಕಾಣಿಕೆಯನ್ನು ಸಲ್ಲಿಸಿವೆ. ಜೊತೆಗೆ ಜಗತ್ತಿನ ಅನೇಕ ಮಹಾಕವಿಗಳ ರಾಮಾಯಣವಲ್ಲದ ಬೇರೆ ಬೇರೆ ಕಾವ್ಯ ಕೃತಿಗಳು ಕುವೆಂಪು ಅವರ ಹೊಸ ಕಲ್ಪನೆಗಳಿಗೆ ಪ್ರೇರಣೆಯನ್ನು ನೀಡಿವೆ.

ಕುವೆಂಪು ಅವರ 'ಶ್ರೀರಾಮಾಯಾಣದರ್ಶನಂ' ಕಾವ್ಯವು ಕ್ರಿ.ಶ.೧೯೪೯ರಲ್ಲಿ ರಚಿತವಾದ ೨೩ ಸಾವಿರ ಸಾಲುಗಳ ಒಂದು ಬೃಹತ್ ಕಾವ್ಯಕೃತಿಯಾಗಿದೆ. ಸರಳರಗಳೆಯನ್ನು ಈ ಕಾವ್ಯದಲ್ಲಿ ಮಹಾಛಂದಸ್ಸಾಗಿ ಕುವೆಂಪು ಪುನರ್ಯೋಜಿಸಿದ್ದಾರೆ. ವಿಮರ್ಶಾತ್ಮಕ ಮತ್ತು ವಿಶ್ಲೇಷಣಾತ್ಮಕವಾದ ಆಧುನಿಕ ದರ್ಶನವೊಂದನ್ನು ಶ್ರೀರಾಮಾಯಣದರ್ಶನಂ ಕಾವ್ಯವು ಓದುಗರ ಕಣ್ಣಮುಂದೆ ತೆರೆಯುತ್ತದೆ. ಸರ್ವೋದಯ ಮತ್ತು ಪೂರ್ಣದೃಷ್ಟಿ ಇವುಗಳ ಹರಿಕಾರರಾಗಿ ಕುವೆಂಪು ಈ ಕಾವ್ಯವನ್ನು ರಚಿಸಿದ್ದಾರೆ.

ಈ ಹಿಂದೆಯೇ ಹೇಳಿದಂತೆ ರಾಮಾಯಣದರ್ಶನವು ಪ್ರಧಾನವಾಗಿ ವಾಲ್ಮೀಕಿ ರಾಮಾಯಣದ ಕಥಾಮಾರ್ಗವನ್ನೇ ಅನುಸರಿಸಿದೆ. "ಆದರೆ ವಾಲ್ಮೀಕಿ ರಾಮಾಯಣದಲ್ಲಾಗಲಿ ಇತರ ಜೈನೇತರ ರಾಮಾಯಣಗಳಲ್ಲಾಗಲೀ ಕಾಣಿಸದ ಅನೇಕ ನೂತನ ಅಂಶಗಳು ರಾಮಾಯಣದರ್ಶನಂ ಕಾವ್ಯದಲ್ಲಿ ಕಾಣುತ್ತದೆ"[೮] ಎಂಬುದನ್ನು ತಮ್ಮ ಲೇಖನವೊಂದರಲ್ಲಿ ಕೆ.ಜಿ.ನಾರಾಯಣಪ್ರಸಾದ್ ಅವರು ಸವಿವರವಾಗಿ ವಿವೇಚಿಸಿದ್ದಾರೆ. ಅವರು ವಿವರಿಸಿರುವ ಕೆಲವು ಅಂಶಗಳನ್ನು ಈಗ ಗಮನಿಸೋಣ

೧. ಪರಶುರಾಮ-ರಾಮರ ಯುದ್ಧ ರಾಮಾಯಣದರ್ಶನಂ ಕಾವ್ಯದಲ್ಲಿ ನಡೆಯುವುದೇ ಇಲ್ಲ.

೨. ಶಬರಿ, ಊರ್ಮಿಳೆ, ಅಹಲ್ಯೆ, ಮಂಥರೆ ಮುಂತಾದ ಪಾತ್ರಗಳಿಗೆ ಇತರ ರಾಮಾಯಣಗಳಲ್ಲಿ ಅಂತಹ ಪ್ರಾಮುಖ್ಯವೇನೂ ದೊರಕಿಲ್ಲ. ರಾಮಾಯಣದರ್ಶನಂ ಕಾವ್ಯದಲ್ಲಿಯಾದರೋ ಅವುಗಳ ಬಗ್ಗೆ ಸಾಕಷ್ಟು ಗಮನಹರಿಸಲಾಗಿದೆ.

೩. ತನ್ನ ಮಾವನ ಮನೆಯಿಂದ ಊರಿಗೆ ಮರಳುವ ಮೊದಲು ಭರತನು ಪಿತೃದೇವಮಂದಿರವನ್ನು ಪ್ರವೇಶಿಸಿ, ಅಲ್ಲಿ ದಶರಥನ ಮರಣ ಸೂಚನೆಯನ್ನು ಕಂಡುಕೊಳ್ಳುವ ವಿಚಾರವು

ರಾಮಾಯಣದರ್ಶನದಲ್ಲಿದೆ. ಇತರೆಡೆಗಳಲಿಲ್ಲ. ಇದು ಭಾಸನ ಪ್ರತಿಮಾನಾಟಕದ ಪ್ರಭಾವದಿಂದ ಮೂಡಿದ ಅಂಶ.

೪. ಇತರ ರಾಮಾಯಣಗಳಲ್ಲಿರುವಂತೆ ಹನುಮಂತನ ಬಾಲಕ್ಕೆ ಬೆಂಕಿಯಿಡುವುದಾಗಲೀ, ಅದರಿಂದ ಅವನು ಲಂಕೆಯನ್ನು ಸುಡುವುದಾಗಲೀ, ರಾಮಾಯಣದರ್ಶನದಲ್ಲಿ ಬರುವುದಿಲ್ಲ.

೫. ಸ್ವಪ್ನದರ್ಶನ ತಂತ್ರವನ್ನು ರಾಮಾಯಣದರ್ಶನದಲ್ಲಿ ಮೇಲಿಂದ ಮೇಲೆ ಕಾಣುತ್ತೇವೆ. ಮುಂದಾಗುವ ಒಳಿತು-ಕೆಡುಕುಗಳನ್ನು ಸೂಚಿಸಬೇಕಾದಾಗಲೆಲ್ಲಾ ಕವಿಯು ಒಬ್ಬರಲ್ಲ ಒಬ್ಬರಿಗೆ ಕನಸು ಕಾಣಿಸುತ್ತಾರೆ. ರಾಮ, ಭರತ, ಮಂಥರೆ, ಸೀತೆ, ರಾವಣ ಮುಂತಾಗಿ ಎಲ್ಲರೂ ಕನಸು ಕಾಣುತ್ತಾರೆ. ರಾವಣ ಕಾಣುವ ಸ್ವಪ್ನವಂತೂ ವಿನೂತನ; ಅತ್ಯದ್ಭುತ. ಇತರ ರಾಮಾಯಣಗಳಲ್ಲಿ ಈ ತಂತ್ರದ ಬಳಕೆ ಇಷ್ಟರಮಟ್ಟಿಗೆ ಕಾಣಿಸಿಕೊಳ್ಳುವುದಿಲ್ಲ.

೬. ಇದೇ ರೀತಿ ಅರಣ್ಯವರ್ಣನೆಯಲ್ಲಿ ಕಂಡುಬರುವ ಮಲೆನಾಡಿನ ಅನುಭವದ ಪ್ರಭಾವ ಇಡೀ ಕಾವ್ಯದಲ್ಲಿ ಕಂಡು ಬರುವ ಯುಗಧರ್ಮದ ಮುದ್ರೆ, ಇವುಗಳಿಂದಾಗಿ ರಾಮಾಯಣದರ್ಶನವು ಉಳಿದುವುಗಳಿಗಿಂತ ಬಹಳ ಭಿನ್ನವಾಗಿ ಕಂಡು ಬರುತ್ತದೆ.

ಜೈನ ರಾಮಾಯಣ ಪರಂಪರೆಗಳಿಂದ ಕುವೆಂಪು ಅವರು ಸಾಕಷ್ಟು ಪ್ರೇರಣೆಗಳನ್ನು ಪಡೆದಿರುವುದನ್ನು ಈ ಮೊದಲೇ ಪ್ರಸ್ತಾಪಿಸಲಾಗಿದೆ. ಬಹಳ ಮುಖ್ಯವಾಗಿ ರಾವಣ, ಕುಂಭಕರ್ಣ, ವಿಭೀಷಣ ಮೊದಲಾದ ಪಾತ್ರಗಳ ಚಿತ್ರಣದಲ್ಲಿ. ದರ್ಶನಂನಲ್ಲಿನ ರಾವಣನ ಪಾತ್ರ ಸೃಷ್ಟಿಯಲ್ಲಿ ನಾಗಚಂದ್ರನ ಕಾವ್ಯದಿಂದ ಕುವೆಂಪು ಸಾಕಷ್ಟು ಪ್ರೇರಣೆಗಳನ್ನು ಪಡೆದಿದ್ದಾರೆ. ಜೈನರಾಮಾಯಣಗಳಲ್ಲಿ ರಾವಣಾದಿಗಳು ರಾಕ್ಷಸರಲ್ಲ. ವಿಮಲಸೂರಿ ಹೇಳುವಂತೆ ರಾವಣನು ದಶಶಿರನೂ ಅಲ್ಲ. ಭೀಮ ಎನ್ನುವವನು ಅವನಿಗೆ ವಜ್ರಹಾರವೊಂದನ್ನು ಕೊಟ್ಟಿದ್ದನು. ಇದರಲ್ಲಿ ರಾವಣನ ತಲೆ ಪ್ರತಿಬಿಂಬಿಸಿದ್ದರಿಂದ ಅವನು ದಶಶಿರನೆಂದು ಬಿರುದು ಪಡೆದನು. ಕುವೆಂಪು ಅವರ ರಾಮಾಯಣದರ್ಶನಂ ಕಾವ್ಯದಲ್ಲಿ 'ಲಂಕೇಶನೊಲಿಸಿದನು ಮಾರೀಚನಂ' ಎಂಬ ಅಧ್ಯಾಯದಲ್ಲಿ ತಮ್ಮನ್ನು ಆರ್ಯರು ರಾಕ್ಷಸರೆಂದು ಕರೆದಿರುವುದನ್ನು ರಾವಣನು ವಿರೋಧಿಸುವ ಉಲ್ಲೇಖವಿದೆ. ರಾವಣನು ಜೈನ ರಾಮಾಯಣಗಳಲ್ಲಿ ಮಹಾನುಭಾವನಂತೆ, ದುರಂತನಾಯಕನಂತೆ, ಚಿತ್ರಿತನಾಗಿದ್ದಾನೆ. ನಾಗಚಂದ್ರನ ರಾಮಾಯಣದಲ್ಲಿ ರಾವಣ 'ಪರಾಂಗನಾವಿರತಿ' ಎಂಬ ವ್ರತವನ್ನೇ ಸ್ವೀಕರಿಸಿದ್ದಾನೆ. ನಳಕೂಬರ ಪ್ರಸಂಗದಲ್ಲಿ ರಾವಣನ ಪರಾಂಗನಾ ವಿರತಿಯನ್ನು ನಾಗಚಂದ್ರ ಅದ್ಭುತವಾಗಿ

ವರ್ಣಿಸಿದ್ದಾನೆ. ಅಂತಹ ರಾವಣನ ಒಂದೇ ಒಂದು ದೌರ್ಬಲ್ಯವೆಂದರೆ ಅವನು ಸೀತೆಯನ್ನು ಕಂಡ ಕೂಡಲೇ ಅವಳಿಗೆ ಮನಸೋತದ್ದು. ಸಮುದ್ರವೂ ಒಮ್ಮೊಮ್ಮೆ ಮೇರೆ ದಾಟುವುದಲ್ಲವೇ? ಎಂದು ಆ ಸಂದರ್ಭದಲ್ಲಿ ನಾಗಚಂದ್ರನು ಉದ್ಗಾರವೆತ್ತಿದ್ದಾನೆ. ರಾವಣನ ಈ ಅಧಃಪತನಕ್ಕೆ ವಿಧಿಯ ಸಂಚೇ ಕಾರಣನೆಂದು ನಾಗಚಂದ್ರನ ಅಭಿಪ್ರಾಯ. ಈ ವಿಧಿವಾದವನ್ನು ಕುವೆಂಪು ಅವರ ಕಾವ್ಯದಲ್ಲಿಯೂ ನಾವು ಮತ್ತೆ ಮತ್ತೆ ನೋಡುತ್ತೇವೆ. ಮಂಥರೆ ಸೀತೆ, ರಾಮ, ರಾವಣರೆಲ್ಲರೂ ಸೂತ್ರಗೊಂಬೆಗಳಲ್ತೇ? ಆ ವಿಧಿಯ ಹಸ್ತದಲ್ಲಿ. ಎಂಬುದಾಗಿ ಕುವೆಂಪು ತಮ್ಮ ಕಾವ್ಯದಲ್ಲಿ ವಿಧಿಯ ಕೈವಾಡವನ್ನು ಕೈವಾರಿಸಿದ್ದಾರೆ.

ವಾಲ್ಮೀಕಿ ರಾಮಾಯಣದಲ್ಲಿ ಬರುವ ರಾವಣನು ದುಷ್ಟ ಕ್ರೂರಿ, ಕಾಮುಕನಾಗಿದ್ದರೆ ವೈ.ಸಿ.ಭಾನುಮತಿಯವರು ತಮ್ಮ ಲೇಖನವೊಂದರಲ್ಲಿ ಹೇಳಿರುವಂತೆ "ನಾಗಚಂದ್ರನ ರಾವಣ ಮೂಲ ರಾಮಾಯಣದ ದುಷ್ಟತನವನ್ನು ಕಳೆದುಕೊಂಡು ದಯೆ, ಧರ್ಮ, ಗಾಂಭೀರ್ಯ ಮೊದಲಾದ ಗುಣಗಳ ಕೇಂದ್ರ. ಕುವೆಂಪು ಅವರ ರಾವಣ ಕೂಡ, ನಾಗಚಂದ್ರನ ರಾವಣನ ಮೇರು ಪಂಕ್ತಿಯಲ್ಲಿ ರೂಪುಗೊಂಡಿದ್ದಾನೆ"[೯]

ನಾಗಚಂದ್ರನ ರಾವಣ ಹೇಗೆ ತನ್ನ ಶೌಚಗುಣಕ್ಕೆ ಪ್ರಸಿದ್ಧನಾಗಿದ್ದನೋ ಹಾಗೆ ಕುವೆಂಪು ಅವರ ರಾವಣ ಪರನಾರಿ ವಿರತನಾದವನೇನಲ್ಲ. ತನ್ನ ಅದ್ಭುತವಾದ ಸೌಂದರ್ಯದ ಬಗ್ಗೆ ಅವನಿಗೆ ತುಂಬ ಹೆಮ್ಮೆ. ಈತನ ಸೌಂದರ್ಯಕ್ಕೆ ಅನೇಕ ಪತಿವ್ರತೆಯರು ಮಾರುಹೋಗಿದ್ದಾರೆ. ಈ ಕಾರಣದಿಂದಾಗಿ ಕುವೆಂಪು ಅವರ ರಾವಣನಿಗೆ ಭೂಮಿಯಲ್ಲಿ ಹದಿಬದಿಯರೇ ಇಲ್ಲವೆಂಬ ದೃಢವಾದ ನಿಲುವು. 'ಹದಿಬದಿಯರಿಹರೆಂಬ ನಂಬುಗೆ ಸತ್ತುದೆನಗೆ' ಎನ್ನುತ್ತಾನೆ, ಅವನು. ಹುಟ್ಟಿನಿಂದಲೇ ಸ್ತ್ರೀಲೋಲುಪತೆಯನ್ನು ಕುವೆಂಪು ಅವರ ರಾವಣ ಹೊತ್ತುಕೊಂಡು ಬಂದಿದ್ದಾನೆ.

**"ಪುಟ್ಟುವಾಗಳೆಯೆನಾಂ**
**ನೆತ್ತರೊಳೆ ಪೆಣ್ನೊಡಲಿನಾಸೆಯಾ ಬೇಟಮಂ**
**ಪೊತ್ತು ಪುಟ್ಟಿದೆನೈಸೆ! ಜನ್ಮ ದೌರ್ಬಲ್ಯಮಂ**
**ಜಯಿಸಲೆಂದಾನೆನಿತೆನಿತು ನಿಟ್ಟೆಯಂ ಪಟ್ಟು**
**ಜಯಿಸಿದೆನಾತ್ಮಮಂ"[೧೦]**

ಕುವೆಂಪು ಅವರ ರಾವಣ ಹೀಗೆ ಕಾಮ ವಿರತಿಯನ್ನು ಬಾಳಿನಲ್ಲಿ ಸಾಧಿಸಲು, ಮಹಾತ್ಮಗಾಂಧಿಯಂತೆ ಎನಿತೆನಿತೊ ನಿಟ್ಟೆಯಂ ಪಟ್ಟು ಆತ್ಮವನ್ನು ಜೈಸಿದವನಾಗಿದ್ದಾನೆ. ಸೀತೆಯನ್ನು ವಶಪಡಿಸಿಕೊಳ್ಳಲಾಗದ ಸಂದರ್ಭದಲ್ಲಿ ಹದಿಬದೆಯರಿಲ್ಲ ಎಂಬ ರಾವಣನ ಕಲ್ಪನೆಗೆ ದೊಡ್ಡ ಅಘಾತವುಂಟಾಗುತ್ತದೆ. ಈ ಆಘಾತವೇ ಮುಂದೆ ಅವನ ಮನಃ ಪರಿವರ್ತನೆಗೂ ಕಾರಣವಾಗುತ್ತದೆ. ಆಶ್ಚರ್ಯವೆಂದರೆ ಶ್ರೀರಾಮಾಯಣದರ್ಶನಂ ಕಾವ್ಯದಲ್ಲಿ ರಾವಣನನ್ನು ರಾಮತ್ವದ ಒಂದು ಅಂಶ ಎಂದು ಪರಿಗಣಿಸಲಾಗಿದೆ. ಸೀತೆಗೆ ಅವನು ಅದೆಷ್ಟೋ ಆಮಿಷಗಳನ್ನೊಡ್ಡಿದ. ಆದರೆ ಸೀತೆ ಅವನಿಗೆ ಒಲಿಯದಾದಳು. ಸೀತೆಯನ್ನು ಒಲಿಸಿಕೊಳ್ಳುವುದು ಸಾಧ್ಯವಾಗದಿದ್ದಾಗ, ರಾವಣನು ಆಕೆಯ ಮೇಲಿದ್ದ ಮೋಹವನ್ನು ಕಳೆದುಕೊಳ್ಳುತ್ತಾನೆ. ಯುದ್ಧದಲ್ಲಿ ರಾಮನನ್ನು ಸೆರೆಹಿಡಿದು ತಂದು ಸೀತೆಗೆ ಆತನನ್ನು ಕಾಣಿಕೆಯಾಗಿ ಒಪ್ಪಿಸಿಕೊಡುತ್ತೇನೆ ಎನ್ನುತ್ತಾನೆ. ಈಗ ಅವನಲ್ಲಿ ಸೀತೆಯ ಬಗ್ಗೆ ಮೋಹವುಳಿದಿಲ್ಲ, ಆದರೆ ರಾಮನನ್ನು ಸೋಲಿಸುವ ಛಲ ಮಾತ್ರ ಉಳಿದಿದೆ. ಮುಂದಿನ ಅವನ ಹೋರಾಟ ಈ ನೆಲೆಯಲ್ಲಿ ಮುಂದುವರೆಯುತ್ತದೆ.

ಇದೆಲ್ಲಕ್ಕಿಂತ ಅದ್ಭುತವಾದ ಕಲ್ಪನೆಯೆಂದರೆ 'ದಶಾನವ ಸ್ವಪ್ನ ಸಿದ್ಧಿ' ಎಂಬ ಅಧ್ಯಾಯದಲ್ಲಿ ರಾವಣನು ಕಾಣುವ ಕನಸಿನ ಚಿತ್ರ. ಆ ಕನಸಿನಲ್ಲಿ ತಾನೂ ಮತ್ತು ಕುಂಭಕರ್ಣ ಮಕ್ಕಳಾದಂತೆಯೂ ಸೀತೆ ತಮಗೆ ತಾಯಿಯಾದಂತೆಯೂ ರಾವಣ ಕನಸು ಕಾಣುತ್ತಾನೆ. ಲವ-ಕುಶರ ಹುಟ್ಟಿನ ಭವಿಷ್ಯತ್ ಸೂಚನೆ ಇಲ್ಲಿ ಇರುವಂತೆಯೇ; ಸೀತೆಯನ್ನು ಪಡೆಯಲೇಬೇಕೆಂಬ ರಾವಣನ ಅಂತರಾಳದ ಅಭೀಪ್ಸೆ, ಹೇಗೆ ಸಂಬಂಧಗಳ ಪಲ್ಲಟಕ್ಕೆ ಕಾರಣವಾಗಿ ಹೊಸ ಅರ್ಥವಂತಿಕೆಯನ್ನು ಪಡೆಯುತ್ತದೆ ಎಂಬುದನ್ನು ನೋಡಬಹುದು.

ಇಷ್ಟು ಮಾತ್ರವಲ್ಲ ಜಾನಪದ ರಾಮಾಯಣಗಳಿಂದಲೂ ಕುವೆಂಪು ಅವರು ಅನೇಕ ಪ್ರೇರಣೆಗಳನ್ನು ಪಡೆದಿದ್ದಾರೆ. ತುಂಬ ಕುತೂಹಲಕಾರಿಯಾದ ಜಾನಪದ ರಾಮಾಯಣಗಳಲ್ಲಿ ಬರುವ ಈ ಕಥಾಪ್ರಸಂಗವನ್ನು ಗಮನಿಸಿ "ಸೀತೆಯನ್ನು ಕಾಡಿಗಟ್ಟಿ ಅವಳ ಶಿರಚ್ಛೇದವನ್ನು ಮಾಡುವಂತೆ ಆಜ್ಞೆ ಮಾಡಿದ ಮೇಲೆ ರಾಮನಿಗೂ ದುಃಖವಾಗುತ್ತದೆ. ಕಾಡಿನಿಂದ ಹಿಂತಿರುಗಿದ ಲಕ್ಷ್ಮಣನನ್ನು ಕಂಡಕೂಡಲೇ ಅವನ ದುಃಖದ ಕಟ್ಟೆಯೊಡೆದು ಕಣ್ಣೀರು ಹರಿಯುತ್ತದೆ. ಆ ಕಣ್ಣೀರ ಧಾರೆ ಹೊಳೆಯಾಗಿ ಹರಿದು ಸೀತೆಗೆ ಅಡ್ಡವಾಗುತ್ತದೆ. ಆ ಕಣ್ಣೀರ ಹೊಳೆಯನ್ನು ಸೀತೆ ದಾಟಬೇಕಾಗಿ

ಬರುತ್ತದೆ. ಆಗ ಲಕ್ಷ್ಮಣ ಮರಿಜವಳಿ ಕಡ್ಡಿಯನ್ನು ಮಂತ್ರಿಸಿ ಎರಡು ಮೀನುಗಳಾಗಿ ಮಾಡಿ ಆ ಹೊಳೆಯಲ್ಲಿ ತೇಲಿಬಿಟ್ಟು ಆಚೆಯ ದಡಕ್ಕೆ ಸೀತೆಯನ್ನು ಮುಟ್ಟಿಸುವಂತೆ ಸೂಚಿಸುತ್ತಾನೆ. ಅವೇ 'ಅವಲುಮೀನು' ಮತ್ತು 'ಕುಶಲುಮೀನು'. ಅವರೆಡು ಸೀತೆಯನ್ನು ದಡಕ್ಕೆ ಮುಟ್ಟಿಸಿ ತಮ್ಮ ಬೇಡಿಕೆಯೊಂದನ್ನು ಆಕೆಯ ಮುಂದಿಡುತ್ತವೆ. ಮುಂದೆ ನಿಮ್ಮ ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳಿಗೆ ನಮ್ಮ ಹೆಸರಿಡಬೇಕೆಂದು ಪ್ರಾರ್ಥಿಸುತ್ತವೆ". ಜನಪದ ಕವಿಯ ಈ ಕಥನವು, ರಾಮಾಯಣದರ್ಶನಂ ಕಾವ್ಯದ ದಶಾನನ ಸ್ವಪ್ನಸಿದ್ಧಿಯೆಂಬ ಪ್ರಕರಣಕ್ಕೆ ಪ್ರತಿಮಾ ಸಂಯೋಜನೆಯ ನೆಲೆಯಲ್ಲಿ ಮೂಲ ಪ್ರೇರಣೆಯನ್ನು ಒದಗಿಸಿರಬಹುದಾದ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಹೀಗೆ ಕುವೆಂಪು ಅವರು ಶ್ರೀರಾಮಾಯಣದರ್ಶನಂ ಕಾವ್ಯದಲ್ಲಿ ಕಾಣುವ ಕಥಾಹಂದರದಲ್ಲಿ ಬೇರೆ ಬೇರೆ ರೀತಿಯ ಪ್ರೇರಣೆಗಳನ್ನು ಪಡೆದು ಅವುಗಳನ್ನೆಲ್ಲ ತಮ್ಮ ಪ್ರತಿಭಾದರ್ಶನದಿಂದ ಅಪೂರ್ವವಾದ ಕಾವ್ಯಶಿಲ್ಪವಾಗಿ ಸಂಯೋಜಿಸಿರುವುದನ್ನು ನಾವು ನೋಡಬಹುದು.

ಕುವೆಂಪು ಅವರ ಕಾವ್ಯದ ಕಥಾಂತರಗಳಿಗೆ ಅವರ ತಾತ್ವಿಕತೆ, ಪೂರ್ಣ ದೃಷ್ಟಿ, ಕಲ್ಪನೆ ಮುಖ್ಯ ಕಾರಣವಾಗಿರುವುದು ಉದ್ದಕ್ಕೂ ನಮ್ಮ ಗಮನಕ್ಕೆ ಬರುತ್ತದೆ. ರಾಮಾಯಣದರ್ಶನಂ ಕಾವ್ಯದಲ್ಲಿ ಪ್ರತಿಯೊಂದು ಪಾತ್ರವೂ ತನ್ನ ಪೂರ್ಣತ್ವದ ಸಾಧನೆಯ ಹಾದಿಯಲ್ಲಿದೆ. ಶ್ರೀರಾಮ ಮಾತ್ರವಲ್ಲ ರಾವಣ, ಕೈಕೆ, ಮಂಥರೆ ಇವರೆಲ್ಲರೂ ಪೂರ್ಣವಿಕಾಸದ ಮಾರ್ಗದಲ್ಲಿ ಹಂತ ಹಂತವಾಗಿ ಚಲಿಸುತ್ತಾ ಕೊನೆಗೆ ಸಿದ್ಧಿಯನ್ನು ಪಡೆಯುತ್ತಾರೆ. ಇದೇ ಸರ್ವೋದಯದ ಕಲ್ಪನೆ. ರಾಮಾಯಣದರ್ಶನಂ ಕಾವ್ಯ ಈ ವಿಕಾಸ ಮತ್ತು ಸರ್ವೋದಯದ ಕಲ್ಪನೆಗಳನ್ನು ತನ್ನ ಕಥಾಂತರದ ಮೂಲ ಪ್ರೇರಣಾಬಿಂದುವಾಗಿಸಿಕೊಂಡಿದೆ. ಇಲ್ಲಿ ಯಾವುದೂ ನಿಕೃಷ್ಟವಲ್ಲ, ನೀಚವಲ್ಲ, ಜಡ ಚೇತನಗಳೆಲ್ಲವೂ ಪೂರ್ಣತ್ವವನ್ನು ಅರಸುವ ಒಂದು ಮಹಾಯಾನದಲ್ಲಿ ತೊಡಗಿವೆ. ಇದು ವೈಜ್ಞಾನಿಕವಾಗಿಯೂ ಸಮ್ಮತವಾಗುವಂತಹ ಸಂಗತಿ. ಡಾರ್ವಿನ್ನನ ವಿಕಾಸವಾದವು ಇದನ್ನೇ ವೈಜ್ಞಾನಿಕ ಪರಿಭಾಷೆಯಲ್ಲಿ ಬೋಧಿಸುತ್ತದೆ. ಶ್ರೀರಾಮನನ್ನು ಕೇಂದ್ರದಲ್ಲಿಟ್ಟುಕೊಂಡು ವಿಶ್ವಸಮಸ್ತವೂ ಪೂರ್ಣವಿಕಾಸದ ಕಡೆಗೆ ಕ್ರಮಿಸುವ ಒಂದು ಮಹಾಯಾನದ ಅಪೂರ್ವ ದರ್ಶನ, ಕುವೆಂಪು ಅವರ ಕಾವ್ಯದಲ್ಲಿ ಕಂಡುಬರುತ್ತದೆ.

**೩.೨ ಶ್ರೀರಾಮಪಟ್ಟಾಭಿಷೇಕ : ಕಥಾಹಂದರ:-**

ಮಾಸ್ತಿಯವರು 'ಶ್ರೀರಾಮ ಪಟ್ಟಾಭಿಷೇಕ' ಮಹಾಕಾವ್ಯವನ್ನು ೧೯೭೨ರಲ್ಲಿ ಪ್ರಕಟಿಸಿದರು. ಮುನ್ನುಡಿಯಲ್ಲಿ – "ಶ್ರೀರಾಮ ಪಟ್ಟಾಭಿಷೇಕ' ನಾನು ಹರೆಯದಲ್ಲಿ ಸಂಕಲ್ಪಿಸಿ ಇಳಿವಯಸ್ಸಿನಲ್ಲಿ ಆರಂಭಿಸಿ ಮುಪ್ಪಿನಲ್ಲಿ ಮಂಗಳಕೆ ತಂದಿರುವ ಕಾವ್ಯ"[೧೧] ಎಂದಿದ್ದಾರೆ. ಇದಕ್ಕೂ ಮೊದಲು ೧೯೩೮ರಲ್ಲಿ 'ಆದಿಕವಿ ವಾಲ್ಮೀಕಿ' ಕೃತಿಯಲ್ಲಿ ರಾಮಾಯಣದ ಬಗ್ಗೆ ತಮ್ಮ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಅದೇ ನಿಲುವಿಗೆ ಬದ್ಧರಾದ ಮಾಸ್ತಿಯವರು ತಾವು ನಂಬುವ ಸಂಗತಿಗಳನ್ನು ಇಟ್ಟುಕೊಂಡು ನಂಬದ ಸಂಗತಿಗಳನ್ನು ಬಿಟ್ಟು ರಚಿಸಿರುವ ಕಾವ್ಯವೇ ಶ್ರೀರಾಮಪಟ್ಟಾಭಿಷೇಕ.

"ಆದಿಕವಿ ವಾಲ್ಮೀಕಿ ಬರೆದ ಕಥೆಯನ್ನು ಮರಳಿ ರಚಿಸುವಾಗ, ಕವಿ ಪರಂಪರೆ ತನ್ನ ಅಭಿರುಚಿಗೆ ತಕ್ಕಂತೆ ಬರೆಯಿತು, ಬೆಳೆಸಿತು. ಈ ರೀತಿಯ ಪುನಃ ಕಥನ ಪರಿವರ್ತನೆಗಳಿಂದ, ದೇಶಭಾಷಾನುವಾದಗಳಿಂದ ಮೂಲ ಕವಿಯ ಹೃದಯವನ್ನು ಅರಿಯಲು ಸಾಧ್ಯವೇ? ಆತ ಸೃಷ್ಟಿಸಿದ ಪಾತ್ರಗಳಿರಲಿ ಸಂಗತಿಗಳಿರಲಿ ಸ್ವತಃ ಕವಿಯ ಪಾತ್ರವೇ ಗುರುತು ಸಿಗದಷ್ಟು ಮಾರ್ಪಾಟು ಹೊಂದಿದೆ"[೧೨] ಎಂಬ ಮಾಸ್ತಿಯವರ ಪ್ರಾಸ್ತಾವಿಕ ನುಡಿಗಳಿಂದ ವಾಲ್ಮೀಕಿಯ ರಾಮಾಯಣ ಕಥೆಯು ಬೇರೆಯದೇ ಆಗಿದೆ ಎನ್ನುವ ಅಂಶ ತಿಳಿದುಬರುತ್ತದೆ. ಆದ್ದರಿಂದ ಪ್ರಕ್ಷಿಪ್ತಗೊಂಡಿರಬಹುದಾದ ಅನೇಕ ಭಾಗಗಳನ್ನು ಬಿಟ್ಟು ವಾಲ್ಮೀಕಿಯ ನಿಜವಾದ ಕಾವ್ಯದ ತಿರುಳು ಏನಿದೆಯೋ ಆ ಮುಖ್ಯಕಥೆಯನ್ನು ಕನ್ನಡದಲ್ಲಿ 'ಶ್ರೀರಾಮಪಟ್ಟಾಭಿಷೇಕ' ಎಂಬ ಕಾವ್ಯದ ಮೂಲಕ ಹೇಳುವುದು ಮಾಸ್ತಿಯವರ ಮುಖ್ಯ ಉದ್ದೇಶವಾಗಿದೆ. ಆ ಕಾರಣದಿಂದಲೇ ಇಲ್ಲಿಯ ರಾಮ ವಿಷ್ಣುವಿನ ಅವತಾರವಲ್ಲ; ಉದಾತ್ತ ಗುಣಗಳನ್ನು ಹೊಂದಿರುವ ಮಾನವ. ಈ ರೀತಿಯ ಶ್ರೇಷ್ಠ ಮಾನವನಾದುದರಿಂದಲೇ ಶ್ರೀರಾಮ ದೇವರಾದನು ಎನ್ನುವುದು ಮಾಸ್ತಿಯವರ ಕಲ್ಪನೆ. ಕಾವ್ಯದಲ್ಲಿ ಯಾವುದೇ ಪವಾಡವನ್ನಾಗಲಿ ಅಥವಾ ಮಾನವನ ವ್ಯವಹಾರದಲ್ಲಿ ದೇವತೆಗಳು ನೇರವಾಗಿ ಪ್ರವೇಶಿಸಿದರು ಎಂಬುದನ್ನಾಗಲಿ ಅವರು ಒಪ್ಪುವುದಿಲ್ಲ.

"ಶ್ರೀರಾಮ ಪಟ್ಟಾಭಿಷೇಕ' ಕಾವ್ಯದ ಕಥೆ ಕೇವಲ ಮೂರು ದಿನಗಳದ್ದು. ಕಥೆ ಪ್ರಾರಂಭವಾಗುವುದೇ ಶ್ರೀರಾಮನ ವನವಾಸದ ಕಡೆಯ ದಿನದಿಂದ. ಮಾರನೆಯ ದಿನ ವನವಾಸ ಮುಗಿಸಿ ಸೀತಾ ಲಕ್ಷ್ಮಣರ ಸಮೇತನಾಗಿ ಅಯೋಧ್ಯೆಗೆ ಹಿಂತಿರುಗುತ್ತಾನೆ. ಆ ಮಾರನೆಯ ದಿನ 'ಶ್ರೀರಾಮ ಪಟ್ಟಾಭಿಷೇಕ'ವಾಗುತ್ತದೆ. ಈ ರೀತಿಯ ಮೂರು ದಿನಗಳಲ್ಲಿ ನಡೆಯುವ ಘಟನೆಗಳ ಮೂಲಕ ಇಡೀ ಹದಿನಾಲ್ಕು ವರ್ಷದ ಕಥೆ-ದಶರಥನು ರಾಮನಿಗೆ ಪಟ್ಟಕಟ್ಟಲು ಉತ್ಸುಕನಾದ ದಿನದಿಂದ ಮೊದಲುಗೊಂಡು ರಾಮ ವನವಾಸ ಮುಗಿಸಿ ಹಿಂತಿರುಗುವವರೆಗೆ ಏನೇನು ನಡೆಯಿತು? ಎಂಬ ಎಲ್ಲಾ ವಿವರಗಳನ್ನೂ ಬೇರೆ ಬೇರೆ ಪಾತ್ರಗಳ ಮೂಲಕ ಸಿಂಹಾವಲೋಕನ ಕ್ರಮದಲ್ಲಿ ನಿರೂಪಿಸುತ್ತಾರೆ. ದಶರಥನ ಪುತ್ರಕಾಮೇಷ್ಟಿಯಾಗಲಿ, ರಾಮಾದಿಗಳ ಬಾಲಲೀಲೆಯ ವರ್ಣನೆಗಳಾಗಲಿ ಈ ಕಾವ್ಯದಲ್ಲಿ ಕಾಣುವುದಿಲ್ಲ.

ಅಯೋಧ್ಯೆಯ ಸಮೀಪವಿರುವ ನಂದೀಗ್ರಾಮದಿಂದ ಕಥೆ ಆರಂಭವಾಗುತ್ತದೆ. ಭರತನು, ಮಾರನೆಯ ದಿನ ರಾಮ ವನವಾಸದಿಂದ ಹಿಂತಿರುಗತ್ತಾನೆಂಬ ನಿರೀಕ್ಷೆಯಲ್ಲಿದ್ದಾನೆ. ಒಂದು ಪಕ್ಷ ಆತ ಬಾರದಿದ್ದರೆ ಈ ಹಿಂದೆಯೇ ಪ್ರತಿಜ್ಞೆಗೈದಂತೆ ಅಗ್ನಿಪ್ರವೇಶಕ್ಕೆ ಅಣಿಯಾಗುತ್ತಾನೆ. ಅದೇ ಸಂದರ್ಭದಲ್ಲಿ ಗುಹರಾಜನು ಅಣ್ಣನ ಬಗ್ಗೆ ತಂದಿರುವ ಸುದ್ದಿಯನ್ನು ತಿಳಿಯಲು ಅಪೇಕ್ಷಿಸುತ್ತಾನೆ. ರಾಜಮಾತೆಯರು ಇಲ್ಲಿಗೆ ಬರುವ ವೇಳೆಗೆ ಗುಹರಾಜರನ್ನು ಕರೆಸುವಂತೆ ಶತ್ರುಘ್ನನಿಗೆ ಹೇಳುತ್ತಾನೆ. ಅಣ್ಣ ಭರತನ ಮಾತುಗಳೆಲ್ಲ ಶತ್ರುಘ್ನನಿಗೆ ರಾಜಶಾಸನವಿದ್ದಂತೆ. ಗುಹರಾಜರನ್ನು ಕರೆಯಲು ಹೊರಟು ನೆನಪೆಂಬ ದೋಣಿಯೇರಿ ರಾಮಕಥಾಸಾಗರಕ್ಕೆ ಅಡಿಯಿಡುತ್ತಾನೆ. ಹದಿನಾಲ್ಕು ವರ್ಷದ ಹಿಂದೆ ತಾನು ಮತ್ತು ಭರತ, ತಾತನಾದ ಕೇಕಯ ಮಹಾರಾಜನ ಮನೆಯಲ್ಲಿದ್ದದ್ದು, ಅಲ್ಲಿ ಭರತನಿಗೆ ತಂದೆಯ ಬಗ್ಗೆ ದುಃಸ್ವಪ್ನವಾಗಿದ್ದನ್ನು ನೆನಪಿಸಿಕೊಳ್ಳುತ್ತಾನೆ. ದುಃಸ್ವಪ್ನ ಏನೆಂಬ ವಿವರವಿಲ್ಲ. ಈಗಾಗಲೇ ರಾಮಾಯಣದ ಕಥೆ ಜನಮಾನಸದಲ್ಲಿ ತುಂಬಿ ಹೋಗಿರುವುದರಿಂದ ಕಥೆಯಲ್ಲಿನ ಎಷ್ಟೋ ಸಂಗತಿಗಳನ್ನು ವಿವರಿಸಬೇಕಿಲ್ಲ. ಘಟನೆ ಇಂತಹದ್ದು ಎಂದು ಹೇಳಿದರೆ ಸಾಕು ಇಡೀ ವಿವರ ಮನದಲ್ಲಿ ಗೋಚರಿಸುತ್ತದೆ. ಭರತ, ತಾನು ತಂದೆಯ ಕುರಿತು ದುಃಸ್ವಪ್ನವನ್ನು ಕಂಡೆನು ಎಂದು ಹೇಳುವಷ್ಟರಲ್ಲಿ ಅಯೋಧ್ಯೆಯಿಂದ ದೊರೆ ಮಕ್ಕಳಿಗೆ ಕರೆ ಬಂದಿದೆ. ತಕ್ಷಣವೇ ಹೊರಡಬೇಕೆಂದು ದೂತರು ಹೇಳುತ್ತಾರೆ. ಅಣ್ಣ ತಮ್ಮರಿಬ್ಬರೂ ಅಯೋಧ್ಯೆಗೆ ಹಿಂದಿರುಗುತ್ತಾರೆ. ಅಲ್ಲಿ ತಂದೆಯ ಮರಣ, ಹಿರಿಯಣ್ಣ ರಾಮ, ಸೀತಾ, ಲಕ್ಷ್ಮಣರೊಡನೆ ವನವಾಸಕ್ಕೆ ಯಾವ ಕಾರಣಕ್ಕೆ ಹೊರಟು ಹೋದನು ಎಂದು ತಿಳಿದು

ಅದಕ್ಕೆ ಕಾರಣಳಾದ ತನ್ನ ತಾಯಿಯನ್ನು ನಿಂದಿಸುತ್ತಾನೆ. ಅಲ್ಲದೆ “ಅಣ್ಣನನ್ನು ಕರೆತಂದು ರಾಜಪದವಿಯಲ್ಲಿ ನಿಲ್ಲಿಸಿ ಅವರೂಳಿಗವ ಮಾಡುವೆನು”[೧೩] ಎಂದು ಹೇಳಿ ತಾಯಿ ತನಗಾಗಿ ಮೀಸಲಿರಿಸಿದ್ದ ರಾಜ್ಯವನ್ನು ತಿರಸ್ಕರಿಸುತ್ತಾನೆ. ಈ ಎಲ್ಲಾ ಸಂದರ್ಭಗಳೂ ಶತ್ರುಘ್ನನ ನೆನಪಿನಲ್ಲಿ ಸುಳಿದುಹೋಗುತ್ತವೆ.

ಅಷ್ಟರಲ್ಲಿ ಗುಹರಾಜನೇ ಎದುರು ಬರುತ್ತಾನೆ– ‘ರಾವಣ ಸೀತಾದೇವಿಯನ್ನು ಕದ್ದೊಯ್ಯಲು, ಅವಳನ್ನು ಬಿಡಿಸಿ ತರಲು ವಾನರದೊರೆಯ ನೆರವನ್ನು ಪಡೆದು ದಂಡಯಾತ್ರೆ ಹೋಗಿದ್ದಾರೆಂದೂ ತನಗೆ ಬಂದ ಈ ಸುದ್ದಿಯನ್ನು ಶತ್ರುಘ್ನನಿಗೆ ತಿಳಿಸಿ, ಇದನ್ನು ಭರತನಿಗೆ ತಿಳಿಸುವುದು ಬೇಡ, ರಾಮ ನಾಳೆ ವನವಾಸದಿಂದ ಹಿಂತಿರುಗಿ ಬಂದೇ ಬರುತ್ತಾನೆಂಬ ಧೈರ್ಯ ಹೇಳುತ್ತಾನೆ. ಆ ವೇಳೆಗೆ ಕೌಸಲ್ಯೆ, ಕೈಕೆಯೊಂದಿಗೆ ಭರತನನ್ನು ಕಾಣಲು ಸುಮಂತ್ರನ ಮೊಮ್ಮಗನ ಸಾರಥ್ಯದಲ್ಲಿ ಬರುತ್ತಾಳೆ. ಗುಹನು, ಕೌಸಲ್ಯೆ, ಕೈಕೆಯರ ಅನ್ಯೋನ್ಯತೆಯನ್ನು ಕಂಡು ಸಂತೋಷ ವ್ಯಕ್ತಪಡಿಸುತ್ತಾನೆ. ಶತ್ರುಘ್ನನು ಪರಿವರ್ತನೆ ಗೊಂಡಿರುವ ಕೈಕೆಯ ಗುಣಗಾನ ಮಾಡುತ್ತಾನೆ. ನಂತರ ಗುಹ ದಶರಥನ ಮೂವರು ರಾಣಿಯರನ್ನೂ ಅವರ ನಾಲ್ವರು ಮಕ್ಕಳನ್ನೂ ಕೊಂಡಾಡುತ್ತಾನೆ.

ಭರತನನ್ನು ಕಾಣಲು ಎಲ್ಲರೂ ಆಶ್ರಮದೊಳಗೆ ಹೋಗುತ್ತಾರೆ. ಅಲ್ಲಿ ಭರತನ ಸಂದೇಹವನ್ನು ನಿವಾರಿಸಿ, ನಾಳೆ ರಾಮ ಬಂದೇ ಬರುವನೆಂದು ಸಮಾಧಾನ ಹೇಳುತ್ತಾರೆ. ಈ ಮಧ್ಯೆ ಕೈಕೆ ಸ್ವಗತದಲ್ಲಿ ಹಿಂದಿನ ಘಟನೆಯನ್ನು ನೆನಪಿಸಿಕೊಳ್ಳುತ್ತಾಳೆ. ಹಿಂದೊಮ್ಮೆ ಕೌಸಲ್ಯೆ ತನ್ನ ಭವನದಲ್ಲಿ ಉತ್ಸವ ಏರ್ಪಡಿಸಿದ ದಿನದಂದೇ ತಾನೂ ಏರ್ಪಡಿಸಿ ದಶರಥ ಮತ್ತು ರಾಮನನ್ನು ತನ್ನ ಭವನಕ್ಕೆ ಆಹ್ವಾನಿಸಿ ತಾನೇ ಗೆದ್ದೆನೆಂದು ಉಬ್ಬಿದ್ದಳು. ಭರತ ಇದೇ ಕಾರಣದಿಂದ ತಾಯಿಯ ಬಗ್ಗೆ ತಿರಸ್ಕಾರ ಮನೋಭಾವವನ್ನು ತಾಳಿ, ತಾನು ಹಿರಿಯ ತಾಯಿಯ ಭವನಕ್ಕೆ ಹೋಗಿದ್ದ. ಆಗ ಈಕೆ ಅದನ್ನು ಅರಿಯದಾಗಿದ್ದಳು. ಕೈಕೆಗೆ ರಾಮ, ಭರತರಲ್ಲಿ ಭೇದವಿಲ್ಲ. ಯಾವುದೋ ಕೆಟ್ಟ ಘಳಿಗೆಯಲ್ಲಿ ‘ಭರತನಿಗೆ ಪಟ್ಟ ರಾಮನಿಗೆ ವನವಾಸ’ವೆಂಬ ವರವನ್ನು ಪಡೆದು ಅದರಿಂದುಂಟಾದ ಪ್ರಮಾದಕ್ಕೆ ಪ್ರಲಾಪಿಸುತ್ತಾಳೆ. ‘ಎಷ್ಟೋ ವರ್ಷಗಳಿಂದ ನಾ ನಿನಗೆ ತೋರುತ್ತ ಬಂದಿದ್ದ ಆ ಪ್ರೇಮ ಒಂದು ದಿನ ನುಡಿದ ಒಂದೇ ಒಂದು ಕೆಡು ನುಡಿಯ ಎದುರಿನಲ್ಲಿ ಅಳಿಸಿ ಸುಳ್ಳಾಯಿತೆ’ ಎಂದು ಗೋಳಿಡುತ್ತಾಳೆ. ರಾಮನನ್ನು ಕುರಿತು

ಅನನ್ಯ ಪ್ರೀತಿಯಿದ್ದ ಕೈಕೆಗೆ ಏನಿದ್ದರೂ ಸವತಿಮತ್ಸರವಷ್ಟೇ, ಮಕ್ಕಳ ಮೇಲಲ್ಲ. ಯಾವುದೇ ಒಂದು ಅವಿಭಕ್ತ ಕುಟುಂಬದಲ್ಲಿ ಕಂಡು ಬರುವ ಚಿತ್ರಣವಿದು.

ಗುಹ ಮತ್ತು ಸುಮಂತ್ರರ ಸಂಭಾಷಣೆಯಲ್ಲಿ ಸುಮಂತ್ರನ ಮೊಮ್ಮಗನ ಪ್ರಸ್ತಾಪ ಬರುತ್ತದೆ. ಸುಮಂತ್ರನಿಗೆ ಒಬ್ಬ ಮೊಮ್ಮಗನಿದ್ದ ಎಂಬುದು ಮಾಸ್ತಿಯವರ ಕಲ್ಪನೆ. ಈ ಮೊಮ್ಮಗ ಸುಮಂತ್ರನ ಮಗಳ ಮಗ. ಆರು ತಿಂಗಳ ಗರ್ಭವತಿಯಾಗಿದ್ದಾಗ ಆಕೆಯನ್ನು ಸೀತಾದೇವಿ ಹೋಗಿ ನೋಡಿ ಆರೋಗ್ಯ ವಿಚಾರಿಸಿ 'ಹೆರಿಗೆಯಾದೊಡನೆ ನನಗೆ ಹೇಳಿಕಳುಹಿಸು ಮಗುವ ನೋಡುವ ಆಸೆ' ಎಂದು ಅಪ್ಪಣೆ ಮಾಡಿ ಅರಮನೆಗೆ ಹಿಂತಿರುಗಿದ್ದಳು. ಆದರೆ ವಿಧಿ ವಿಪರ್ಯಾಸದಿಂದ ವನವಾಸಕ್ಕೆ ಹೊರಡಬೇಕಾಯಿತು. ಅವರು ವನವಾಸಕ್ಕೆ ಹೊರಟ ದಿನ ದುಃಖವನ್ನು ಸಹಿಸಲಾರದೆ ಸುಮಂತ್ರನ ಮಗಳು ಈ ಮಗುವಿಗೆ ಜನ್ಮನೀಡಿದ್ದಳು. ಮಗುವನ್ನು ಹೆತ್ತ ಸಂಭ್ರಮ ಮನೆಯಲ್ಲಿರಲಿಲ್ಲ. ರಾಜಪುತ್ರರು ವನವಾಸಿಗಳಾದರಲ್ಲಾ ಎಂಬ ದುಃಖ ಆವರಿಸಿತ್ತು. 'ಸೀತಾದೇವಿಯೇ ವನವಾಸದಿಂದ ಹಿಂದಿರುಗಿ ಬಂದ ಮೇಲೆಯೇ ಮಗುವಿಗೆ ಹೆಸರಿಡಲಿ' ಎಂಬ ತಾಯಿಯ ಅಪೇಕ್ಷೆಯಂತೆ ಮಗುವಿಗೆ ನಾಮಕರಣವನ್ನೇ ಮಾಡಿಲ್ಲ. ಈಗ ಬೆಳೆದ ಮಗ ಈ ವೃತ್ತಾಂತವನ್ನೆಲ್ಲ ತಿಳಿದು 'ದೊರೆ ಬಂದ ಮೇಲೆ ತಾಯಿಂದ ಹೆಸರು ಪಡೆದು, ಅವರ ಪಟ್ಟಾಭಿಷೇಕಕ್ಕೆ ರಥವನ್ನು ನಡೆಸಲು ಅಪ್ಪಣೆಯ ಪಡೆಯಲು ಕಾತರದಿಂದಿದ್ದಾನೆ. ಮಾಸ್ತಿಯವರು ಟಿಪ್ಪಣಿಯಲ್ಲಿ '.. ಊರಿನಲ್ಲಿ ಯಾರಿಗೋ ಅಯಿತು ಎನ್ನುವುದಕ್ಕಿಂತ ಅರಮನೆಯ ಹಿರಿಯ ಸೇವಕನ ಕುಟುಂಬದಲ್ಲಿ ಹೀಗಾಯಿತು ಎನ್ನುವುದು ಜನರ ಖೇದದ ಪ್ರಾಬಲ್ಯವನ್ನು ಮತ್ತಷ್ಟು ಸ್ಪಷ್ಟವಾಗಿ ಮೂಡಿಸುತ್ತದೆ'[೧೪] ಎಂದು ಹೇಳಿದ್ದಾರೆ. ಅರಮನೆಯ ಒಡನಾಟದಲ್ಲಿದ್ದವರು ರಾಜ ಕುಟುಂಬದ ಆಗು-ಹೋಗುಗಳಲ್ಲಿ, ಕಷ್ಟ-ಸುಖಗಳಲ್ಲಿ ಬೆರೆತು ಹೋಗಿರುತ್ತಾರೆ. ಅವರಿಗೆ ದುಃಖವಾಗುವುದು ಸಹಜ. ಆದರೆ ಈ ಕಲ್ಪನೆಯಿರದ ಜನಸಾಮಾನ್ಯರ ಖೇದದ ಪ್ರಾಬಲ್ಯವನ್ನು ಮೂಡಿಸಿದಂತಾಗುವುದಿಲ್ಲ. ಇಂಥ ಸಂದರ್ಭಗಳಲ್ಲಿ ಜನಸಾಮಾನ್ಯರ ಪ್ರತಿಕ್ರಿಯೆ ಹೇಗಿರುತ್ತದೆ ಎನ್ನುವುದೇ ಮುಖ್ಯವಾಗುತ್ತದೆ.

ಸುಮಂತ್ರನಿಂದ ಇಷ್ಟೆಲ್ಲ ವಿವರ ತಿಳಿದ ಗುಹರಾಜನಿಗೆ ಒಂದು ಆಸೆ ಮೊಳೆಯುತ್ತದೆ. 'ಯುವರಾಜ ಪಟ್ಟವನ್ನು ತೊರೆದು ಕಾಡಿಗೆ ಹೋಗಬೇಕಾದ ಸಂದರ್ಭವೊದಗಿದಾಗ ರಾಮ

ನಡೆದುಕೊಂಡ ಪರಿಯನ್ನು ವಿವರಿಸಿ ಎನ್ನುತ್ತಾನೆ. ಸುಮಂತ್ರನ ಮೊಮ್ಮಗನೂ ಅದಕ್ಕೆ ಒತ್ತಾಸೆ ನೀಡುತ್ತಾನೆ. ಸುಮಂತ್ರ ಹಿಂದೆ ಸಂಭವಿಸಿಹೋದ ಘಟನೆಯನ್ನು ನಿರೂಪಿಸುತ್ತಾ ಹೋಗುತ್ತಾನೆ.

ರಾಮನಿಗೆ ಯುವರಾಜ ಪಟ್ಟ ಕಟ್ಟುತ್ತಾರೆ ಎಂಬ ಸುದ್ದಿ ತಿಳಿದು ಇಡೀ ನಗರ ಸಂಭ್ರಮದಲ್ಲಿ ಮುಳುಗಿದೆ. ಮುಂಜಾನೆಯೇ ಹಿರಿಯನಾಗರಿಕರು ಅರಮನೆಯ ಮುಂದೆ ಸೇರಿದ್ದಾರೆ. ವಾಡಿಕೆಯಂತೆ ಸುಮಂತ್ರ ರಾಜರನ್ನು ಕಾಣಲು ಹೋದರೆ ಅಲ್ಲಿನ ಪರಿಸ್ಥಿತಿಯೇ ಬೇರೆಯಾಗಿದೆ. ದೊರೆ ಮಂಚದಿಂದ ಮೇಲೆದ್ದಿಲ್ಲ. ಸುಮಂತ್ರನ ಮೂಲಕವೇ ರಾಮನನ್ನು ಕರೆಸಿಕೊಂಡ ಕೈಕೆ 'ನಿನ್ನ ತಂದೆ ನಿನ್ನ ಮೇಲೆ ಆಣೆ ಮಾಡಿ ವಚನವಿತ್ತಿದ್ದಾರೆ. ಬೇಡಿಕೆ ಏನೆಂದು ತಿಳಿದ ಮೆಲೆ ನಿನಗೆ ತಿಳಿಸಲು ಹಿಂಜರಿಯುತ್ತಿರುವರು. ನೀನು ಒಡನೆಯೇ ವನವಾಸಕ್ಕೆ ಹೊರಡು; ಈಗ ಸಿದ್ಧವಾಗಿರುವ ಅಭಿಷೇಕದಲ್ಲಿ ಭರತನಿಗೆ ಪಟ್ಟವಾಗಲಿ' ಎನ್ನುತ್ತಾಳೆ. ಮೊದಲು ರಾಮನಿಗೆ ಇದು ಹಾಸ್ಯವೇನೋ ಎಂದು ಅನುಮಾನವಾಗುತ್ತದೆ. ಅವಳ ಮುಖವನ್ನು ನಿಟ್ಟಿಸಿ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡು ಸಂತೋಷದಿಂದ ವನವಾಸಕ್ಕೆ ಹೊರಡಲು ಒಪ್ಪುತ್ತಾನೆ. ಆದರೆ ತಂದೆ ನನ್ನನ್ನು ಈಗ ನುಡಿಸಲಿಲ್ಲವಲ್ಲಾ ಎಂಬ ದುಃಖ, ಆದರೆ ಕೈಕೆ ಅದಕ್ಕೂ ಅವಕಾಶ ನೀಡುವುದಿಲ್ಲ. ನೀನು ಇಲ್ಲಿರುವವರೆಗೆ ದೊರೆ ಅನ್ನ ನೀರನ್ನು ಮುಟ್ಟುವುದಿಲ್ಲ ತಡಮಾಡದಿರು ಎನ್ನುತ್ತಾಳೆ. ರಾಮನು 'ತಾಯಿ ಕೌಸಲ್ಯೆಗೆ, ನಿಮ್ಮ ಸೊಸೆ ಸೀತೆಗೆ ತಿಳಿಸಿ ಹೊರಡಲು ಎಷ್ಟು ಸಮಯ ಬೇಕೋ ಅಷ್ಟು ಮಾತ್ರ ನಗರದಲ್ಲಿದ್ದು ತ್ವರಿತವಾಗಿ ವನಕ್ಕೆ ಹೊರಡುವೆನು' ಎನ್ನುತ್ತಾನೆ. ರಾಮನ ಜೊತೆಗಿದ್ದ ಲಕ್ಷ್ಮಣ ಕೈಕೆಯ ವಿಷಯದಲ್ಲಿ ಕೋಪಗೊಳ್ಳುತ್ತಾನೆ. "ಅಣ್ಣ ಮಾಡಿದ ಯಾವ ಅಪರಾಧಕೀ ಶಿಕ್ಷೆ? ಇದನ್ನು ಬಯಸುವುದು ಕೈಕೆಯಿದೇವಿ, ಭರತನೂ ಇದ ಬಯಸಬಹುದು. ಇವರನುಚರರು ಇವರಂತೆ ಇದನೊಪ್ಪಬಹುದು. ಅರಮನೆಯಲ್ಲಿ, ನಗರದಲ್ಲಿ, ರಾಜ್ಯದಲ್ಲಿ ಬೇರೆಯದು ಒಂದು ನರಪಿಳ್ಳೆ ಇದಕ್ಕೆ ಸಮ್ಮತಿಸಲಾರದು"[೧೫] ಎಂದು ಗುಡುಗುತ್ತಾನೆ. ವಿಚಿತ್ರ ಸಂಗತಿಯೆಂದರೆ ಕೈಕೆಯ ಮಗ ಭರತನೇ ದೊರೆಯಾಗುವನು ಎಂಬ ಪಿಸುಮಾತು ಅಂತಃಪುರದಲ್ಲಿ ಕಿವಿ ಕಿವಿಗಳ ಕಥೆಯಾಗಿ ಬೆಳೆದಿದೆ. ಈ ಭಯದ ಹೆಡೆಯ ನೆರಳಿನಲ್ಲೆ ಸಂಶಯದಿಂದ ಹಿರಿಯ ರಾಣಿಯ ಜೀವ ಕುಸಿದಿದೆ. ಇದು ಅರಮನೆಯ ಕೌಟುಂಬಿಕ ಒಳ ರಾಜಕೀಯವನ್ನು ಚೆನ್ನಾಗಿ ಬಿಂಬಿಸುತ್ತದೆ. ಇದರ ಜೊತೆ ವಿಧಿ ತನ್ನ ಲೀಲೆಯನ್ನು ಮೆರೆಯುತ್ತದೆ. ಒಂದೆಡೆ ದಶರಥ ಕೈಕೆಯನ್ನು ಕುರಿತು "ರಾಮನಾಣೆಗೆ ನಿನ್ನ ಇಚ್ಛೆಯನ್ನು ನಡೆಸುವೆನು ಏನಿಚ್ಛೆ ಹೇಳು" ಎನ್ನುತ್ತಾನೆ. ಆಕೆ, ಭರತನಿಗೆ ಪಟ್ಟ ರಾಮನಿಗೆ ವನವಾಸ ಬೇಡುತ್ತಾಳೆ. ವಿಷಯ ತಿಳಿದ ರಾಮ ಪಟ್ಟತ್ಯಜಿಸಿ ವನವಾಸ ಹೊರಡುವ

ಮುನ್ನ ತಾಯಿ ಕೌಸಲ್ಯೆಯ ಕಾಲಿಗೆರಗಿದರೆ ಆಕೆ ವಿಷಯ ತಿಳಿಯದೆ "ಕೀರ್ತಿಯನ್ನು, ಧರ್ಮವನ್ನು ಸಾಧಿಸು; ತಂದೆಯನ್ನು ಸತ್ಯ ಪ್ರತಿಜ್ಞನೆಂದೆನಿಸು; ಅವರಿಚ್ಛೆಯನು ನಡೆಸು"[೧೬] ಎಂದು ಆಶೀರ್ವದಿಸುತ್ತಾಳೆ. ರಾಮ ಹಿಂಜರಿಯುತ್ತಲೇ ವನವಾಸಕ್ಕೆ ಹೊರಡಬೇಕಾಗಿರುವ ಸುದ್ದಿಯನ್ನು ತಿಳಿಸುತ್ತಾನೆ. ಮಾಸ್ತಿಯವರ ರಾಮನ ಪಾಲಿಗೆ ವನವಾಸವೆಂಬುದು ತುಂಬಾ ಸಂತೋಷದಾಯಕವೇನಲ್ಲ. ಅದು 'ಹಿರಿದಾದ ಕೇಡೊಂದು ಅಡಸಿಹುದು' ಎಂಬ ಮಾತಿನಲ್ಲಿ ವ್ಯಕ್ತವಾಗಿದೆ. ರಾಮ ಎಷ್ಟೇ ಉದಾತ್ತನಾದರೂ ಇಲ್ಲಿ 'ನಿಮಗೆ, ಸೀತೆಗೆ ಲಕ್ಷ್ಮಣನಿಗೆ ಭರಿಸಬಾರದ ದುಃಖ ಎಂದು ಹೇಳುತ್ತಾನೆಯೇ ವಿನಃ ಭರತ, ಶತ್ರುಘ್ನ, ಸುಮಿತ್ರೆಯರ ಬಗ್ಗೆ ಚಕಾರವೆತ್ತುವುದಿಲ್ಲ. ರಾಮ ಕಾಡಿಗೆ ನಡೆದರೆ ಇವರಿಗೆಲ್ಲ ದುಃಕವಾಗದಿರುವುದೇ? ಎಂಬ ಪ್ರಶ್ನೆ ನಿಲ್ಲುತ್ತದೆ.

ಸುದ್ದಿ ತಿಳಿದ ಕೌಸಲ್ಯೆ 'ಎಂದಿನಿಂದಲೂ ನನ್ನ ಬಾಳಕಥೆ ಇಂತೆ ಅರುಚಿಯ ಚರಿತ ಆಯ್ತು. ಎಳೆತನದಿಂದಲೂ, ಪತಿಪುರುಷ, ನಾನು ಸತಿ ಎಂಬ ಸಂಬಂಧದ ಸುಖ ನನಗೆ ದೊರೆತುದನಿತನಿತೆ. ಕೈಕೆ ಕಡೆಗಣಿಸಿದ್ದಂತೂ ಹೇಳಲೂ ಸಾಧ್ಯವಿಲ್ಲ ನಾನು ಕಸಕ್ಕಿಂತ ಕಡೆಯಾದೆ' ಎಂದು ಕೊರಗುತ್ತಾಳೆ. ಈ ಮಾತುಗಳು ಒಂದು ಕುಟುಂಬದೊಳಗೆ ನಡೆಯುವ ಸವತಿಮಾತ್ಸರ್ಯ, ಪಿತೂರಿ, ಕೌಟುಂಬಿಕ ರಾಜಕೀಯಗಳು ಹೊರನೋಟಕ್ಕೆ ಒಂದೇ ಎಂದು ಗೋಚರಿಸಿದರೂ ಒಳಗೊಳಗೇ ದಳ ದಳಗಳು ಎಂಬುದನ್ನು ಚೆನ್ನಾಗಿ ಚಿತ್ರಿಸುತ್ತದೆ. ಈ ಮಾತುಗಳು ರಾಮ ಲಕ್ಷ್ಮಣನನ್ನು ಸಮಾಧಾನ ಪಡಿಸುವ ಪ್ರಸಂಗದಲ್ಲಿ ಇನ್ನೂ ಸ್ಪಷ್ಟವಾಗಿ ಗೋಚರಿಸುತ್ತದೆ. ರಾಮ, ಲಕ್ಷ್ಮಣನ ಕಿವಿಯಲ್ಲಿ-'ಈ ಮಾತನ್ನು ಮನಕೆ ತಂದುಕೊ ಭರತ ದೊರೆಯಾದರೆ ಚಿಕ್ಕಮ್ಮರಾಣಿ ಜನರನ್ನು ದರ್ಪದಿಂದ ನಡೆಸಿಕೊಳ್ಳುತ್ತಾರೆ. ಹಿರಿಯ ರಾಣಿಯರಿಬ್ಬರಿಗೂ ರಕ್ಷಣೆಯ ಅವಶ್ಯವಿದೆ ಅದರ ಹೊಣೆ ನಿನ್ನದು' ಎಂದು ಹೇಳುತ್ತಾನೆ. ಸವತಿ ಮಾತ್ಸರ್ಯ ಎನ್ನುವುದು ರಾಮನಿಗಾಗಲಿ, ಲಕ್ಷ್ಮಣನಿಗಾಗಲಿ ತಿಳದಿರುವ ವಿಷಯವೇ. ಆದರೆ ಕಷ್ಟಕ್ಕೆ ಗುರಿಮಾಡುವ ಕೈಕೆಯ ವಿಷಯದಲ್ಲಿ ರಾಮನಿಗೆ ಕೆಟ್ಟ ಅಭಿಪ್ರಾಯವಿಲ್ಲದಿದ್ದರೂ ಅಂಥ ಒಳ್ಳೆಯ ಅಭಿಪ್ರಾಯವೇನಿಲ್ಲ. ಆತ ಸಹನಾಮೂರ್ತಿಯಾದುದರಿಂದ ಎಲ್ಲವನ್ನೂ ಸಹಿಸಿಕೊಳ್ಳಬೇಕು; ಸಹಿಸಿಕೊಳ್ಳುತ್ತಾನಷ್ಟೇ.

ಸೀತೆಯಂತೂ ಹಠಮಾರಿ ಹೆಣ್ಣಿನಂತೆ ಕಾಣುತ್ತಾಳೆ. "ಪತಿ ಕಾಡಿಗೆ ಹೋದರೆ ಸತಿ ಊರಲ್ಲಿರುವುದು ಎಂಥ ಮಾತು? ನಾನೂ ಕಾಡಿಗೆ ಬರುವೆ, ವನವಾಸದಲ್ಲಿ ಯಾವುದು ಕಷ್ಟವೆಂದು

ವರ್ಣಿಸಿರುವೆಯೊ ಅದನ್ನು ನನ್ನ ಮನ ಇಷ್ಟವೆಂದೆನಿಸುತ್ತಿದೆ"[೧೭] ಹೀಗೆ ಸೀತೆಯ ವಾದ ಸರಣಿ ಬೆಳೆಯುತ್ತಾ ಹೋಗುತ್ತದೆ. ಇದು ಸಾಲದು ಎನ್ನುವಂತೆ "ಕೊರವಂಜಿ ನನ್ನ ಕೈ ನೋಡಿ ವನವಾಸ ಮಾಡವಳು" ಎಂದಿದ್ದಾಳೆ. ಅಲ್ಲದೆ ನನ್ನ ಜಾತಕದಲ್ಲಿ ಕಾಂತಾರವಾಸದಲ್ಲಿ ಕಳೆಯುವ ಯೋಗ ಎಂದು ಇದೆ. ಅವೆಲ್ಲ ಮಾತುಗಳು ಸುಳ್ಳಾಗಬೇಕೆ?"[೧೮] ಎನ್ನುತ್ತಾ ಈಕೆಯೇ ಕೊರವಂಜಿ ಮತ್ತು ಜ್ಯೋತಿಷಿಯ ಮಾತುಗಳನ್ನು ನಿಜಮಾಡಲು ವನವಾಸಕ್ಕೆ ಬರುತ್ತೇನೆಂದು ಹಟ ಹಿಡಿಯುತ್ತಾಳೆ. ಜ್ಯೋತಿಷ್ಯದ ಕಲ್ಪನೆ ಪುರೋಹಿತಶಾಹಿ ವರ್ಗದ್ದಾದರೆ ಕೊರವಂಜಿಯ ಕಣಿ ಜಾನಪದೀಯ ನೆಲೆಯದು. "ದೇವಿ, ಕಾಡ ಬಾಳುವೆಯ ಕಷ್ಟ ತಿಳಿಯದೆ ಈ ರೀತಿ ಹಟ ಮಾಡುವುದು ಬೇಡ"ವೆಂದು ರಾಮ ಹೇಳಿದರೆ "ನಾ ಇನ್ನು ಯಾರ ಮಾತನ್ನು ಕೇಳ ಸಹಿಸುವುದಿಲ್ಲ. ಜೊತೆಗೆ ಒಯ್ದಿರೆ ಜೊತೆಗೆ ಬರುವವಳು. ಒಯ್ಯೆಯೇ; ನೀನತ್ತ ನಡೆದಿರಲು ಯಾವುದೊ ರೀತಿ ಜೀವವನು ನೀಗುವಳು ಇಚ್ಛೆಯೇನದನಡೆಸು"[೧೯] ಎಂದು ಹೆದರಿಸುತ್ತಾಳೆ.

ಸೀತೆ ವನವಾಸಕ್ಕೆ ಹೊರಡುವ ಮುನ್ನ ಸುಮಂತ್ರನನ್ನು ಕರೆದು ನಿಮ್ಮ ಸೊಸೆಗೆ ಇದನ್ನೊಪ್ಪಿಸಿ ಎಂದು 'ಚಿನ್ನದಬಳಲೆ'ಯನ್ನು ಉಡುಗೊರೆಯಾಗಿ ಕೊಡುತ್ತಾಳೆ. ಕೂಸು ಹುಟ್ಟುವ ಸಮಯದಲ್ಲಿ ತಾನಿರುವುದಿಲ್ಲವೆನ್ನುವುದೇ ಅದಕ್ಕೆ ಕಾರಣ. ಸುಮಂತ್ರ ತನ್ನ ಸಾರಥ್ಯದಲ್ಲಿ ಅವರೆಲ್ಲರನ್ನೂ ವನವಾಸಕ್ಕೆಂದು ಗಂಗೆಯ ದಾಟಿಸಿ ಹಿಂತಿರುಗಿ ಬಂದಾಗ ದಶರಥ ಮೂರ್ಛೆ ಹೋಗುತ್ತಾನೆ. ಅತ್ಯಂತ ತ್ವರಿತವಾಗಿ ವನವಾಸಕ್ಕೆ ಹೊರಟುಹೋದ ರಾಮನನ್ನು ಕುರಿತು ಹಂಬಲಿಸುವ ಮಾಸ್ತಿಯವರ ದಶರಥ ಭಾಸ ಕವಿಯ ದಶರಥನನ್ನು ನೆನಪಿಗೆ ತರುತ್ತಾನೆ. ಎಚ್ಚರಗೊಂಡು ಸುಮಂತ್ರನಿಂದ ರಾಮ ಎಲ್ಲಿ ಹೇಗೆ ಏನು ಎತ್ತ? ಎಂದು ಎಲ್ಲ ವಿವರ ಕೇಳಿ ಪಡೆಯುತ್ತಾನೆ. ಅದನ್ನು ಪಕ್ಕದಲ್ಲಿದ್ದ ಕೌಸಲ್ಯೆ ಕೇಳಿಸಿಕೊಂಡು "ನನ್ನನ್ನೂ ರಾಮನಿರುವೆಡೆ ಕರೆದುಕೊಂಡು ಹೋಗು"ಎನ್ನುತ್ತಾಳೆ. ಸುಮಂತ್ರ ಸಮಾಧಾನದ ನುಡಿ ನುಡಿದರೆ ಕೌಸಲ್ಯೆ ಕಾಡಿನಲ್ಲಿರುವ ಮಕ್ಕಳನ್ನು ನೆನೆದು ಪತಿಯನ್ನು ದೂರುತ್ತಾಳೆ. ದಶರಥನೇ ಕೌಸಲ್ಯೆಯನ್ನು ಸಮಾಧಾನ ಮಾಡಬೇಕಾಗಿ ಬರುತ್ತದೆ. ನಂತರ "ಸಹಿಸಲಾರದ ದುಃಖ ನನ್ನ ಬುದ್ಧಿಯ ಕೆಡಿಸಿ ನನ್ನಿಂದ ಇಂತು ನುಡಿಸಿತು, ನನ್ನ ಮನ್ನಿಸಿರಿ"[೨೦] ಎಂದು ಬೇಡುತ್ತಾಳೆ. ದೊರೆ ದಶರಥ ದುಃಖ ತಡೆಯಲಾರದೆ ಕೊನೆ ಉಸಿರೆಳೆಯುತ್ತಾನೆ. ಇಲ್ಲಿನವರೆಗಿನ ಕಥೆಯನ್ನು ಸುಮಂತ್ರ ನಿರೂಪಿಸುತ್ತಾನೆ. ಇದನ್ನೆಲ್ಲ ಕೇಳಿದ ಗುಹರಾಜ 'ನಾವೆಲ್ಲ ನಾಳೆಯದಿನ ಸುಖವನ್ನು ಕಾಣುವೆವು' ಎಂಬ ಆಶಾವಾದದ ನುಡಿಯಿಂದ ಸಮಾಧಾನ ಹೇಳುವನು.

ರಾಮಾಯಣದ ರಥ ಈ ಘಟ್ಟಕ್ಕೆ ಬಂದು ನಿಲ್ಲುವಷ್ಟರಲ್ಲಿ ದೂತನೊಬ್ಬ ಧಾವಿಸಿ ಬರುತ್ತಾನೆ. 'ಶ್ರೀರಾಮ, ಸೀತಾದೇವಿ ಮತ್ತು ಸೌಮಿತ್ರಿ ಬರುತಿಹರು ಸುಖವಾಗಿಹರು;_ ನಾ ಹನುಮಂತ, ವಾನರ ರಾಜ ಸುಗ್ರೀವನೃಪನನುಚರ' ಎಂದು ರಾಮಾಗಮನದ ವಾರ್ತೆಯನ್ನು ತಿಳಿಸಿ ತನ್ನ ಪರಿಚಯ ಮಾಡಿಕೊಳ್ಳುತ್ತಾನೆ.

ಜನಸ್ಥಾನದ ನಡುಗಡ್ಡೆವರೆಗೆ ಸಾಗಿ ಬಂದ ರಾಮಾಯಣದ ರಥವನ್ನು ಮುಂದೆ ಬಹುದೂರ ಎಳೆದು ತಂದವನು ಹನುಮಂತ. ಕಥೆಯ 'ಶೋ'ಅವನದು. "ಅರಣ್ಯಕಾಂಡ, ಕಿಷ್ಕಿಂಧಾಕಾಂಡ, ಸುಂದರಕಾಂಡ, ಯುದ್ಧಕಾಂಡ ಇಷ್ಟೂ ಕಾಂಡಗಳ ಸುದೀರ್ಘ ಸುವಿಶಾಲ ಭೂಮಿಕೆಯಲ್ಲಿ ರಾಮಾಯಣದ ರಥ ತನ್ನ ಪರ್ಯಟನವನ್ನು ಕೈಗೊಳ್ಳುತ್ತದೆ. ಅಲ್ಲೆಲ್ಲ ಹರಿದಾಡಿಸಿದ ಸಮರ್ಥಪುರುಷ ಅವನೇ ಶ್ರೀರಾಮನ ಪದಕಿಂಕರ ಆಂಜನೇಯ"[೨೧]

ರಾಮ, ಸೀತಾ ಲಕ್ಷ್ಮಣರೊಡನೆ ಚಿತ್ರಕೂಟದಲ್ಲಿ ಸುಮಾರು ಹತ್ತು ವರ್ಷಗಳ ಕಾಲ ಸುಖದಿಂದಿದ್ದು, ಸಕಲ ಋಷಿಮುನಿಗಳ ನಿಶ್ಚಿಂತೆಗೆ ಕಾರಣನಾದ. ಶರಭಂಗ ಮತ್ತು ಸುತೀಕ್ಷ್ಣ- ಈ ಇಬ್ಬರು ಋಷಿಗಳ ಹೆಸರು ಮಾತ್ರ ಕಂಡು ಬಂದು ಉಳಿದಂತೆ 'ಎಲ್ಲ ಮುನಿಗಳು' ಎಂದು ಹೇಳಿ ಬಿಡುತ್ತಾರೆ. ರಾಕ್ಷಸರು ಮುನಿಜನವನು ಕಾಡುವುದು ನಿಂತೇಹೋಯಿತು ಎಂಬಂತೆ ಕಡಿಮೆಯಾದ ಮೇಲೆ ಕೊನೆಗೆ ದಕ್ಷಿಣ ದಿಕ್ಕಿನ ಅಂಚಿನಲ್ಲಿ ತಮ್ಮದೇ ಆದ ಒಂದು ಆಶ್ರಮ ನಿರ್ಮಿಸಿಕೊಳ್ಳುತ್ತಾರೆ. ಆ ಸ್ಥಳ ದಕ್ಷಿಣಭಾಗಕ್ಕೆ ಸೇರಿದ ದಂಡಕಾರಣ್ಯದ ಅಂಚು. ರಾವಣನ ಕಡೆಯ ಖರನೆಂಬ ರಾಕ್ಷಸ, ದೂಷಣ ಮತ್ತು ತ್ರಿಶರ ಎಂಬ ಸೇನಾನಿಗಳ ಜೊತೆ ಆ ಭಾಗವನ್ನು ಆಳುತ್ತಿದ್ದ. ಹೀಗಿದ್ದರೂ ರಾಮ ಮತ್ತು ಖರನ ನಡುವೆ ಕತ್ತಿ ಮಸೆಯುವ ಪ್ರಸಂಗ ಒದಗಿ ಬಂದಿರಲಿಲ್ಲ. ಒಂದು ದಿನ ಆ ಘಟನೆಯೂ ಸಂಭವಿಸಿತು.

ಒಂದು ದಿನ ರಾಕ್ಷಸರ ಪಾಳೆಯದ ತರುಣಿಯೊಬ್ಬಳು ರಾಮನ ಆಶ್ರಮದ ಕಡೆ ಸುಳಿಯುತ್ತಾಳೆ. ಇಬ್ಬರು ತರುಣರ ಜೊತೆಯಿರುವ ಒಬ್ಬಳೇ ತರುಣಿಯಾದ ಸೀತೆಯನ್ನು ನೋಡುವುದಷ್ಟೇ ಆಕೆಯ ಉದ್ದೇಶವಾಗಿತ್ತು. ಹೆಣ್ಣಿಗೆ ಈ ರೀತಿಯ ಕುತೂಹಲ ಸಹಜವಾಗಿ ಹೆಚ್ಚು. ಆದರೆ ಬಂದವಳು ತರುಣರಿಬ್ಬರಿಗೆ ಮನಸೋತಳು. ರಾಮಲಕ್ಷ್ಮಣರಲಿ ಯಾರಾದರೊಬ್ಬರು ನನ್ನನ್ನು

ವರಿಸಿ ಎಂದು ಕಾಡುತ್ತಾಳೆ. ಇಷ್ಟು ಸುಲಭವಾಗಿ ಮನಸು ಬದಲಿಸಲುವ ಈ ಹೆಣ್ಣಿನ ನಡತೆ ಮೊದಲು ಹಾಸ್ಯಸ್ಪದವಾಗಿ ಕಂಡುಬಂದರೂ ಅತಿರೇಕಕ್ಕೆ ಹೋದ್ದರಿಂದ 'ಈ ಜಂತುವಿನ ಕಿವಿ ಮೂಗುಗಳನ್ನು ಕೊಯ್ದುಬಿಡು' ಎನ್ನುತ್ತಾನೆ ರಾಮ. ಆಕೆ ಅಷ್ಟಕ್ಕೆ ಹೆದರಿ ಓಡಿಹೋಗಿ ತನ್ನ ಪಾಳಯಕ್ಕೆ ದೂರಿಡುತ್ತಾಳೆ. ಸ್ವೈರ ವರ್ತನೆಯ ಹೆಣ್ಣಿಗೆ ಮೂಗು ಕಿವಿಗಳನು ಕೊಯ್ಯುವುದು ಆ ಪ್ರಾಂತ್ಯದ ವಾಡಿಕೆಯ ದಂಡನೆಯಂತೆ. ಆದರೆ ಲಕ್ಷ್ಮಣ ಆಕೆಯ ಕಿವಿ ಮೂಗುಗಳನ್ನು ಕೊಯ್ಯುವುದಿಲ್ಲ. ಆ ರೀತಿ ಗದರಿಸಿದ್ದೇ ಕಾರಣವಾಗಿ ಹದಿನಾಲ್ಕುಜನ ರಾಕ್ಷಸರು ಇವರ ಮೇಲೇರಿ ಯುದ್ಧಕ್ಕೆ ಬರುವಂತಾಗುತ್ತದೆ. ರಾಮ ಅವರನ್ನು ಸಂಹರಿಸುತ್ತಾನೆ. ಅಕಂಪನ ಈ ಸುದ್ದಿಯನ್ನು ರಾವಣನಿಗೆ ಮುಟ್ಟಿಸುತ್ತಾನೆ. ಇದನ್ನೇ ನೆಪಮಾಡಿಕೊಂಡು ರಾವಣ ರಾಮನ ಮಡದಿಯನ್ನು ಕದ್ದು ತಂದುಬಿಡುವುದೆಂದು ನಿಶ್ಚಯಿಸುತ್ತಾನೆ. ಸೀತೆಯನ್ನು ಅಪಹರಿಸಲು ಮಾರೀಚ ಮೃಗವೇಷವನ್ನು ತೊಟ್ಟು ನಟಿಸಿ ರಾವಣನಿಗೆ ಸಹಕರಿಸುತ್ತಾನೆ. ಋಷಿವೇಷ ತೊಟ್ಟು ರಾವಣ ಸೀತೆಯನ್ನು ಅಪಹರಿಸುತ್ತಾನೆ. ಇಲ್ಲಿ ಮಾಯಾಮೃಗದ ಕಲ್ಪನೆಯನ್ನು ಬಿಟ್ಟಿದ್ದಾರೆ. ರಾವಣ ಸೀತೆಯನ್ನು ಅಪಹರಿಸಲು ರಥವನ್ನು ಬಳಸುತ್ತಾನಷ್ಟೇ. ಪುಷ್ಪಕವಿಮಾನವನ್ನಲ್ಲ. ಸೀತೆಯ ಆರ್ತನಾದವನ್ನು ಕೇಳಿ ಅಲ್ಲೇ ಬಳಿಯಲ್ಲಿದ್ದ ಆಶ್ರಮದೊಡೆಯ ಜಟಾಯು ಎಂಬ ಹಿರಿಯವ್ಯಕ್ತಿ ತಡೆಯಲು ಬಂದರೆ ರಾವಣ ಅವರ ತೋಳುಗಳನ್ನು ಕತ್ತರಿಸಿ; ಕತ್ತಿಯ ಹಿಡಿಯಿಂದ ತಲೆಯನ್ನು ಚಚ್ಚಿ ಮುದುಕರನ್ನು ನೆಲಕ್ಕುರುಳಿಸಿ ರಥವನ್ನೋಡಿಸಿಕೊಂಡು ಹೊರಟು ಹೋಗುತ್ತಾನೆ.(ಜಟಾಯು ಇಲ್ಲಿ ಹದ್ದಲ್ಲ).

ಮುಂದೆ ಸೀತೆಯನ್ನು ಹುಡುಕುತ್ತ ಬಂದ ರಾಮಲಕ್ಷ್ಮಣರಿಗೆ ಜಟಾಯುವಿನಿಂದ ಸೀತೆಯ ಅಪಹರಣದ ಸುದ್ದಿ ತಿಳಿಯುತ್ತದೆ. ಅದೇ ದಾರಿಯಲ್ಲಿ ಹುಡುಕುತ್ತ ಹೊರಟವರಿಗೆ ದಸ್ಯುರಾಜ, ಕಬಂಧನ ಪರಿಚಯವಾಗಿ ಕಿಷ್ಕಿಂಧೆಗೆ ಹೋಗಿ ಸುಗ್ರೀವನ ಸ್ನೇಹ ಸಂಪಾದಿಸಬೇಕೆಂತಲೂ, ಹಾಗೆಯೇ ಪಂಪಾ ಸರೋವರದ ಬಳಿಯಲ್ಲಿರುವ ಶಬರಿಗೆ ದರ್ಶನ ಲಾಭವನ್ನು ಕರುಣಿಸಿರೆಂದೂ ನಿರ್ದೇಶಿಸುತ್ತಾನೆ. ರಾಮಲಕ್ಷ್ಮಣರು ಅದೇ ರೀತಿ ಮಾಡುತ್ತಾರೆ. ಸುಗ್ರೀವನ ಸಂಪರ್ಕವಾದ ಮೇಲೆ ಲಕ್ಷ್ಮಣ ತಾವು ವನವಾಸಕ್ಕೆ ಹೊರಟು ಬಂದಂದಿನಿಂದ ಸೀತೆಯು ಅಪಹರಣವಾದ ಘಟನೆಯವರೆವಿಗೂ ಸಂಕ್ಷಿಪ್ತವಾಗಿ ಹೇಳಿ ಸ್ನೇಹ ಬೆಳೆಸುತ್ತಾರೆ. ನಂತರ ರಾಮ ವಾಲಿಯನ್ನು ವಧಿಸಿ ಸುಗ್ರೀವನನ್ನು ವಾನರಾಧಿಪತಿಯನ್ನಾಗಿ ಮಾಡುತ್ತಾನೆ. ಸುಗ್ರೀವ ಮಾತುಕೊಟ್ಟಂತೆ ಸೀತಾನ್ವೇಷಣೆಯ ಕಾರ್ಯವನ್ನು ಆರಂಭಿಸುತ್ತಾನೆ. ಅದಕ್ಕಾಗಿ ತನ್ನ ದೂತ ಜನವನ್ನು ತೆಂಕಣದ ಲಂಕೆಗೆ ಕಳುಹಿಸುತ್ತಾನೆ.

ಆ ರೀತಿ ಹೊರಟ ದೂತಜನರಲ್ಲಿ ಅಂಗದ ಜಾಂಬವಂತ, ಹನುಮಂತ ಇನ್ನೂ ಮುಂತಾದವರು ಹತ್ತು ಜನ ಮಾತ್ರ. ತೆಂಕಣದ ಕಾಡುಗಳಲ್ಲಿ ಅಲೆಯುತ್ತಾ ತಿಂಗಳ ಮೇಲೆ ತಿಂಗಳು ಕಳೆದು ಧೃತಿಗೆಟ್ಟಾಗ 'ಗೃಧ್ರಕೇತನ' ಜಟಾಯುವಿನ ಅಣ್ಣ ಸಂಪಾತಿ ಭೇಟಿಯಾಗುತ್ತದೆ. ಸಂಪಾತಿ ತನ್ನ ತಮ್ಮನ ಮರಣಕ್ಕಾಗಿ ದುಃಖಿಸುತ್ತಾನೆ. ತನ್ನ ತಮ್ಮನನ್ನು ಕೊಂದ ರಾವಣನ ಲಂಕೆಗೆ ಮಾರ್ಗವನ್ನು ತೋರುತ್ತಾನೆ. ಅಲ್ಲದೆ ನಿಮ್ಮಲ್ಲಿ ಬಲಿಷ್ಠರಾದವರು ಸಾಗರವನ್ನು ಈಸಿ ಲಂಕೆಯ ಸೇರಿ, ಸೀತಾಮಾತೆಯ ಹುಡುಕಿ ಎಂದು ಹೇಳುತ್ತಾನೆ. ಎಲ್ಲರ ಕೋರಿಕೆಯ ಮೇರೆಗೆ ಜಾಂಬವಂತ ಸಾಗರವನ್ನು ಈಸಲು ಹನುಮನೇ ಸರಿ ಎಂದು ನಿಶ್ಚಯಿಸುತ್ತಾನೆ.

ಹನುಮಂತ ಸಾಗರವನ್ನು ಈಸುವಾಗ ಯಾವ ಘಟನೆಯೂ ಸಂಭವಿಸುವುದಿಲ್ಲ. ಹಾಗೆಯೇ ರಾವಣನ ಅಂತಃಪುರಕ್ಕೆ ಹೋದ ವಿವರಣೆಯಾಗಲಿ, ವಿಭೀಷಣನ ಅರಮನೆಯನು ಹೊಕ್ಕ ವಿವರವನ್ನಾಗಲಿ ಮಾಸ್ತಿಯವರು ಕೊಡುವುದಿಲ್ಲ. ಹನುಮಂತ ಸಾಗರವ ಈಸಿ ಲಂಕೆಯನು ಸೇರುವುದು ರಾತ್ರಿಯಲ್ಲಿ. ಬಹುಹೊತ್ತಿನವರೆಗೆ ಸೀತೆಯ ನೆಲೆ ಸಿಗುವುದೇ ಇಲ್ಲ. ಕೊನೆಗೆ ರಾವಣನ ಅಂತಃಪುರದ ಉಪವನದ ಮಧ್ಯೆ ಒಂದು ಮರದಡಿ ಕುಳಿತ ಮಹಿಳೆಯನ್ನೂ ಸುತ್ತಲೂ ಕಾವಲಿರುವ ರಕ್ಕಸಿಯರನ್ನೂ ಕಾಣುತ್ತಾನೆ. ಅಷ್ಟರಲ್ಲಿ ಅರುಣೋದಯವಾಗುತ್ತದೆ. ರಾವಣ ಪರಿವಾರ ಸಮೇತ ಬಂದು ಸೀತೆಯ ನಿರ್ಧಾರವೇನು? ಎಂದು ಕೇಳಿದಾಗ ಸೀತೆ ರಾವಣನನ್ನು 'ಅಣ್ಕು ಸಾಲದ ನಾಯಿ ನೀನು ರಾಮನ ಎದುರು' ಎಂದು ಮುಂತಾಗಿ ನಿಂದಿಸುತ್ತಾಳೆ. ರಾವಣ ಕೋಪದಿಂದ ಸೀತೆಯನ್ನು ಕೊಲ್ಲಲು ಹೋದಾಗ ಅವನ ಸತಿಯರಲಿ ಹಿರಿಯಳೊಬ್ಬಳು ತಡೆಯುತ್ತಾಳೆ. ನಂತರ ರಾವಣ ಸೀತೆಯನ್ನು ಕುರಿತು 'ಇನ್ನೆರಡು ತಿಂಗಳ ಅವಧಿಯಿದೆ, ಒಪ್ಪಿದರೆ ನನ್ನ ಸತಿಯಾಗಿ ಬಾಳುವೆ; ಇಲ್ಲ ಸಾಯುವೆ, ಎಚ್ಚರಿಕೆ' ಎಂದು ಅಪ್ಪಣೆ ಮಾಡಿ ಹೊರಟು ಹೋಗುತ್ತಾನೆ. ಮೂರು ಲೋಕದ ಒಡೆಯ ರಾವಣನನ್ನು ಒಲ್ಲದ ದಡ್ಡ ಹೆಂಗಸು ಈ ಲೋಕದಲ್ಲಿ ಉಂಟೆ? ಎಂದು ರಕ್ಕಸಿಯರು ಬುದ್ಧಿವಾದ ಹೇಳುತ್ತಾರೆ. ಸೀತೆ ಅವರ ಮಾತನ್ನು ತಿರಸ್ಕರಿಸಿ ದೂರ ಸರಿಯುತ್ತಾಳೆ. ಈ ಸದವಕಾಶವನ್ನು ಹನುಮಂತ ಉಪಯೋಗಿಸಿಕೊಂಡು ತನ್ನ ಪರಿಚಯವನ್ನು ಹೇಳಿಕೊಂಡು, ತಾನು ಬಂದಿರುವ ಕಾರ್ಯ ನಿಮಿತ್ತವನ್ನು ವಿವರವಾಗಿ ಸೀತೆಗೆ ಹೇಳುತ್ತಾನೆ. ಹನುಮಂತನ ಮಾತುಗಳು ಸೀತೆಗೆ ನಂಬಿಕೆ ಹುಟ್ಟಿಸುತ್ತದೆ. ಹನುಮ ಸೀತೆಗೆ ರಾಮನ ಮುದ್ರೆಯುಂಗರ ನೀಡುತ್ತಾನೆ. ಸೀತೆ ತನ್ನ ಚೂಡಾಮಣಿಯನ್ನು ಹನುಮನ ಕೈಗಿಡುತ್ತಾಳೆ.

ಹನುಮಂತ ಉದ್ಯಾನವನವನ್ನು ಸುಟ್ಟು ರಾವಣನ ಗಮನ ಸೆಳೆಯಲು ಯೋಚಿಸುತ್ತಾನಾದರೂ ತಕ್ಷಣ ಒಬ್ಬ ದೂತನ ಕರ್ತವ್ಯಪಾಲನೆಯನ್ನು ನೆನೆದು ಲಂಕೆಯನ್ನು ಸುಡದೆ ಗುಪ್ತಚರಿಯಾಗಿ ಹಿಂದಿರುಗುತ್ತಾನೆ.

ಸುಗ್ರೀವನ ನಾಯಕತ್ವದಲ್ಲೆ ಸೈನ್ಯ ಸಿದ್ಧವಾಗಿ ಮುಂಜಾಗ್ರತೆಯ ಕ್ರಮಗಳನ್ನು ಕೈಗೊಂಡು ಹೊರಟು ಕಡಲತಡಿಯನ್ನು ಸೇರುತ್ತದೆ. ಶ್ರೀರಾಮ ಸಾಗರ ದೈವವನ್ನು ಕುರಿತು ವ್ರತವೊಂದನ್ನು ಆಚರಿಸುತ್ತಾನೆ. ಸೇತುವೆಯ ಬದಲು ಇಲ್ಲಿ ನಳನ ನೇತೃತ್ವದಲ್ಲಿ ಒಣಮರಗಳಿಂದ ಸುಮಾರು ನಾಲ್ಕು ನೂರು ಸಂಘಾಟಗಳು ನಿರ್ಮಾಣವಾಗುತ್ತದೆ. ಯಥಾಪ್ರಕಾರ ರಾವಣನ ಸೋದರ ವಿಭೀಷಣ ಶ್ರೀರಾಮನ ಆಶ್ರಯಬೇಡಿ ಬರುತ್ತಾನೆ. ವಾನರಸೇನೆ ರಾಕ್ಷಸರು ತಿಳಿಯುವ ಮುನ್ನವೇ ಲಂಕೆಯನ್ನು ಸೇರಿ ಜೈತ್ರಯಾತ್ರೆಯ ಮೊದಲ ಘಟ್ಟವನ್ನು ಮುಗಿಸುತ್ತದೆ.

ಮೂರು ದಿನಗಳಲ್ಲಿ ನಡೆದ ಯುದ್ಧದ ಮುಖ್ಯಾಂಶಗಳನ್ನಷ್ಟನ್ನೇ ಹನುಮಂತ ವಿವರಿಸುತ್ತಾನೆ. ಮುಂದೆ ಅಂಗದ ಯುದ್ಧದ ಸಂಪೂರ್ಣ ವಿವರವನ್ನು ನೀಡುತ್ತಾನೆ. ಆದ್ದರಿಂದ ಕೆಲ ಪ್ರಸಂಗಗಳು ಪುನರಾವರ್ತನೆಯಾದಂತೆ ತೋರುತ್ತದೆ. ಮುಖ್ಯವಾಗಿ ಯುದ್ಧದಲ್ಲಿ ರಾವಣನ ರಥ ಮುರಿದುಬೀಳುವ ಪ್ರಸಂಗ. ನಂತರ ರಾವಣನ ಅವಸಾನದ ನಂತರ ವಿಭೀಷಣನಿಗೆ ಪಟ್ಟಾಭಿಷೇಕವಾಗುತ್ತದೆ. ನಂತರ ರಾಮ ಹನುಮನನ್ನು ಕುರಿತು 'ನೀ ಹೋಗಿ ದೇವಿಯರಿಗೆ ನನ್ನ ಜಯದ ವಾರ್ತೆಯ ತಿಳಿಸಿ ಅವರಿಚ್ಛೆಯೇನೆಂದು ತಿಳಿದು ಬಾ', ಎಂದು ಹೇಳಿ ಕಳುಹಿಸಿದಾಗ ಸೀತೆ 'ನನ್ನರಸನನ್ನು ಕಾಣಬೇಕೆನ್ನುವುದೊಂದೇ ನನ್ನಿಚ್ಛೆ' ಎನ್ನುತ್ತಾಳೆ. ಆಗ ಹನುಮಂತನು 'ಇಷ್ಟು ದಿನ ನಿಮಗೆ ಹಿಂಸೆ ಕಷ್ಟಗಳನ್ನು ಕೊಟ್ಟ ರಕ್ಕಸಿಯರನ್ನು ದಂಡಿಸಲು ಅಪ್ಪಣೆ ಕೊಡಿ ಎನ್ನುತ್ತಾನೆ. ಸೀತೆ ಅದಕ್ಕೊಪ್ಪುವುದಿಲ್ಲ. ರಕ್ಕಸಿಯರು ರಾಜಾಜ್ಞೆಯಂತೆ ತಮ್ಮ ಕರ್ತವ್ಯವನ್ನು ತಾವು ಮಾಡಿದರಷ್ಟೇ, ಅವರದೇನೂ ತಪ್ಪಿಲ್ಲವೆಂದು ತನ್ನ ಮಾನವತೆಯನ್ನು ಮೆರೆಯುತ್ತಾಳೆ.

ರಾವಣನ ಸೆರೆಯಿಂದ ಬಂಧಮುಕ್ತಳಾದ ಸೀತೆಯನ್ನು ಸ್ವೀಕರಿಸುವ ಪ್ರಸಂಗ ಮಾಸ್ತಿಯವರ ಕಾವ್ಯದಲ್ಲಿ ತುಸು ಭಿನ್ನವಾಗಿದೆ. ಸೀತೆಯನ್ನು ಕುರಿತು ರಾಮ ನುಡಿಯುವ ಮಾತುಗಳು–"ಒಂದು ವರುಷದ ದಿನದ ಹಗೆಯ ಅಂತಃಪುರದಿ ಕಳೆದ ಹೆಂಡಿರ ರಾಮ

ಒಪ್ಪಿಕೊಂಡನು ಎಂದು ಜನ ನುಡಿದು ಹಳಿಯ ಮಾತಿಗೆ ನಾನು ತಲೆಕೊಟ್ಟು ಬಾಳಲೊಲ್ಲೆನು. ಕದ್ದು ತಂದವನ ದೌಷ್ಟ್ಯವನ್ನು ದಂಡಿಸುವ ಸಲುವಾಗಿ ಈ ಯುದ್ಧವನ್ನು ನಡೆಸಿ ಹಗೆಯ ಕೊಂದುದು ಆಯ್ತು. ಇದರಿಂದ ನನ್ನ ಈ ವ್ಯವಹಾರದೆಲ್ಲ ಉದ್ದೇಶವೂ ಫಲಿಸಿಹುದು"[೨೨] ಎಂದಾಗ ಸೀತೆ ಕೇಳುವ ಪ್ರಶ್ನೆ 'ಶ್ರೀರಾಮ ವೀರನೆನ್ನುವುದನ್ನು ತೋರಲು ಇಷ್ಟೊಂದು ಕಷ್ಟಪಡಬೇಕಾಗಿತ್ತೇನು? ನನ್ನ ಶೀಲ, ಚಾರಿತ್ರ್ಯದ ಬಗ್ಗೆ ನನ್ನ ಪತಿ ನುಡಿದ ನುಡಿಗಳಿವು ಅಸಂಸ್ಕೃತನಾದ ಗಂಡನೊಬ್ಬ ತನ್ನ ಅಪ್ರಾಕೃತಳಾದ ಹೆಂಡತಿಯನ್ನು ಕುರಿತು ನುಡಿದ ನುಡಿಗಳಂತವೆ' ಎಂದು ಅಕ್ಷೇಪಿಸುತ್ತಾಳೆ. ಅಗ್ನಿಪ್ರವೇಶವನ್ನು ಮಾಡಲು ಅನುವಾಗುವಂತೆ ಚಿತೆಯನ್ನು ನಿರ್ಮಿಸಲು ಸೌಮಿತ್ರಿಗೆ ಹೇಳುತ್ತಾಳೆ. ಅಷ್ಟರಲ್ಲಿ ವಾನರ ದಳಪತಿ ನಿನ್ನ ಸಲಹೆಯಂತೆ ಸುಗ್ರೀವ ತಮ್ಮ ಕಡೆಯಲ್ಲಿರುವ ಒಂದು ವಾಡಿಕೆಯನ್ನು ಶ್ರೀರಾಮನಲ್ಲಿ ವಿನಂತಿಸುತ್ತಾನೆ. ನನ್ನ ಸಲಹೆ ಏನೆಂದರೆ "ಸೀತಾದೇವಿ ಅಗ್ನಿಪ್ರವೇಶ ಮಾಡಿ ಪ್ರಾಣತ್ಯಾಗವೆಂಬುದು ಬೇಡ ಅದರ ಬದಲು 'ನನ್ನ ಸತ್ಯಕ್ಕೆ ಸಾಕ್ಷಿ ಆಗಲಿ' ಎಂದು ಕಿಚ್ಚುಹೊಕ್ಕರೆ ಸಾಕು, ಹೊಕ್ಕವರು ಅದರಿಂದ ಸುಕ್ಷೇಮವಾಗಿ ಹೊರಗೈತರಲು ದೇವಿಯರ ಪಾವಿತ್ರ್ಯ ಸಿದ್ಧವಾಯಿತು"[೨೩] ರಾಮ ಈ ಸಲಹೆಯನ್ನು ಒಪ್ಪುತ್ತಾನೆ. ಸೀತಾದೇವಿ ಅಂತೆಯೇ ಮಾಡುತ್ತಾಳೆ. ಈ ಪ್ರಸಂಗವು ಜಾತ್ರೆಗಳಲ್ಲಿ ಇಂದಿಗೂ ಪ್ರಚಲಿತವಿರುವ ಕೆಂಡಹಾಯುವುದನ್ನು ನೆನಪಿಗೆ ತರುತ್ತದೆ. ಭಕ್ತಾದಿಗಳು ತಮ್ಮ ಪಾಪ ಪರಿಹರಿಸಿಕೊಳ್ಳಲು ಅಥವಾ ತಮ್ಮ ಹರಕೆಯನ್ನು ಪೂರೈಸಲು ಇಂದಿಗೂ ಈ ಪದ್ಧತಿಯನ್ನು ಅನುಸರಿಸುತ್ತಾರೆ. ಸೀತಾದೇವಿ ಈ ಪದ್ಧತಿಯಂತೆ ಅಗ್ನಿಯನ್ನು ಹೊಕ್ಕು ಹೊರಬಂದಮೇಲೆ ಶ್ರೀರಾಮನು, ದೇವಿಯು ಧರ್ಮಿಷ್ಠೆ, ನಿರ್ದೋಷಿ, ಚಾರಿತ್ರವತಿ, ಪತಿವ್ರತೆ ಎಂಬುದು ಬಲ್ಲೆನು. ಆದರೆ ನಿನ್ನ ಪರಿಶುದ್ಧತೆಯ ಬಗ್ಗೆ ಜನರಿಗೆ ನಂಬಿಕೆಯಾಗಬೇಕಲ್ಲ. ಆ ಕಾರಣ ಈ ಪರೀಕ್ಷೆ. ಇದರ ಕಾರಣವಿಷ್ಟೇ. ಮರ್ಯಾದೆಗೆ ಭಂಗ ಉಂಟಾದಾಗ ಮಹಿಳೆ ಮಡಿಯಲು ಹಿಂಜರಿಯರು ಎನ್ನುವುದನ್ನು ಜಗ ಕಾಣಬೇಕಾಗಿತ್ತಷ್ಟೇ ಎನ್ನುತ್ತಾನೆ. ನಂತರ ಶ್ರೀರಾಮ ಪರಿವಾರ ಪ್ರಯಾಣ ಬೆಳೆಸಲು ವಿಭೀಷಣ ಏರ್ಪಡಿಸಿದ ಶೀಘ್ರಯಾನದ ಹತ್ತು ರಥಗಳಲ್ಲಿ ಪರಿವಾರ ಸಮೇತನಾಗಿ ಹಿಂದಿರುಗುತ್ತಾನೆ.

ಶತ್ರುಘ್ನ ಪಟ್ಟಾಭಿಷೇಕದ ಸಿದ್ಧತೆಯ ಕಾರ್ಯದಲ್ಲಿ ತೊಡಗಿದ್ದರೆ, ಊರ್ಮಿಳೆ ಹದಿನಾಲ್ಕು ವರ್ಷದ ಹಿಂದಿನ ಘಟನೆಯನ್ನು ಸ್ವಗತದಲ್ಲಿ ಮೆಲುಕುಹಾಕುವಳು. ಗುರು ವಸಿಷ್ಠರು ರಾಮನ ಗ್ರಹಗತಿ ನೋಡಿ 'ಈ ವರ್ಷ ಪಟ್ಟ; ಅದಕ್ಕೆ ಮುನ್ನ ಯುದ್ಧದಲ್ಲಿ ಜಯ' ಎಂದು ಜ್ಯೋತಿಷ್ಯವನ್ನು ಪಲುಕುಹಾಕುತ್ತ ಹಿಂದಿರುಗಿದ ರಾಮನನ್ನು ಎದುರುಗೊಳ್ಳಲು ಭರತನಾಶ್ರಮಕ್ಕೆ ಬರುವರು.

ಅರಮನೆಯ ಕಂಚುಕಿ; ತನ್ನೋರಗೆಯ ಸೇವಕರ ಸಭೆ ಕರೆದು, ಯಾರು ಯಾರು ಯಾವ ಯಾವ ಕಾರ್ಯ ಕೈಗೊಳ್ಳಬೇಕೆಂದು ಬೆಸಸುವನು. ಪುರಜನವಂತೂ ವನವಾಸದಿಂದ ಹಿಂದಿರುಗುವ ಅರಸು ಮಕ್ಕಳನ್ನು ನೋಡಲು ಕಾತರರಾಗಿ ನಂದಿಗ್ರಾಮದ ದಾರಿಹಿಡಿದರು. ರಾಮ ವನವಾಸ ಹೊರಟಂದು ಅವನೊಡನೆ ತಾವು ವನವಾಸಕ್ಕೆ ಹೊರಟಿದ್ದ ಅನೇಕ ಹಿರಿಯ ಜೀವಗಳನ್ನು ಮೃದು ನುಡಿಗಳಿಂದ ಹಿಂದಿರುಗಿಸಿದ್ದ. ಈಗ ಅವರಲ್ಲಿ ಉಳಿದಿರುವ ಕೆಲವೃದ್ಧರು ರಾಮನನ್ನು ಕಾಣಲು ಕಾತರಿಸಿ ನಂದಿಗ್ರಾಮಕ್ಕೆ ಕರೆದುಕೊಂಡು ಹೋಗುವಂತೆ ತಮ್ಮ ಮಕ್ಕಳಿಗೆ ದುಂಬಾಲು ಬಿದ್ದರು. ವನಪಾಲನೆಂಬ ಅಜ್ಜ ಹಿಂದೊಮ್ಮೆ ನದಿಯಾಚೆ ಮಾಳದಲ್ಲಿ ಕೆಲಸ ಮಾಡುತ್ತಿರಬೇಕಾದರೆ ಶ್ರೀರಾಮ ಕುದುರೆ ಸವಾರಿಯಲಿ ಅತ್ತ ಬಂದಿದ್ದ. ಆ ಮಾರ್ಗದಲ್ಲಿ ಒಂದು ಒಣ ಎಲೆ ಗಾಳಿಗೆ ಶಬ್ದ ಮಾಡಿದಾಗ ಕುದುರೆ ಮುಂದೆ ಹೆಜ್ಜೆ ಇಡಲು ಅಳುಕಿ ಅಲ್ಲೆ ನಿಂತುಬಿಟ್ಟಿತು. ಆಗ ವನಪಾಲ ಒಣ ಎಲೆಯನ್ನು ಎತ್ತಿ ಕುದುರೆಯ ಭಯವನ್ನು ನಿವಾರಿಸಿದ್ದ. ಆ ಪ್ರಸಂಗದ ತರುವಾಯ ವನಪಾಲ ಎಲ್ಲಿ ಸಿಕ್ಕರೂ ಶ್ರೀರಾಮ ತಪ್ಪದೇ ಯೋಗಕ್ಷೇಮ ವಿಚಾರಿಸುತ್ತಿದ್ದ. ಆದರೆ ರಾಮ ವನವಾಸ ಹೊರಡುವಾಗ ಅವನಿಗೆ ನೋಡುವ ಮನಸ್ಸಾಗಲಿಲ್ಲ. ಆದರೆ ಈಗ ನೋಡಲು ಹಂಬಲಿಸಿ ಮಗನ ನೆರವಿನಿಂದ ಬಂದಿರುವನು.

ತ್ರಿಜಟನೆಂಬ ವಿಪ್ರನು, ರಾಮ ವನವಾಸ ಹೊರಡುವಂದು ಗೋ ಮಂದೆಯನ್ನೇ ದಾನವಾಗಿ ಪಡೆದಿದ್ದವನು. ಈ ಹದಿನಾಲ್ಕು ವರ್ಷದಲ್ಲಿ ವಿಪ್ರನ ಗೋ ಮಂದೆ ಒಂದಕ್ಕೆ ಮೂರಾಗಿದೆ. ಮಕ್ಕಳೂ ಬೆಳೆದು ವಿಪ್ರನ ಪತ್ನಿ ಮಕ್ಕಳೊಡನೆ ಅಗ್ರಹಾರದಲ್ಲಿ ಮನೆ ಮಾಡಿಕೊಂಡು ನೆಲೆಸಿದ್ದಾರೆ. ವಿಪ್ರ ಮಾತ್ರ ಒಬ್ಬ ಮಗನೊಡನೆ ಗೋ ಸಂರಕ್ಷಣೆಗಾಗಿ ವನದಲ್ಲೇ ನೆಲೆಸಿದ್ದವನು. ಈಗ ಪತ್ನಿಯ ಸಲಹೆಯಂತೆ ಶ್ರೀರಾಮನಿಗೆ ಗೋಮಂದೆಯನ್ನು ಹಿಂದಿರುಗಿಸಲು ಬಂದಿದ್ದಾನೆ.

ಅದೇ ರೀತಿ ನಗರ, ಊರು, ಪಟ್ಟಣದಿಂದ ಹಿರಿಯ ಕಿರಿಯರೆನ್ನದೆ ಬಂದು ನಂದಿಗ್ರಾಮದಲ್ಲಿ ಸೇರಿದ್ದಾರೆ. ಅವರಲ್ಲಿ ಗ್ರಾಮದ ವೃದ್ಧ ರೈತರು ದೊರೆ ಬರುವ ಸುದ್ದಿಯನ್ನು ತಂದ ಹಿರಿಯರ ನೋಡಬೇಕೆಂದು ಶತ್ರುಘ್ನನನ್ನು ಕೇಳಿಕೊಂಡು ಹನುಮನನ್ನು ನೋಡಿ ಮಾತನಾಡಿಸಿ ಸಂತೋಷಪಡುತ್ತಾರೆ. ಮಾರನೆಯ ದಿನ ಸೂರ್ಯೋದಯಕೆ ಮುನ್ನವೇ ನಾಡಜನ, ನಾಗರಿಕಜನ ಅಷ್ಟಸಚಿವರ ಸಹಿತ ರಾಮ ಬರುವುದನ್ನೇ ಕಾಯುತ್ತಿದ್ದಾರೆ. ಸಾಕಷ್ಟು ಹೊತ್ತು ಕಳೆದರೂ ರಾಮಾದಿಗಳ ಸುಳಿವಿಲ್ಲದಾಗ ಭರತನಿಗೆ ಈತ ಬರಿಯ ಚೇಷ್ಟೆಯ ಮಾತನಾಡಿದನೇ ಎಂಬ ಸಂದೇಹದ ನೆರಳಾಡಿ

ಮರೆಯಾಗುತ್ತದೆ. ತನ್ನ ಸಂದೇಹ ನಿವಾರಣೆಗೆ 'ಈ ವೇಳೆಗಣ್ಣಯ್ಯ ಇಲ್ಲಿಗೈದಿರಬೇಕಿತ್ತು ಏಕೆ ಬಾರರೋ?' ಎಂದಾಗ ಹನುಮನು 'ದಾರಿಯಲಿ ಹಣ್ಣುಗಿಡ ಬಹಳ ಇವೆ. ನಮ್ಮತ್ತ ಈ ಹಣ್ಣುಗಳು ಇಲ್ಲ. ನಮ್ಮ ಜನ ಇವ ತಿನ್ನುತ್ತ ಇರಬೇಕು. ಪ್ರಭು ಇವರ ಸಂತಸಕ್ಕೆ ಅಡ್ಡಿಮಾಡಲೇಕೆ ಎಂದು ರಥದ ವೇಗವ ತಡಮಾಡಿರಬೇಕು'ಎನ್ನುವಷ್ಟರಲ್ಲಿ ರಾಮನ ಆಗಮನವಾಗುತ್ತದೆ.

ಭರತ ರಾಮನಿಗೆ ರಾಜ್ಯವನ್ನು ಒಪ್ಪಿಸಿಕೊಡುವುದು. ಕೌಸಲ್ಯಾದೇವಿಗೆ ಸೀತೆ, ಋಷಿ ದಂಪತಿಗಳಾದ ಅತ್ರಿ, ಅನುಸೂಯೆಯರಿಂದ ಆತಿಥ್ಯ ಪಡೆದದ್ದು ಮತ್ತು ಅನಸೂಯೆ ಆಭರಣಗಳನ್ನು ಕೊಟ್ಟು ಹರಸಿದ ಪ್ರಸಂಗವನ್ನೆಲ್ಲ ಹೇಳುವಳು.

ಶ್ರೀರಾಮ ಮಂತ್ರಿ ಪುರಜನ ಪ್ರಮುಖರಿಗೆ ವನವಾಸದವಧಿಯಲ್ಲಿ ನಡೆದ ಎಲ್ಲಾ ಘಟನೆಗಳನ್ನು ಸಂಕ್ಷಿಪ್ತವಾಗಿ ವಿವರಿಸುತ್ತಾನೆ. ಸುಮಂತ್ರನ ಹೆಸರಿಡದೆಯಿದ್ದ ಮೊಮ್ಮಗನಿಗೆ 'ಬಾಲಸುಮಂತ್ರ' ಎಂದು ಹೆಸರಿಡುತ್ತಾನೆ. ವನಪಾಲ ತ್ರಿಜಟರ ಭೇಟಿ ಮಾಡಿದ ರಾಮ ಉಚಿತ ರೀತಿಯಲ್ಲಿ ಮರ್ಯಾದೆ ಸಲ್ಲಿಸಿದ ನಂತರ ಶುಭಮುಹೂರ್ತದಲ್ಲಿ ರಾಜಧಾನಿ ಅಯೋಧ್ಯೆಯ ಪ್ರವೇಶ ಮಾಡುತ್ತಾನೆ. ದಶರಥನ ರಾಣಿಯರು ಬಂದ ಅತಿಥಿಗಳನ್ನು ಕುಳ್ಳಿರಿಸಿ ಉಭಯಕುಶಲೋಪರಿಯಲ್ಲಿ ತೊಡಗಿದಾಗ ಯುದ್ಧದಲ್ಲಿ ಕಂಗೆಟ್ಟ ಲಂಕೆಯ ಬಗ್ಗೆ ಸುಗ್ರೀವ ಕನಿಕರದಿ ನುಡಿದಾಗ ವಿಭೀಷಣನು 'ಲಂಕೆಯು ಮುಂಚಿನಂತಾಗಲು ನಾಲ್ಕು ವರ್ಷಗಳಾದರೂ ಬೇಕೆಂದನು. ಆಗ ಶ್ರೀರಾಮನು, ರಾವಣನ ದುರ್ದಮ್ಯದೋಷದಿಂದ ಹೇಗೆ ವಾನರಕುಲ ಮತ್ತು ಅಸುರಕುಲದ ಅಮಾಯಕರ ಸಾವು ನೋವು ಉಂಟಾಯಿತೆಂದು ವಿವರಿಸಿ, ಕಳೆದುಹೋದುದ ಕುರಿತು ಮಾತು ನಿಷ್ಫಲ. ಈಗ ಎರಡು ನಾಡಿಗೆ ಸಜ್ಜನ ಮಿತ್ರ ಸಹೋದರರು ಪ್ರಭುಗಳು ನಾಡು ನೋವನ್ನು ಮರೆತು ನಗುವಂತಾಗುವುದೆಂದು ಆಶಿಸುವನು. ನಂತರ ವಾನರ ದೊರೆ ವಿಭೀಷಣರು ವೀಳೆಯ ಪಡೆದು ಹೊರಡಲನುವಾದಾಗ ಕೌಸಲ್ಯಾದೇವಿ ಅವರ ರಾಣಿವಾಸದವರನ್ನು ಮತ್ತೆ ಮಾತುಕತೆಗೆಂದು ಇರಿಸಿಕೊಂಡರು.

ಕೌಸಲ್ಯಾದೇವಿಯ ಅಪೇಕ್ಷೆಯಂತೆ ದೇವಿಯರಿಗೆಲ್ಲಾ ತಾರಾದೇವಿ, ವಾಲಿ–ಸುಗ್ರೀವರ ಸಂಸಾರದ ಕಥೆಯನ್ನು ಹೇಳುತ್ತಾಳಷ್ಟೇ? ಅಲ್ಲದೆ ಅವರ ಜನಾಂಗದಲ್ಲಿ ಪೂರ್ವದಿಂದಲೂ ಇರುವ ಪದ್ಧತಿಯನ್ನು ವಿವರಿಸುತ್ತಾಳೆ. ಮದುವೆಯಾದ ಗಂಡು ಹೆಣ್ಣು ಬಾಳುವನಿತೂ ಜೊತೆಯೇ ಆದರೆ

ಇಂಥ ಜೊತೆಯ ಗಂಡ ಸತ್ತರೆ ಅವನ ಹೆಂಡತಿಯನ್ನು ಸೋದರರಲ್ಲಿ ಹಿರಿಯನ ಹೆಂಡತಿಯಾಗುಳಿಯಬೇಕು. ಇಲ್ಲ ಆತ ಒಪ್ಪುವ ಸೋದರರಲ್ಲಿ ಯಾರದರೊಬ್ಬರನ್ನು ವರಿಸಬೇಕು. ಕುಲದ ಹೆಣ್ಣೊಂದು ದಿಕ್ಕಿಲ್ಲದಾಯಿತು ಎಂದು ಯಾವನೇ ಬೀದಿ ಹೋಕನ ಕಣ್ಣನೋಟಕ್ಕೆ ಬಲಿಯಾಗುವುದು ಬೇಡ; ಎನ್ನುವುದೇ ಪೂರ್ವಿಕರ ಉದ್ದೇಶ, ಮರ್ಯಾದೆ ಮತ್ತು ವಾಡಿಕೆ. ಇದೇ ಪದ್ಧತಿ ಅರಮನೆಗೂ ಅನ್ವಯಿಸುತ್ತದೆಂದು ವಾಡಿಕೆಯ ಕ್ರಮವನ್ನು ಹೇಳುತ್ತಾಳೆ. ಟಿಬೆಟ್ ಅಥವಾ ನೇಪಾಳಿಯನ್ ಜನಾಂಗದಲ್ಲೂ ಈ ವಾಡಿಕೆಯಿರುವುದಾಗಿ ಕಂಡುಬರುತ್ತದೆ. ಕರ್ನಾಟಕದ ಕೆಲವು ಗೌಡಮನೆತನಗಳಲ್ಲೂ ಈ ವಾಡಿಕೆಯಿದೆ. ಸ್ವಲ್ಪ ಬದಲಾವಣೆ ಎಂದರೆ ಗಂಡನನ್ನು ಕಳೆದುಕೊಂಡ ಹೆಣ್ಣು, ಹಿರಿಯರ ಒಪ್ಪಿಗೆ ಪಡೆದು ತನಗೆ ಒಪ್ಪಿಗೆಯಾದವನ ಜೊತೆಗೆ ಬಾಳಬಹುದು. ಇದನ್ನು 'ಕೂಡಿಕೆ'ಯೆಂದು ಕರೆಯುತ್ತಾರೆ. ಮಾನವಶಾಸ್ತ್ರದ ಹಿನ್ನೆಲೆಯಲ್ಲಿ ಈ ಪದ್ಧತಿಯನ್ನು ಮಾಸ್ತಿಯವರು ತಮ್ಮ ಕಾವ್ಯದಲ್ಲಿ ಸಮರ್ಥವಾಗಿ ಬಳಸಿಕೊಂಡಿದ್ದಾರೆ.

ಸೀತೆ ಸೆರೆಯಲ್ಲಿದ್ದ ದಿನಗಳ ವಿವರವನ್ನು ವಿಭೀಷಣನ ಮಗಳು ಅನಲಾದೇವಿ ನಿರೂಪಿಸುತ್ತಾಳೆ. ರಾವಣ ಸೀತೆಯನ್ನು ಅಪಹರಿಸಿದ್ದಕ್ಕೆ ಕಾರಣವೆಂದರೆ "ನಮ್ಮ ಹೊಲಬಿನ ಬದಿಯ ಋಷಿಯ ಕಾನನಕ್ಕೆ ಬಂದು ಅವರು ನಮ್ಮ ಮೇಲೆ ಹೊರಿಸಿದ ಆರೋಪದ ಮಾತು ಕೇಳಿ ನಮ್ಮ ಜನಸ್ಥಾನಪಾಳ್ಯದ ನಮ್ಮ ಬಂಧು ಜನವನ್ನು ಕೆಣಕಿದ. ಇಂತಹವನನ್ನು ಯುದ್ಧದಲ್ಲಿ ಕೆಣಕಿ ಫಲವಿಲ್ಲ. ಈ ಡಾಂಭಿಕನ ಹೆಂಡತಿಯ ಕದ್ದು ತರುವುದು ಒಂದೇ ಇವನ ಈ ಭಾವಕೆ ಮದ್ದು"[೨೪] ಇದು ರಾವಣನ ಉದ್ದೇಶ.

ಕಬಂಧನೂ ರಾಮನಿಗೆ, ರಾವಣ ಎಂತಹವನೆಂದು ವಿವರಿಸುತ್ತಾ–

**"ಲಂಕೆಯ ರಾಜ**
**ಲೋಕೈಕ ವೀರನೆಂದೇ ಖ್ಯಾತಿ ಪಡೆದಿರುವ**
**ಶೂರರಾವಣ. ಯುದ್ಧದಲಿ ಸೋತ ಹಗೆಜನರ**
**ಹೆಂಗಳನು ಕರೆದೊಯ್ಯುವುದು ಅವನ ಪದ್ಧತಿ**
**ಹೆಣ್ಣು ಬೇಕೆಂದಲ್ಲ. ಸೋತವರ ಜೀವವನು**
**ಹಿಂಡಿ ನೋಯಿಸಬೇಕು. ಹೆಂಡಿರನು ಕದಿಯುವುದು**

**ಬೇರೆ ಏನೇ ತೆರದಿ ನೀಡಬಹ ನೋವಿಗೂ**

**ಮಿಗಿಲೆಂದು ಎಲ್ಲ ಜನ ಎಣಿಸುವುದು"**[31]

ಇಷ್ಟೇ ಅವನ ಉದ್ದೇಶವಾಗಿದ್ದರೆ ಆತ ಸೀತೆಯ ಬಗ್ಗೆ ಏಕೆ ವ್ಯಾಮೋಹಗೊಂಡು ಅವಳನ್ನು ತನ್ನ ವಶಪಡಿಸಿಕೊಳ್ಳಲು ಬಲವಂತವಾಗಿ ಒತ್ತಾಯಿಸುತ್ತಾನೆ ಎನ್ನುವ ಪ್ರಶ್ನೆ ನಿಲ್ಲುತ್ತದೆ.

ಸೀತೆಯ ವಿಷಯವಾಗಿ ತ್ರಿಜಟೆಗೆ ಬಿದ್ದ ಕನಸನ್ನು ಅನಿಲೆಗೆ ಹೇಳಿದಾಗ ಅನಿಲೆ "ಕನಸು ಇದು ಮಂಗಲವ ಸೂಚಿಸುತಲಿದೆ; ದೇವಿಯರಿಗಿದನು ಬಿನ್ನಯಿಸು"ಎಂದು ಹೇಳುತ್ತಾಳೆ–'ಆನೆ ದಂತದಲಿ ನಿರ್ಮಿಸಿದ ದಿವ್ಯ ಪಲ್ಲಕ್ಕಿಯಲ್ಲಿ ರಾಮ ಲಕ್ಷ್ಮಣರು ಕುಳಿತು ಆಕಾಶಮಾರ್ಗದಲ್ಲಿ ಬರುತ್ತಾರೆ. ನಂತರ ದಿವ್ಯ ವಿಮಾನವೊಂದರಲ್ಲಿ ಸೀತೆಯನ್ನು ಕರೆದುಕೊಂಡು ಆಕಾಶಮಾರ್ಗದಲ್ಲಿ ಹೋಗುತ್ತಾರೆ'.

ತ್ರಿಜಟೆಯ ಈ ಕನಸಿನಂತೆಯೇ ಸೀತೆಗೆ ಒಳ್ಳೆಯ ದಿನಗಳು ಹತ್ತಿರವಾಗುತ್ತಾ ರಾವಣನಿಗೆ ದುರ್ದಿನಗಳು ಆವರಿಸುತ್ತಾ ಹೋಗುತ್ತದೆ. ವಿಭೀಷಣನು ಹೇಳಿದ ಧರ್ಮ ಮಾರ್ಗವನ್ನು ರಾವಣ ಒಪ್ಪಲಿಲ್ಲ. ಆ ಕಾರಣಕ್ಕೆ ವಿಭೀಷಣ ಲಂಕೆಯನ್ನು ತೊರೆದು ಧರ್ಮಪರವಾಗಿ ನಿಲ್ಲಲ್ಲು ರಾಮನೆಡೆಗೆ ಬರುತ್ತಾನೆ. ಈ ಕಥೆಯನ್ನು ನಿರೂಪಿಸುತ್ತಿದ್ದ ಅನಿಲೆಗೆ ಕೌಸಲ್ಯಾದೇವಿ ಕೇಳುವ ಪ್ರಶ್ನೆ–ನಿಮ್ಮಪ್ಪಾಜಿ ಶತ್ರುವನ್ನು ಸೇರಲು ಹೊರಟಾಗ ತನ್ನ ಹೆಂಡತಿ ಮಕ್ಕಳನ್ನು ಹಿಂಸಿಸಬಹುದು ಎಂಬ ಶಂಕೆ ನಿನ್ನ ತಂದೆಗೆ ಮೂಡಲಿಲ್ಲವೆ? ಎಂದಾಗ ಅನಿಲೆ ಕೊಡುವ ಉತ್ತರ 'ನನ್ನ ಅಮ್ಮ ಮನೆ ನಂಟು ಆ ಕಾರಣ ನಮ್ಮ ದೊಡ್ಡಪ್ಪ ತುಂಬ ಗೌರವದಿಂದ ಅಕ್ಕರೆಯಿಂದ ಕಾಣುವರು. ಅಷ್ಟೇ ಅಲ್ಲ ದೊಡ್ಡಪ್ಪ ನನಗೆ ಅಪ್ಪನಿಗೂ ಮಿಗಿಲಾಗಿ ಅಪ್ಪಾಜಿಯಾಗಿದ್ದರು' ಎಂದು ರಾವಣನ ವಿಭಿನ್ನ ವ್ಯಕ್ತಿತ್ವವನ್ನು ಪರಿಚಯಿಸುವಳು.

ಅನಿಲೆ ಇತ್ತ ಸೀತೆ ಸೆರೆಯಲ್ಲಿದ್ದ ದಿನಗಳನ್ನು ವಿವರಿಸುತ್ತಿದ್ದರೆ ಅತ್ತ ಅಂಗದ ಶತ್ರುಘ್ನನ ಕೋರಿಕೆಯಂತೆ ವಿಜಯಯಾತ್ರೆ, ಸಂಧಾನದ ಪ್ರಯತ್ನ, ಯುದ್ಧ, ಗೆಲುವು ಈ ಸಂಗತಿಗಳನ್ನು ವರ್ಣಿಸುತ್ತಾನೆ. ಸಾಗರವನ್ನು ದಾಟಲು ನಳ ಸೇತುವೆ ನಿರ್ಮಿಸುವುದೆಂದು ನಿಶ್ಚಯಿಸಿದರು. ಕಾಡಿನಿಂದ ಬೆಂಡುಮರ, ಒಣಮರಗಳನ್ನು ಮೂರು ಸಾವಿರ ಲೆಕ್ಕದಲ್ಲಿ ತಂದರೆ ಹಂಬುಗಳನ್ನು ಸಾವಿರ ಕೋಟಿ ಲೆಕ್ಕದಲ್ಲಿ ತಂದರು –

"ನಳಮಾವನಪ್ಪಣೆಯಂತೆ
ಆಳುದ್ದ ನೆಟ್ಟ ಮೇಟಿಯ ಕಂಬಗಳ ಬುಡಕೆ
ಕಟ್ಟಿ, ನೀರಲಿ ತೇಲಬಿಟ್ಟು ಮರದಿಂದ ಮರ,
ಮರದಿಂದ ಮರ, ಇಂತು ಗಟ್ಟಿ ಮರಗಳ ಸಾಲ
ಸೇತುವೆಯ ಮಾಡಿದೆವು, ಆ ತೀರವನು ಮುಟ್ಟಿ
ಕಟ್ಟಿ ಕಡೆಯದು ಮರನ ಮೊದಲ ಮರಗಳ ತೆರವೆ
ಆಳುದ್ದ ನೆಟ್ಟ ಮೇಟಿಯ ಕಂಬಗಳ ಬುಡಕೆ
ಕಟ್ಟಿದೆವು. ಇಂತು ಸೇತುವೆ ಆಯ್ತು"[31]

ಈ ರೀತಿ ಸೇತುವೆ ನಿರ್ಮಾಣದ ಕತೆಯನ್ನು ಅಂಗದ ಹೇಳಿದರೆ ಹನುಮ ಕತೆ ಹೇಳುವಾಗ ಸೇತುವೆಗೆ ಬದಲು ನಾಲ್ಕು ನೂರು ಸಂಘಾಟಗಳನ್ನು ನಿರ್ಮಿಸಿ ಆ ಮೂಲಕ ಲಂಕೆಯ ಪ್ರವೇಶ ಮಾಡಿದೆವು ಎನ್ನುತ್ತಾನೆ. ಇವರಿಬ್ಬರ ನಿರೂಪಣೆಯಲ್ಲಿ ಮುಖ್ಯವಾಗಿ ಈ ವ್ಯತ್ಯಾಸ ಕಂಡುಬರುತ್ತದೆ.

ಅಂಗದ ಸಂಧಾನಕ್ಕೆಂದು ಹೋದ ಪ್ರಸಂಗ ಸ್ವಾರಸ್ಯವಾಗಿ ಮೂಡಿಬಂದಿದೆ. ಅಂಗದ ಅರಮನೆಗೆ ಹೋಗಿ ರಾವಣನೆದುರು ಕೈ ಮುಗಿದು ನಿಂತಾಗ 'ನೀನು ನಮ್ಮ ಹಿರಿಕೆಳೆ ವಾಲಿ ಅರಸರ ಕುಮಾರನೇ?' ಎಂಬ ರಾವಣನ ಪ್ರಶ್ನೆಗೆ "ಹೌದು ನಾನು ವಾನರ ಹಿರಿಯ ದೊರೆ ವಾಲಿಯವರ ಕುಮಾರ. ನಮ್ಮಪ್ಪ ಒಮ್ಮೆ ನಿಮ್ಮನ್ನು ಕಾದಿ ಸೋಲಿಸಿದರೆಂದಷ್ಟೇ ನಾನು ಕೇಳಿದ್ದೆ. ನೀವವರ ಕೆಳೆ ಎಂಬುದನ್ನು ಕೇಳಿಲ್ಲ" ಎಂದು ಹೇಳಿ ತಾನು ಬಂದ ಕಾರಣವನ್ನು ಶ್ರೀರಾಮನ ಸಂದೇಶ ಸೂಚನೆಯನ್ನೂ ಹೇಳಿದಾಗ 'ಅವರ ಸೂಚನೆ ನಮಗೆ ಯುಕ್ತವೆನಿಸಲಿಲ್ಲ. ಆಗ' ಎಂದು ರಾವಣ ಛೇಡಿಸಿದಾಗ ಕೋಪಗೊಂಡ ಅಂಗದ "ಆಗ, ಪ್ರಭು ನಿಮ್ಮೊಡಲು ರಾಮಚಂದ್ರರ ಚಾಪ ಕಳುಹಿಸುವ ಸಾಲ ಶರಗಳ ರುಚಿಯನರಿಯುವುದು. ನಮ್ಮಪ್ಪನವರಿಂದ ಅಂದು ಸೋಲುಂಡಂತೆ ಇಂದು ಇವರಿಂದ ಸೋಲನು ಉಂಡು ತಣಿಯುವಿರಿ. ಅಂದು ಉಸಿರುಳಿಸಿಕೊಂಡೋಡಿದಿರಿ. ಈ ಬಾರಿ ಉಸಿರಳಿದು ಸಾಯುವಿರಿ"ಎನ್ನುತ್ತಾನೆ.

ಸಂಧಾನ ಮುರಿದು ಯುದ್ಧವೇ ನಿರ್ಧಾರವಾಗುತ್ತದೆ. ಮೊಟ್ಟಮೊದಲಿಗೆ ರಾಮನ ಸೈನ್ಯವನ್ನು ಎದುರಿಸಲು ರಾವಣನ ಕಡೆಯ ಪರಾಕ್ರಮಿಗಳಾದ ದುರ್ಧರ್ಷ, ನಿಕುಂಭ, ಸುಷೇಣ ಆ

ಬಳಿಕ ಧೂಮ್ರಾಕ್ಷ, ವಜ್ರದಂಷ್ಟ್ರ, ಅಕಂಪನರು ಬಂದು ಅಳಿಯುತ್ತಾರೆ. ತದನಂತರ ಮುಖ್ಯ ಸೇನಾನಿ ಪ್ರಹಸ್ತ, ದೇವಾಂತಕ ತ್ರಿಶಿರಸ, ನರಾಂತಕ, ಮಹೋದರ, ಮಹಾಪಾರ್ಶ್ವ, ಅತಿಕಾಯ, ಕುಂಭ, ಯೂಪಾಕ್ಷ, ಪ್ರಜಂಘ, ಮಕರಾಕ್ಷ, ಕಂಪನರು ಹೀಗೆ ಯುದ್ಧ ಮಾಡಲು ಬಂದ ಪರಾಕ್ರಮಿಗಳ ಪಟ್ಟಿ ಬೆಳೆಯುತ್ತಲೆ ಹೋಗಿ ಕೊನೆಗೆಲ್ಲರೂ ರಾಮ ಸೈನ್ಯದಿಂದ ಅವನತಿಯನ್ನು ಕಾಣುತ್ತಾರೆ. ರಾವಣನ ಮಗ ಮೇಘನಾದ ಚಾಪ ವಿದ್ಯೆಯಲ್ಲಿ ಜಾಣ. ಒಂದು ತೇರಿನಲ್ಲಿ ಜೇಕೊರ್ಳವೆಯನಿಟ್ಟು ಕೊಂಡು ಎದುರಾಳಿಗಳ ಮೇಲೆ ಅಂಟಿನ ಮಳೆ ಸುರಿಸುತ್ತಾನೆ. ಅಂಟು ಬಿದ್ದ ಕೆಲವೇ ಕ್ಷಣದಲ್ಲಿ ಬೆರಳುಗಳು ಬಿಡದಂತೆ, ಕಣ್ಣೆವೆ ತೆರೆಯದಂತೆ ಕಟ್ಟುವುದು. ಲಕ್ಷ್ಮಣನನ್ನೂ ಈ ಅಂಟಿನಲ್ಲಿ ಕಟ್ಟಿ ನಿಲ್ಲಿಸುತ್ತಾನೆ. ಆದ್ದರಿಂದ ಅವನನ್ನು ಯುದ್ಧ ಭೂಮಿಯಿಂದ ಹೊತ್ತು ಹಿಂದಕ್ಕೆ ತರುತ್ತಾರೆ. ಮೇಘನಾದನಂತೂ ಯುದ್ಧವನ್ನು ಗೆದ್ದೆನೆಂದೇ ಹಿಂತಿರುಗುತ್ತಾನೆ. ಇತ್ತ ವೈದ್ಯ ಸುಷೇಣ ಯಾವುದೋ ಸೊಪ್ಪನ್ನು ತಂದು ಲೇಹ್ಯಮಾಡಿ ಹಚ್ಚಿದ ನಂತರ ಅಂಟಿನ ನಿವಾರಣೆಯಾಗುತ್ತದೆ. ಎದುರಾಳಿಗಳು ಬಿಲ್ಲು ಬಳಸಿದರೆ ವಾನರ ಸೈನ್ಯ ಕೋಲು ಕಲ್ಲುಗಳನ್ನು ಬಳಸಿ ಎದುರಾಳಿಯ ಮೇಲೆ ಗೆರಿಲ್ಲಾ ಯುದ್ಧವನ್ನೇ ಸಾರುತ್ತಾರೆ. ರಾವಣನ ಕಡೆಯ ಸೈನ್ಯ ರಥಧಾರಿಗಳಾಗಿ ಯುದ್ಧ ಮಾಡಿದರೆ, ರಾಮ ಮತ್ತವನ ಸೈನ್ಯ ನೆಲದ ಮೇಲೆ ನಿಂತೇ ಯುದ್ಧಮಾಡುತ್ತದೆ. ಕೊನೆಗೆ ಹನುಮನು ಶ್ರೀರಾಮನನ್ನು ತನ್ನ ಭುಜಗಳ ಮೇಲೆ ಕುಳಿತು ಬಾಣ ಪ್ರಯೋಗಿಸುವಂತೆ ಹೇಳುತ್ತಾನೆ. ಹೀಗೆ ಯುದ್ಧ ಸಾಗಿರಬೇಕಾದರೆ ರಾವಣನ ರಥದ ಕುದುರೆಗಳು ಮಡಿದು ಸಾರಥಿ ಸತ್ತಾಗ ರಾಮ ರಾವಣನ ಮೇಲೆ ಬಾಣ ಪ್ರಯೋಗಿಸದೆ ತನ್ನ ಔದಾರ್ಯದಿಂದ ರಾವಣನನ್ನು ಅರಮನೆಗೆ ಹಿಂತಿರುಗಿ ದಣಿವಾರಿಸಿಕೊಂಡು ಬೇರೆ ರಥವೇರಿ ಸಂಗ್ರಾಮಕ್ಕೆ ಬನ್ನಿರೆಂದು ಹೇಳಿ ಕಳುಹಿಸುತ್ತಾನೆ. ನಿರ್ದಯವಾಗಿರಬೇಕಾದ ಸಂದರ್ಭದಲ್ಲೂ ರಾಮ ಮಾನವೀಯತೆಯ ಮೃದುತ್ವವನ್ನು ಎತ್ತಿ ಹಿಡಿಯುತ್ತಾನೆ.

ಸ್ವಲ್ಪ ಸಮಯದ ನಂತರ ಬಂದ ರಾವಣನ ತಮ್ಮ ಕುಂಭಕರ್ಣನ ಆಕಾರವನ್ನು ನೋಡಿಯೇ ವಾನರಸೇನೆ ಹಿಮ್ಮೆಟ್ಟಿ ಓಡುತ್ತದೆ. ಅಂಗದ ಅವರನ್ನೆಲ್ಲ ಹುರಿದುಂಬಿಸಿ ಯುದ್ಧ ಮಾಡುವಂತೆ ಪ್ರಚೋದಿಸುತ್ತಾನೆ. ಕುಂಭಕರ್ಣನ ಬಿಗಿಮುಷ್ಟಿಗೆ ಸಿಕ್ಕಿ ಹನುಮಂತ, ನೀಲ, ಗಂಧಮಾದನ, ಋಷಭ, ಶರಭ, ಶೂರಗವಾಕ್ಷ, ಕೊನೆಗೆ ಅಂಗದ, ಸುಗ್ರೀವ ಎಲ್ಲರೂ ತತ್ತರಿಸಿ ಎಚ್ಚರತಪ್ಪಿಬೀಳುತ್ತಾರೆ. ಲಕ್ಷ್ಮಣನು ಕುಂಭಕರ್ಣನನ್ನು ಸದೆಬಡಿಯಲು ಸಮರ್ಥನಾಗುವುದಿಲ್ಲ. ಆದರೆ ರಾಮನ ಕೂರಂಬುಗಳ ಮುಂದೆ ಕುಂಭಕರ್ಣನ ಆಟ ನಡೆಯದೆ ಆಹುತಿಯಾಗುತ್ತಾನೆ. ರಾವಣನ

ಮಗ ತ್ರಿಶರ, ದೇವಾಂತಕ, ಮಹೋದರ, ಮಹಾಪಾರ್ಶ್ವರೊಡನೆ ಯುದ್ಧಕ್ಕೆ ಬರುತ್ತಾನೆ. ಹನುಮಂತ ತ್ರಿಶಿರ ಮತ್ತು ದೇವಾಂತಿಕನನ್ನೂ ನೀಲಪ್ರಭು, ಋಷಭರು ಕ್ರಮವಾಗಿ ಮಹೋದರ, ಮಹಾಪಾರ್ಶ್ವರನ್ನು ಸದೆಬಡಿಯುತ್ತಾರೆ. ರಾವಣನ ಮತ್ತೊಬ್ಬ ಮಗ ಅತಿಕಾಯನನ್ನು ಲಕ್ಷ್ಮಣ ಮುಗಿಸುತ್ತಾನೆ.

ಪರಾಕ್ರಮಿಯಾದ ಇಂದ್ರಜಿತ್ ಮತ್ತೆ ದಂಡೆತ್ತಿ ಬಂದು ವಿಷದ ಬಾಣಗಳಿಂದ ರಾಮಲಕ್ಷ್ಮಣರಿಬ್ಬರೂ ಮೂರ್ಛೆ ಹೋಗುವಂತೆ ಮಾಡುತ್ತಾನೆ. ವಾನರ ಸೇನೆಯಲ್ಲಿ ಹನುಮಂತ ಮತ್ತು ಅವನ ಜೊತೆಗೆ ವಿಭೀಷಣನನ್ನು ಬಿಟ್ಟು ಮತ್ತೆಲ್ಲರೂ ಮೂರ್ಛೆ ಹೋಗುತ್ತಾರೆ. ಮಾರನೆಯ ದಿನಕ್ಕೆ ಎಚ್ಚರಗೊಳ್ಳುತ್ತಾರೆ. ಇಂದ್ರಜಿತ್ ಸೀತಾದೇವಿಯರನ್ನು ಹಿಡಿದು ತಂದು ಕೊಂದನು ಎಂಬ ಸುದ್ದಿಹಬ್ಬಿ ರಾಮ ಹತಾಶನಾಗುತ್ತಾನೆ. ವಿಭೀಷಣ ಬಂದು ಅದೆಲ್ಲ ಸುಳ್ಳು ಕಂಗೆಡಬೇಡಿ. ಆದರೆ ನಿಕುಂಬಿಳಾ ವನದಲ್ಲಿ ಹೋಮ ನಡೆಸುತ್ತಿರುವ ಇಂದ್ರಜಿತ್‌ನನ್ನು ಈಗ ತಡೆಯದೆ ಹೋದರೆ ಅವನ ಮೂರು ವಿದ್ಯೆಗಳು ನೂರ್ಮಡಿಯಾಗಿ ಅವನನ್ನು ಗೆಲ್ಲುವುದು ಅಸಾಧ್ಯವಾಗುತ್ತದೆ. ಅವನ ಯಜ್ಞಭಂಗವಾಗಬೇಕಿದೆ ಎಂದನು. ವಿಭೀಷಣನೊಡನೆ ಲಕ್ಷ್ಮಣ ನಿಂಕುಂಬಳವನಕ್ಕೆ ಹೋಗಿ ಇಂದ್ರಜೀತ್‌ನನ್ನು ಸಂಹರಿಸುತ್ತಾನೆ. ಮೂಲದಲ್ಲಿನ ಈ ಭಾಗವನ್ನು ಯಥಾವತ್ತಾಗಿ ಬಳಸಿಕೊಂಡಿದ್ದಾರೆ. ಮಗನ ಮರಣದಿಂದ ಖತಿಗೊಂಡ ರಾವಣ ತಾನೇ ಯುದ್ಧಕ್ಕೆ ಬರುತ್ತಾನೆ. ರಾವಣನ ಬಾಣದಿಂದ ಲಕ್ಷ್ಮಣ ಮೂರ್ಛೆಗೊಳ್ಳುತ್ತಾನೆ. ರಾಮ ತನ್ನ ತಮ್ಮ ಸತ್ತಿರುವನೆಂದೇ ಭ್ರಮಿಸಿ ದುಃಖಸಾಗರದಲ್ಲಿ ಮುಳುಗುತ್ತಾನೆ. ವೈದ್ಯ ಸುಷೇಣ 'ಇಂಥ ಕಡೆಹೋಗಿ ಒಂದು ವಿಧವಾದ ಮೂಲಿಕೆ ತರಬೇಕೆಂದು' ಹನುಮನಿಗೆ ಹೇಳಿದರೆ ಆತ ಮೂಲಿಕೆ ಗುರುತಿಸಲಾಗದೆ ಒಂದಷ್ಟಗಲ ಭೂಮಿಯನ್ನು ಬಗೆದು ತರುತ್ತಾನೆ. ಮೂಲದಲ್ಲಿ 'ಸಂಜೀವಿನಿ ಪರ್ವತವನ್ನೇ' ಹೊತ್ತು ತರುತ್ತಾನೆ. ಲಕ್ಷ್ಮಣ ಎಚ್ಚರಗೊಂಡ ನಂತರ ರಾಮ ಯುದ್ಧದಲ್ಲಿ ರಾವಣನನ್ನು ಸಂಹರಿಸುತ್ತಾನೆ. ಇಲ್ಲಿಗೆ ಅಂಗದನ ಕಥಾನಿರೂಪಣೆ ಮುಗಿಯುತ್ತದೆ.

ಭೂತಕಾಲದ ಕಥೆ ವರ್ತಮಾನಕ್ಕೆ ತಿರುಗುತ್ತದೆ. ವಾನರರಾಣಿಯರು ನಗರ ನೋಡಬೇಕೆನ್ನುವ ಬಯಕೆಯನ್ನು ಸೀತೆಯ ಮುಂದಿಡುತ್ತಾರೆ. ಸೀತೆಯೊಡನೆ ರಥದಲ್ಲಿ ಹೋದ ತಾರೆ–ರುಮೆಯರಿಗೆ ಅಯೋಧ್ಯನಗರದ ವೈಭವವು ಕಣ್ತುಂಬುತ್ತದೆ. ಅಂತೆಯೇ ಪ್ರಜೆಗಳು ಮಾಡುವ

ರಾಮನ ಸ್ತುತಿ-ಗುಣಗಾನಗಳು ಕಿವಿಗಳ ತುಂಬುತ್ತವೆ. ಮೂಲದಲ್ಲಿ, ಯುವರಾಜಪಟ್ಟ ಕಟ್ಟುವ ಸಂದರ್ಭದಲ್ಲಿ ದಶರಥ ರಾಮನ ಕುರಿತು ಹೊಗಳುವ ಮಾತುಗಳು ಇಲ್ಲಿ ನೆನಪಾಗುತ್ತವೆ.

ರಾಮಲಕ್ಷ್ಮಣನನ್ನು ಕುರಿತು 'ತಮ್ಮಾಜಿ ನಾಳೆ ನಾ ದೊರೆಯಾಗುವೆ ನೀನೆ ಯುವರಾಜ ಪದವಿಯನ್ನು ಸ್ವೀಕರಿಸಬೇಕು' ಎಂದರೆ ಲಕ್ಷ್ಮಣ ಒಪ್ಪದೇ ಆ ಪದವಿ ಭರತನಿಗೆ ಇರಲಿ ಎಂದು ದೃಢವಾಗಿ ಹಠವಾದಿಯಂತೆ ಹೇಳುತ್ತಾನೆ. ಅವನ ತಾಯಿ ಸುಮಿತ್ರೆಯಂತೂ "ನಿನ್ನನುಜನೆಂಬ ಪದ ಇಂದ್ರಪದವಿಗೆ ಮಿಗಿಲು, ಮಗ ಇದನು ತಿಳಿದಿಹನು. ಇದು ನನಗೆ ಸಂತಸ" ವೆನ್ನುತ್ತಾಳೆ.

ಹದಿನಾಲ್ಕು ವರ್ಷಗಳ ನಂತರ ಅಕ್ಕ-ತಂಗಿಯರಾದ ಸೀತಾ-ಊರ್ಮಿಳೆಯರು ತಮ್ಮ ಮನದಿಂಗಿತವನ್ನು ತೋಡಿಕೊಳ್ಳುವ ಸಂದರ್ಭದಲ್ಲಿ ಸೀತ, ಲಕ್ಷ್ಮಣನ ಗುಣಗಾನ ಮಾಡುತ್ತಾಳೆ. ಅಪರಂಜಿಯಂತಹ ಶೀಲವಂತನ ಮೇಲೆ ಸುಳ್ಳಾಡಿ ಹಳಿದನೆ ಎಂದು ಪರಿತಪಿಸುತ್ತಾಳೆ. ರಾಮ ತನ್ನ ಕುರಿತು ಆಡಿದ ಮಾತುಗಳನ್ನು ಕೇಳಿ ಅಗ್ನಿಪ್ರವೇಶಕ್ಕೆ ಸಿದ್ಧಳಾದ ಸಂದರ್ಭದಲ್ಲಿ ಲಕ್ಷ್ಮಣನ ಮನದ ಭಾವವನ್ನು ಅವನ ನೋಟದ ಇಂಗಿತವನ್ನು ವಿವರಿಸುತ್ತಾಳೆ. ಊರ್ಮಿಳೆಯೂ ವನವಾಸದವಧಿಯ ಘಟನೆಗಳೊಂದಂದನ್ನು ಕೇಳಿ ತಿಳಿದು ತನ್ನಂತಃಪುರಕ್ಕೆ ಹಿಂದಿರುಗುತ್ತಾಳೆ.

ಅಂತಃಪುರದಲ್ಲಿ ಊರ್ಮಿಳೆಗೆ ಲಕ್ಷ್ಮಣನು ವನವಾಸದ ದಿನಗಳನ್ನು ಕುರಿತು ಹೇಳುತ್ತಾ ಚಿತ್ರಕೂಟ, ಪಂಪಾಸರೋವರದ ಬೆಡಗನ್ನು ಬಣ್ಣಿಸುತ್ತಾನೆ. ಅಷ್ಟೇ ಅಲ್ಲ ಹದಿಮೂರು ವರ್ಷಗಳಲ್ಲಿ ಒಂದೊಂದು ವರ್ಷದಲ್ಲೂ ಎಲ್ಲ ಋತುಗಳಲ್ಲಿ ಧರಣಿ ಧರಿಸುವ ಎಲ್ಲ ವೇಷಗಳ ಸಂಪೂರ್ಣ ಪಾಠವಾಯಿತು. ಬಾಳನ್ನು ಅರಿಯಬಯಸುವವರು ಕೆಲಕಾಲ ವನವಾಸ ನಡೆಸುವುದು ಒಳ್ಳೆಯದು. ಏಕೆಂದರೆ 'ಜಡ ನಾವು ತಿಳಿದಂತೆ ಜಡವಲ್ಲ; ಅದರ ಇನ್ನೊಂದು ಮುಖ ಜೀವವೆ. ವಿಶ್ವಚೇತನ ಒಮ್ಮೆ ಮುಖವನೀಕಡೆ ತೋರಿ ಜೀವವಾಗೆಸೆಯುವುದು. ಇಂತೆ ಗ್ರಹ ತಾರೆಗಳು ಜೀವಂತ ವಸ್ತುಗಳೇ. ಆ ವೇಳೆ ನಾನೂ ಸಹ ಋಷಿಯಾದೆನೆಂದೆ ನಾ ಬಗೆದಿಹೆನು"[22] ಎನ್ನುವಾಗ ಕುವೆಂಪು ಅವರ 'ಪಕ್ಷಿಕಾಶಿ' ಮನದಲ್ಲಿ ಸುಳಿಯುತ್ತದೆ.

ಶ್ರೀರಾಮ ಭರತನಿಗೆ ಯುವರಾಜ ಪಟ್ಟ ಕಟ್ಟುವುದು ಕೈಕೆಯಿಗೇನೋ ಸಂತೋಷವೇ. ಆದರೆ ಕಿರಿಯಣ್ಣನಿಗೆ ತಪ್ಪಿಸಿ ತನಗೆ ಪಟ್ಟಕಟ್ಟುವುದನ್ನು ಭರತ ಒಪ್ಪುವನೇ ಎನ್ನುವುದೇ ಅವಳ ಸಂದೇಹ. ಮಂಥರೆ ಇಷ್ಟಕ್ಕೆಲ್ಲ ಕಾರಣವಾದ ತಾನು ಕೈಕೆಯಿಗೆ ಹೇಳಿಕೊಟ್ಟ ಮಾತುಗಳನ್ನು ಹಿಂದಿನ ಘಟನೆಗಳನ್ನೂ ನೆನಪು ಮಾಡಿಕೊಂಡು "ಹಿರಿಯರಸಿ, ಅವಳಮಗ, ಕೊಡುವವರು; ತನ್ನೊಡತಿ ಇವರ ಮಗ ಪಡೆವವರು; ಹೀನಾಯದಚ್ಚು ಇದು. ಆದರೇನು ಮಾಡುವುದು ತನ್ನೊಡತಿಯೇ ಈ ಹದನ ಒಪ್ಪಿದ ಮೇಲೆಂದು"[10] ಜೀವಿಸೆಲೆಯನು ಮೇಯ್ದು ಮೆಲುಕು ಹಾಕುವ ಒಂದು ಆಡು ಎಂಬಂಥ ತನ್ನೊಳಗಿನದು ಕೃಪೆಯನು ಮರಮರಳಿ ನುರಿನುರಿಸಿ ಉಂಡುಂಡು ನೊಂದಳು.

ವಸಿಷ್ಠಾದಿಗಳೆಲ್ಲ ಸೇರಿ ರಾಮನಿಗೆ ಪಟ್ಟಕಟ್ಟುತ್ತಾರೆ. ನಂತರ ವಸಿಷ್ಠರು ರಾಜಧರ್ಮವನ್ನು ಕುರಿತು ಬೋಧಿಸುವಾಗ ಇಕ್ಷ್ವಾಕು ವಂಶದ ಚರಿತ್ರೆಯನ್ನು ನಿರೂಪಿಸುತ್ತಾರೆ. ನಂತರ ಹತ್ತು ದಿನಗಳವರೆಗೆ ಕೋಸಲದ ನಾಡಿನ ದೂರದ ನೂರಾರು ಊರುಗಳಿಂದ ಹಿರಿಯ ಗ್ರಾಮಸ್ಥರು ಬಂದು ತಮ್ಮ ಹೊಸ ದೊರೆಯ ಕಂಡು ಕಾಣಿಕೆ ಸಲ್ಲಿಸಿ ಸಂತಸ ಪಡುತ್ತಾರೆ. ಹತ್ತು ದಿನ ಕಳೆದ ಬಳಿಕ ವಾನರ ಪರಿವಾರ ಮತ್ತು ವಿಭೀಷಣ ತಮ್ಮ ತಮ್ಮ ನಾಡಿಗೆ ತೆರಳುತ್ತಾರೆ. ರಾಮನ ಸೇವೆಗೆಂದೇ ಸುಗ್ರೀವ ಹನುಮಂತನನ್ನು ಅಯೋಧ್ಯೆಯಲ್ಲಿ ನಿಲ್ಲುವಂತೆ ಹೇಳಿ ಹೊರಡುತ್ತಾನೆ. ಶ್ರೀರಾಮ ಪಟ್ಟಾಭಿಷೇಕ ಮಂಗಳವಾಗಿ ಮುಗಿಯುತ್ತದೆ.

ಮಾಸ್ತಿಯವರು ವಾಸ್ತವತಾವಾದದ ಜಾಡಿನಲ್ಲಿ 'ಶ್ರೀರಾಮಪಟ್ಟಾಭಿಷೇಕ' ರಚಿಸಿದ್ದಾರೆ. ಅದರಲ್ಲೂ ಮೂರು ದಿನಗಳಲ್ಲಿ ಮುಖ್ಯವಾಗಿ ನಡೆಯುವ ಕಥೆಯಲ್ಲಿ ಹದಿನಾಲ್ಕು ವರ್ಷಗಳ ಕಥೆಯನ್ನು ಬೇರೆ ಬೇರೆ ಪಾತ್ರಗಳ ಮೂಲಕ ಹೇಳಿಸಿದ್ದಾರೆ. 'ಈ ನಿರೂಪಣೆಯ ವಿಧಾನದಿಂದ ಕವಿ ಏನು ಸಾಧಿಸಿದ್ದಾರೆಂದು ಯಾರಾದರೂ ಕೇಳಬಹುದು. ಕವಿ ಇದರಿಂದ ಒಂದು ತಾಂತ್ರಿಕ ಸೌಲಭ್ಯವನ್ನು ಪಡೆದಿದ್ದಾರೆ. ಫಲವಾಗಿ ನಿರೂಪಣೆಯಲ್ಲಿ ಏಕತಾನದ ಬೇಸರಿಕೆಗೆ ಆಸ್ಪದವಿಲ್ಲ. ಅಲ್ಲದೆ ಇನ್ನೊಬ್ಬರಿಂದ ಕಥೆ ಹೇಳಿಸುವಾಗ ಕವಿಗೆ ಅನೇಕ ಸ್ವಾತಂತ್ರ್ಯಗಳೂ ಲಭಿಸುತ್ತವೆಂಬುದನ್ನು ಗಮನಿಸಬಹುದು. ತಾನೇ ನಿರೂಪಕನಾದಾಗ ತೋರುವ ಬಂಧನಗಳಿಂದ ಅವನು ಬಿಡುಗಡೆ ಪಡೆಯುತ್ತಾನೆ. ಪ್ರತಿಯೊಂದು ಪಾತ್ರವೂ ತಾವು ನಡೆದುಬಂದ ದಾರಿಯನ್ನು; ಘಟನೆಗಳನ್ನು ಸಿಂಹಾವಲೋಕನ ಕ್ರಮದಲ್ಲಿ ನಿರೂಪಿಸುತ್ತಾ ಹೋಗುತ್ತದೆ. ತನ್ಮೂಲಕ ಮಾಸ್ತಿಯವರು ತಮ್ಮ ಕಾಲಕ್ಕೂ

ಸರಿಹೊಂದುವ ರಾಮಾಯಣದ ಅಂಶಗಳನ್ನು ಗುರುತಿಸಲು ಪ್ರಯತ್ನಿಸಿದ್ದಾರೆ. ಚೂಪಾದ ವಿಮರ್ಶಕ ಬುದ್ಧಿಯಿಂದ ರಾಮಾಯಣದ ಬಗ್ಗೆ ಕೇಳಬಹುದಾದ ಪ್ರಶ್ನೆಗಳನ್ನೆಲ್ಲ ಅವರು ಕೇಳಿದ್ದಾರೆ. ಹಾಗೆಂದ ಮಾತ್ರಕ್ಕೆ ಮಾಸ್ತಿಯವರ ಕಾವ್ಯ ಅಪವಾದಗಳಿಂದ ಮುಕ್ತವಾಗಿದೆ ಎಂದಲ್ಲ. ಪಿ.ವಿ. ಜೋಶಿಯವರ ಪ್ರಕಾರ 'ಒಂದು ಕಾವ್ಯದಲ್ಲಿ ರಸಸಿದ್ಧಿಯಾಗಬೇಕಾದರೆ ಓದುಗನ ಸಂಶಯ ವೃತ್ತಿ ಕವಿ ಪ್ರತಿಭೆಯ ಸಮ್ಮೋಹನದಿಂದ ಸುಪ್ತವಾಗಬೇಕು. ಅಲ್ಲಿ "ಅದೊ ವಾ ಇದಂ ವಾ" ಎಂಬ ಪ್ರಶ್ನೆಗೆ ಆಸ್ಪದವೇ ಇರಬಾರದು. ರಾಮಚಂದ್ರನು ದೇವರೋ ಮನುಷ್ಯನೋ ಎಂಬ ಪ್ರಶ್ನೆಯನ್ನು ಎತ್ತಿಬಿಟ್ಟರೆ ಇಲ್ಲಿ ಎಂತಹ ಸಮ್ಮೋಹಕ್ಕೂ ಆಸ್ಪದವಿಲ್ಲ ಎನ್ನುತ್ತಾರೆ ಮತ್ತು ನಿಶ್ಯಂಕವಾದ ರಸಾಸ್ವಾದನೆಗೆ ಎರಡನೆಯ ವಿಘ್ನ ಇಲ್ಲಿಯ ಕಥಾ ನಿರೂಪಣೆಯ ಕೃತಕತೆ ಎಂದೂ ಹೇಳುತ್ತಾರೆ. ಆದರೆ 'ಕಾವ್ಯ ಮುಖ್ಯವಾಗಿ ಮಾಡಬೇಕಾದದ್ದು ಬದುಕಿನ ಶೋಧನೆಯನ್ನೇ ಹೊರತು ಪವಾಡಗಳ ನಿರೂಪಣೆಯನ್ನಲ್ಲ. 'ಶ್ರೀರಾಮಪಟ್ಟಾಭಿಷೇಕ' ಕಾವ್ಯದಲ್ಲಿ ಮಾಸ್ತಿಯವರ ಸತ್ಯಶೋಧಕ ಮನೋಧರ್ಮ ನಿಚ್ಚಳವಾಗಿ ಮೂಡಿದೆ.

ಮಾಸ್ತಿಯವರ ಶ್ರೀರಾಮಪಟ್ಟಾಭಿಷೇಕ ಕಾವ್ಯವು ವಾಲ್ಮೀಕಿ ರಾಮಾಯಣವನ್ನು ತನ್ನ ಮೂಲ ಆಕರವಾಗಿರಿಸಿಕೊಂಡಿದೆ. ಮಾಸ್ತಿಯವರು ವಾಸ್ತವತಾವಾದಿ ಲೇಖಕರಾದುದರಿಂದ ಮೂಲದಲ್ಲಿ ಬರುವ ಪವಾಡಸದೃಶವೂ ಅತಿವಾಸ್ತವವೂ ಆದ ಘಟನೆಗಳನ್ನು ನಿವಾರಿಸಿ ಮೂಲ ರಾಮಾಯಣವು ವಾಸ್ತವವಾಗಿ ಹೀಗೆ ನಡೆದಿರಬೇಕು ಎಂದು ಕಲ್ಪಿಸಿ ತಮ್ಮ ಕಾವ್ಯವನ್ನು ರಚಿಸಿದ್ದಾರೆ. ಹೀಗೆ ರಚಿಸಲು ರಾಮಾಯಣದ ಮೂಲರೂಪವನ್ನು ಶೋಧಿಸಬೇಕೆನ್ನುವ ಅವರ ಇಚ್ಛೆ ಕಾರಣವಾಗಿರುವಂತೆಯೇ, ಆಧುನಿಕ ವೈಜ್ಞಾನಿಕ ಬುದ್ಧಿಗೂ ರಾಮಾಯಣವನ್ನು ಸಮ್ಮತಗೊಳಿಸಬೇಕೆಂಬ ಅಭಿಲಾಷೆ ಕಾರಣವಾಗಿದೆ. ಹೀಗಾಗಿ ಮಾಸ್ತಿಯವರು ತಮ್ಮ ಕಾವ್ಯ ರಚನೆಯಲ್ಲಿ ಮಾಡಿಕೊಂಡಿರುವ ಕಥಾಂತರಗಳು ರಾಮಾಯಣವನ್ನು ವಾಸ್ತವಿಕ ನೆಲೆಗೆ ತರುವ ಪ್ರಯತ್ನದ ಫಲವಾಗಿದೆ.

ಮಾಸ್ತಿಯವರು ಮೂಲದ ಕಥಾಶೈಲಿಯನ್ನು ತಮ್ಮ ಅಗತ್ಯಕ್ಕೆ ತಕ್ಕಂತೆ ಬದಲಿಸಿಕೊಂಡಿದ್ದಾರೆ. ಮೂಲದಲ್ಲಿ ಬರುವಂತೆ ಇಲ್ಲಿ ತೃತೀಯ ಪುರುಷ ನಿರ್ವಚನ ಕಂಡುಬರುವುದಿಲ್ಲ. ಬದಲಾಗಿ ರಾಮಾಯಣದ ಕೆಲವು ಮುಖ್ಯ-ಅಮುಖ್ಯ ಪಾತ್ರಗಳು ತಮ್ಮ ಅನುಭವ ಕಥನವಾಗಿ ರಾಮಾಯಣವನ್ನು ಪುನಾರಚಿಸುತ್ತವೆ. ಹಾಗಾಗಿ ಇಡೀ ಕಾವ್ಯದ ಶೈಲಿಗೆ ಒಂದು

ಆತ್ಮೀಯವಾದ ವ್ಯಕ್ತಿ ವಿಶಿಷ್ಟ ನೆಲೆ ಪ್ರಾಪ್ತವಾಗಿದೆ. ಜೊತೆಗೆ ರಾಮಾಯಣದ ಮಹತ್ವದ ಪಾತ್ರಗಳ ಚಿತ್ರಣದೊಂದಿಗೆ ಜನಸಾಮಾನ್ಯರ ಚಿತ್ರಣವೂ ಸ್ಫುಟವಾಗಿ ಕಾವ್ಯದ ಹಂದರಲ್ಲಿ ಕಾಣಿಸಿಕೊಳ್ಳುವುದು ಇದರಿಂದ ಸಾಧ್ಯವಾಗಿದೆ. ಆದ ಕಾರಣವೇ ಶ್ರೀರಾಮಪಟ್ಟಾಭಿಷೇಕ ಕಾವ್ಯವು ಕೇವಲ ರಾಜಮನೆತನದ ಕಥೆಯಾಗದೆ, ಆಳುವ ವರ್ಗದ ಕಥೆಯಾಗದೆ, ಜನಸಾಮಾನ್ಯರ ಜೀವನ ವಿಧಾನ, ಮೌಲ್ಯವಿಚಾರ, ನೋವು–ನಲಿವುಗಳ ಅಭಿವ್ಯಕ್ತಿಯಾಗಿಯೂ ಪರಿಣಮಿಸಿದೆ. ಮಾಸ್ತಿಯವರ ಮನೋಧರ್ಮಕ್ಕೆ ಇದು ಸಹಜವಾದುದೇ ಆಗಿದೆ. ಅವರು ಹೊಸದಾಗಿ ಸೃಷ್ಟಿಸಿರುವ ಸುಮಂತ್ರನ ಮೊಮ್ಮಗನ ಪ್ರಸಂಗ, ಗುಹರಾಜನ ಪಾತ್ರಕ್ಕೆ ಅವರು ನೀಡಿರುವ ಪ್ರಾಧಾನ್ಯ, ಅನಲೆಯ ಚಿತ್ರವನ್ನು ಅವರು ಕೊಡುವ ಪರಿ, ವಾನರ ಸಂಸ್ಕೃತಿಯನ್ನೂ ಮತ್ತು ಅವರ ರೀತಿ–ರಿವಾಜುಗಳನ್ನು ಅವರು ಪೃಥಃಕರಿಸುವ ರೀತಿ ರಾಮಾಯಣಕ್ಕೆ ಆಧುನಿಕತೆಯ ಸ್ಪರ್ಶವನ್ನು ನೀಡಿದೆ. ಮಾಸ್ತಿಯವರು ನಡೆಸಿರುವ ಪುರಾಣಭಂಜನೆ (De-mythification) ಅವರ ವಾಸ್ತವಿಕ ಕಥನದ ಮನೋಧರ್ಮಕ್ಕೆ ಅನುಗುಣವಾಗಿಯೇ ಇದೆ. ಜೈನ ರಾಮಾಯಣದಲ್ಲಿ ಬರುವಂತೆ ಇಲ್ಲಿಯೂ ದಂಡಾಕಾರಣ್ಯದಲ್ಲಿ ಬರುವ ಜನರು ಮೂಲನಿವಾಸಿಗಳಾಗಿದ್ದಾರೆ. ಮಾನವಶಾಸ್ತ್ರದ ದೃಷ್ಟಿಯಿಂದ ಇಂತಹ ಕಥಾಂತರಗಳು ಕುತೂಹಲಕಾರಿಯಾಗಿವೆ. ಆಧುನಿಕ ಕಾದಂಬರಿಯೊಂದನ್ನು ಓದುವ ಅನುಭವವನ್ನು ಶ್ರೀರಾಮಪಟ್ಟಾಭಿಷೇಕದ ವಸ್ತುಸಂವಿಧಾನವು (Plot) ನೀಡುತ್ತದೆ. ಆಂಜನೇಯ ಸಮುದ್ರವನ್ನು ಹಾರುವುದಿಲ್ಲ, ಸಮುದ್ರದಲ್ಲಿ ಈಜಿಕೊಂಡು ಲಂಕೆಯನ್ನು ತಲುಪುತ್ತಾನೆ. ರಾಮನು ಲಂಕೆಯಿಂದ ಹಿಂದಿರುಗುವಾಗ ಪುಷ್ಪಕವಿಮಾನದಲ್ಲಿ ಆಗಮಿಸುವುದಿಲ್ಲ. ಹೇಸರಗತ್ತೆಗಳನ್ನು ಕಟ್ಟಿದ ರಥದಲ್ಲಿ ಆಗಮಿಸುತ್ತಾನೆ. ವಾನರರು ಸಮುದ್ರಕ್ಕೆ ಕಲ್ಲು ಮಣ್ಣುಗಳನ್ನು ಬಳಸಿ ಸೇತುವೆಯನ್ನು ಕಟ್ಟಿಲ್ಲ, ನೀರಿನಲ್ಲಿ ತೇಲುವ ಮರದ ದಿಮ್ಮಿಗಳನ್ನು ಬಳಸಿದ್ದಾರೆ. ಹೀಗೆ ಆಧುನಿಕ ವೈಜ್ಞಾನಿಕ ಬುದ್ಧಿಗೆ ಸಮ್ಮತಗೊಳಿಸುವ ಪ್ರವೃತ್ತಿ ಕಾವ್ಯದುದ್ದಕ್ಕೂ ಕಂಡುಬರುತ್ತದೆ. ರಾಮ, ದಶರಥ, ಲಕ್ಷ್ಮಣ, ಭರತ, ರಾವಣ ಮೊದಲಾದ ಮುಖ್ಯಪಾತ್ರಗಳ ಚಿತ್ತವೃತ್ತಿಗಳು, ಹೆಚ್ಚು ಸಹಜವಾಗಿಯೂ, ಸ್ವಾಭಾವಿಕವಾಗಿಯೂ ಚಿತ್ರಿತವಾಗಿವೆ. ಹೀಗೆ ಮಾಸ್ತಿಯವರು ಮೂಲ ರಾಮಾಯಣವನ್ನು ಆಧರಿಸಿದ್ದರೂ ಮುಕ್ತವಾದ ಮತ್ತು ಸ್ವತಂತ್ರ ಚಿಂತನಾಪರತೆಯ ನೆಲೆಯಿಂದ ರಾಮಾಯಣವನ್ನು ಒಂದು ಸಹಜ ಸ್ವಾಭಾವಿಕ ಮಾನವ ಜೀವಿತದ ಕಥೆಯಾಗಿ ಕಥಾಂತರಿಸುವ ವಿಶಿಷ್ಟವಾದ ಪ್ರಯೋಗದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

**೩.೩ ಶ್ರೀರಾಮಾಯಣ ಮಹಾನ್ವೇಷಣಂ – ಕಥಾಹಂದರ:-**

ವಾಲ್ಮೀಕಿ ರಾಮಾಯಣದ ಕಥಾ ಭಿತ್ತಿಯನ್ನೇ ಸ್ವೀಕರಿಸಿ, ಈ ಶತಮಾನಕ್ಕೊಪ್ಪುವ ನೂತನ ಚಿಂತನ ಧಾರೆಯನ್ನು ತಮ್ಮ ಕಾವ್ಯದಲ್ಲಿ ವೀರಪ್ಪಮೊಯಿಲಿಯವರು ಸಮಾವೇಶಗೊಳಿಸಲೆತ್ನಿಸಿದ್ದಾರೆ. ಪಂಪ-ರನ್ನರು, ಅರ್ಜುನ-ಭೀಮರಿಗೆ ಪ್ರಾಶಸ್ತ್ಯ ನೀಡಿದಂತೆ ಮೊಯಿಲಿಯವರು ಲಕ್ಷ್ಮಣನಿಗೆ ಪ್ರಾಶಸ್ತ್ಯವಿತ್ತು. 'ಲಕ್ಷ್ಮಣಾಯಣ'ವನ್ನಾಗಿಸಿದ್ದಾರೆ. ಇಲ್ಲಿ ಜೈನರಾಮಾಯಣಗಳ ಲಕ್ಷ್ಮಣನ ಪಾತ್ರ ತಕ್ಷಣ ನೆನಪಿಗೆ ಬರುತ್ತದೆ. "ಮೊಯಿಲಿಯವರ 'ಶ್ರೀರಾಮಾಯಣ ಮಹಾನ್ವೇಷಣವು ಪರಂಪರೆ ಮತ್ತು ಆಧುನಿಕತೆಗಳೆರಡನ್ನೂ ಗರ್ಭೀಕರಿಸಿಕೊಂಡು ಬೆಳೆಯುತ್ತದೆ. ಈ ಮಹಾಕಾವ್ಯ ಸೃಷ್ಟಿಸುವ; ಪುರಾಣ ಪ್ರಪಂಚ ಸಾಂಪ್ರದಾಯಿಕವಾದರೂ ವಸ್ತುವಿನ ನಿರ್ವಹಣೆಯಲ್ಲಿ ಆಧುನಿಕವಾಗುತ್ತದೆ. ಮೃತ್ ಶಕ್ತಿಯನ್ನು ಚಿತ್ ಶಕ್ತಿಯನ್ನಾಗಿಸುವ ಘನವಾದ ಉದ್ದೇಶ ಈ ಮಹಾಕಾವ್ಯಕ್ಕಿದೆ"[೨೦] ಎಂದು ಡಾ.ಜಿ.ಎಂ.ಹೆಗಡೆಯವರು ಅಭಿಪ್ರಾಯ ಪಡುತ್ತಾರೆ.

ಪೌರಾಣಿಕವಾದ ರಾಮಕಥೆಯನ್ನು ಭಕ್ತಿಯ ಆವೇಶದಲ್ಲಿ ಹೇಳದೆ ವರ್ತಮಾನ ಕಾಲದ ನವೀನ ಚಿಂತನಾಕ್ರಮವನ್ನು ರಾಮಕಥೆಗೆ ಅನ್ವಯಿಸಿದ್ದಾರೆ. ಸೂಕ್ಷ್ಮವಾಗಿ ನೋಡಿದರೆ ರಾಮಾಯಣದ ಕಥೆ ಮೊಯಿಲಿಯವರಿಗೆ ಒಂದು ಭಿತ್ತಿಮಾತ್ರ. ಆ ಭಿತ್ತಿಯ ಮೇಲೆ ಲಕ್ಷ್ಮಣನ ಮೂಲಕ ಮಂಡಿಸ ಹೊರಟಿರುವ ಹೊಸಯುಗದ ಮೌಲ್ಯಗಳು ತುಂಬಾ ವಿಶೇಷವಾಗಿವೆ. ಪೌರಾಣಿಕವಾಗಿ ರಾಮನಿಗೆ ಸಲ್ಲಬೇಕಾದ ಗೌರವಕ್ಕೆ ಕಿಂಚಿತ್ತೂ ಚ್ಯುತಿಬರದ ಹಾಗೆ ಲಕ್ಷ್ಮಣನ ಪಾತ್ರವನ್ನು ಕೇಂದ್ರೀಕರಿಸಿದ್ದಾರೆ. ಲಕ್ಷ್ಮಣನ ಪಾತ್ರ ಕಾವ್ಯದುದ್ದಕ್ಕೂ ಹರಿಯುವುದರಿಂದ 'ನಾಯಕ'ನನ್ನಾಗಿ ಮಾಡಿ ಎಷ್ಟು ಯಶಸ್ವಿಯಾಗಿದ್ದಾರೆ ಎನ್ನುವುದನ್ನು ಒರೆಹಚ್ಚಬೇಕು. ಅದಕ್ಕೆ ಮೊದಲು ಕಥಾಹಂದರಲ್ಲಿ, ಪಾತ್ರಗಳಲ್ಲಿ ಏನೆಲ್ಲ ಬದಲಾವಣೆಗಳಾಗಿವೆ ಅಥವಾ ಕಥಾಂತರ ಪ್ರಕ್ರಿಯೆ ರೂಪುಗೊಂಡಿರುವ ರೀತಿಯನ್ನು ಸಂಶೋಧಿಸುವುದೇ ಇಲ್ಲಿನ ಉದ್ದೇಶವಾಗಿದೆ.

ಒಮ್ಮೆ ದಶರಥನು ಬೇಟೆಗೆಂದು ಹೋಗಿದ್ದಾಗ, ತನ್ನ ಪ್ರಿಯಕಾಂತೆಯರ ನೇತ್ರಕಾಂತಿಯನ್ನು ಹರಿಣಗಳ ನೇತ್ರದಲ್ಲಿ ಕಂಡು ಬೇಟೆಯನ್ನೇ ತ್ಯಜಿಸಿಬಿಟ್ಟಿರುತ್ತಾನೆ. ಆದರೆ ವನ್ಯಮೃಗಗಳಿಂದ ತಮಗೆ ಸಂಕಟವೊದಗಿದೆಯೆಂದು ಪ್ರಜೆಗಳು ಮೊರೆಯಿಟ್ಟಾಗ ಮಾತ್ರವೇ ಆತ

ಬೇಟೆಗೆ ಹೋಗಿದ್ದು, ಆಗ ನೀರು ಕುಡಿಯಲು ಬಂದ ಮೃಗವೆಂದು ತಿಳಿದು, ಶಬ್ದವೇಧೀ ಪ್ರಯೋಗಿಸಿ ಶ್ರವಣಕುಮಾರನ ಹತ್ಯೆಗೈದು ವೃದ್ಧದಂಪತಿಗಳಿಂದ ಶಾಪ ಪಡೆಯುತ್ತಾನೆ. ಮೂಲದಲ್ಲಿ ದಶರಥ ಬೇಟೆ ತೊರೆಯುವ ಪ್ರಸಂಗವಿಲ್ಲ.

ಪುತ್ರಕಾಮೇಷ್ಟಿಯ ಪ್ರಸಂಗದಲ್ಲಿ ಕುವೆಂಪು ಅವರ ದರ್ಶನದ ನೇರ ಪ್ರಭಾವವನ್ನು ಕಾಣಬಹುದಾಗಿದೆ. ಕುವೆಂಪು ಅವರ ಕಾವ್ಯದಂತೆಯೇ ಇಲ್ಲಿಯೂ ಅಶ್ವಮೇಧಯಾಗದ ಬದಲು ಪುತ್ರಕಾಮೇಷ್ಟಿಯಾಗ. ಅದನ್ನು ಅಹಿಂಸಾರೂಪದಲ್ಲಿ ಮಾಡುವಂತೆ ಪ್ರೇರೇಪಿಸುವವನು ಜಾಬಾಲಿ ಮಹರ್ಷಿ. ಈ ಪುತ್ರಕಾಮೇಷ್ಟಿಯು ಯುಗಧರ್ಮಗಳಲ್ಲಿ ಒಂದಾದ ಗಾಂಧೀಜಿಯವರ ಅಹಿಂಸಾ ಮೌಲ್ಯವನ್ನು ಎತ್ತಿಹಿಡಿಯುವುದಾಗಿದೆ. ಮೊಯಿಲಿಯವರ ಕಾವ್ಯದಲ್ಲಿ ಈ ಪ್ರಸಂಗವು ಇನ್ನೂ ವಿಸ್ತೃತಗೊಂಡಿದೆ. ಯಾಗದ ಸಂದರ್ಭದಲ್ಲಿ ಋತ್ವಿಜನೊಬ್ಬ ದಶರಥ ಧರಿಸಿದ ರತ್ನಖಚಿತ ಕಂಕಣವನ್ನೇ ಬೇಡುವುದು, ಹಾಗೆಯೇ ಒಬ್ಬ ಚಿಂದಿವಸ್ತ್ರದ ಬಡಕಲು ತಿರುಕ ತನ್ನ ಮಗನ ಜೊತೆಯಲ್ಲಿ ಊಟಕ್ಕೆ ಬಂದಾಗ ಚಂದ್ರಶಾಲೆಯ ಭಟ್ಟ ಅವನನ್ನು ತಡೆದು ತಳ್ಳಿದ ಸಂದರ್ಭದಲ್ಲಿ ಅಲ್ಲಿಗೆ ಬಂದ ದಶರಥ ಆ ತಿರುಕನನ್ನು ಎತ್ತಿಹಿಡಿದು ಕ್ಷಮೆ ಕೇಳಿ ತಾನೇ ಆತನನ್ನು ಸ್ವತಃ ಸತ್ಕರಿಸುವ ಪ್ರಸಂಗವನ್ನು ನೋಡಿದಾಗ, ಭಾರತದ ಬಡಜನತೆಯ ಹಸಿವಿನ ಕೂಗಿಗೆ ದಶರಥನ ಮೂಲಕ ಸ್ಪಂದಿಸುತ್ತಾರೆ ಕವಿ, ಎನ್ನುವುದು ಸ್ಪಷ್ಟ.

ಇದರ ಜೊತೆಗೆ ಇನ್ನೂ ಕೆಲವು ಪ್ರಸಂಗಗಳನ್ನು ಪೂರಕವಾಗಿ ಪೋಣಿಸಿದ್ದಾರೆ–

೧. ಹೊಲಿ ಹೊಲಿ ಹೊಲಿಯೋ ಹೊಲಿ ಹೊಲಿ ಎನ್ನುವ ಗೀತ ಇದು ಸ್ಥಳೀಯ ರೈತಮಕ್ಕಳ ಫಲವಂತಿಕೆಯ ಜಾತ್ರೆ

೨. ಫಲವಂತಿಕೆಯ ಮತ್ತೊಂದು ಆಚರಣೆ 'ನಾಗಮಂಡಲ'ವೆನ್ನುವ ನಾಗಸರ್ಪನ ಆರಾಧನೆ. ಮಕ್ಕಳಾಗದೆ ಇದ್ದವರು ಸರ್ಪವನ್ನು ಪೂಜಿಸಿದರೆ ಮಕ್ಕಳಾಗುತ್ತವೆ ಎಂಬ ನಂಬಿಕೆ ನಮ್ಮ ಸಮಾಜದಲ್ಲಿ ಇಂದಿಗೂ ಇದೆ.

೩. ಭೂಮಾತೆ ಋತುಮಾತೆಯಾಗಿಹಳು ಎಂಬ ಭಾವನೆಯ ಮೆರೆಸುವ 'ಕೆಡ್ಡಸೂ' ಎಂಬುವ ಹಬ್ಬ– ಇಂತಹ ಸ್ಥಳೀಯ ಆಚರಣೆಗಳನ್ನು ಮೊಯಿಲಿಯವರು ತಮ್ಮ ಕಾವ್ಯಕ್ಕೆ ಪೂರಕವಾಗಿ ಬಳಸಿಕೊಂಡಿದ್ದಾರೆ.

೪. ಹಸಿಕಡಿಯದಿರಿ-ಒಣಮುರಿಯದಿರಿ, ತಪ್ಪಿದರೆ ಭೂದೇವಿ ಬಂಜೆಯಪ್ಪುವಳು ನೋಡಿ-ಎಂದೆನುವ ಪರಿಸರ ಕಾಳಜಿಯ ಗೀತಗಳು. ಇಂದು ನಾಶವಾಗುತ್ತಿರುವ ಪರಿಸರದ ಬಗ್ಗೆ ಜಾಗೃತಿಯನ್ನುಂಟು ಮಾಡುವ ಗೀತೆಗಳಾಗಿದೆ.

ಪುತ್ರಕಾಮೇಷ್ಟಿಯಾಗದ ನಂತರ ದಶರಥನಿಗೆ ಪುತ್ರರತ್ನರು ಜನಿಸುತ್ತಾರಷ್ಟೇ. ಒಮ್ಮೆ ದಶರಥನ ತೊಡೆಯ ಮೇಲೆ ರಾಮ-ಭರತ ಕುಳಿತಿದ್ದ ಸಂದರ್ಭದಲ್ಲಿ ಅಲ್ಲಿಗೆ ಬಂದ ಲಕ್ಷ್ಮಣ- 'ತಾನಾವ ತೊಡೆಯನೇರಲಿ, ತನಗೆಲ್ಲಿದೆ ಸ್ಥಾನ' ಎಂದು ನೊಂದು ಹಂಬಲಿಸುವ ಪ್ರಸಂಗ ಧ್ರುವನ ಕಥೆಯನ್ನು ನೆನಪಿಗೆ ತರುತ್ತದೆ.

ವಿಶ್ವಾಮಿತ್ರನು ದಶರಥನರಮನೆಗೆ ಬಂದು; ಲೋಕ ಕಲ್ಯಾಣಕ್ಕಾಗಿ ಯಾಗ ಮಾಡಬೇಕಾಗಿದೆ. ಆದರೆ "ಆಗಿಹರು ವಿಘ್ನಕಾರಿಗಳು ಮಾರೀಚ-ಸುಬಾಹು ಕಾಮರೂಪಿ ರಾಕ್ಷಕರು ತಾಟಕಾ ಸುತರು ಉಗ್ರಗಾಮಿಗಳವರು"[೩೦] ಅವರನ್ನು ಹತ್ತಿಕ್ಕಲು ರಾಮನನ್ನು ನನ್ನೊಡನೆ ಕಳುಹಿಸಿಕೊಡೆಂದು ಕೇಳುವನು. ಇಲ್ಲಿ ಉಗ್ರಗಾಮಿ ಎನ್ನುವ ಪದ ಇಂದು ಜಗದ್ವ್ಯಾಪಿಯಾಗಿರುವ ಲೋಕಕಂಟಕ ಉಗ್ರಗಾಮಿಗಳನ್ನು ನೆನಪಿಗೆ ತರುತ್ತದೆ. ವಿಶ್ವಾಮಿತ್ರ ರಾಮನನ್ನು ನನ್ನೊಡನೆ ಕಳುಹಿಸಿಕೊಡು ಎಂದು ಕೇಳುವನೇ ಹೊರತು ಕಾವ್ಯನಾಯಕನನ್ನಲ್ಲ. ಲಕ್ಷ್ಮಣನೂ ರಾಮನ ಜೊತೆಗೆ ಹೊರಡುತ್ತಾನೆ.

ವಿಶ್ವಾಮಿತ್ರನು ರಾಮಲಕ್ಷ್ಮಣರನ್ನು ಕರೆದೊಯ್ಯುತ್ತ 'ಅಕ್ರಮ ರಾಕ್ಷಸೀಶಕ್ತಿ ಮೇಲೆದ್ದು ಜಗವ ನುಂಗುತ ತಳ್ಳಿಹುದು ಧರ್ಮವ ರಸಾತಳಕೆ! ಎಂದು ಹೇಳುತ್ತಿದ್ದಂತೆಯೇ ರಾಮನು "ಯಾರು ಗುರುವರ್ಯ ತಾಟಕಿಯೋ, ಮಾರೀಚ, ಸುಬಾಹು ರಕ್ಕಸರೋ? ಎಂದು ಕೇಳುತ್ತಾನೆ.

**"ಊಹುಂ, ಅವರೆಲ್ಲ ರೆಂಬೆ ಮಾತ್ರರೈ, ರಾವಣನೆ**
**ಅತಿಬಲನು ತಾಯಿಬೇರು ಅವನಿರುವನಿಲ್ಲೇ**
**ಈ ಲೋಕದಲ್ಲೇ ಲಂಕಾದ್ವೀಪ ಸ್ವರ್ಣಭೂಮಿಯಲಿ**
**ಅಯೋಧ್ಯೆ, ವಿದೇಹ, ಸಿದ್ಧಾಶ್ರಮ, ಕಾಮಾಶ್ರಮ**
**ಆವುದೂ ದೂರವಲ್ಲ ಆ ದಶಕಂಠನಿಗೆ!**

____. ಅಕ್ರಮವ ಸಂಚಾಲಿಪ

ತಂತ್ರ ಮಂತ್ರ ಕೌಶಲದೊಳಗೆ ಅಸಮಬಲನು

ಆರ್ಯಾವರ್ತ ಹೃದ್ಭಾಗದಲಿ ಬೀಡುಬಿಟ್ಟಿಹುದವನ

ಭಯೋತ್ಪಾದಕ ಸೈನ್ಯ ಶಿಬಿರ, ಅವನಿಗಿಲ್ಲ

ಉಚಿತಾನುಚಿತ ಪ್ರಜ್ಞೆ, ನ್ಯಾಯಾನ್ಯಾಯ ವಿವೇಚನೆ!"[೩೧]

ಶೂರ್ಪನಖಿಯ ಪ್ರಸಂಗದಲ್ಲಿ ರಾವಣನ ವಿವರವು ಮೂಲಕಾವ್ಯದಲ್ಲಿ ಬರುತ್ತದೆ. ಆದರೆ ಈ ಕಾವ್ಯದಲ್ಲಿ ಮೊದಲಲ್ಲೇ ರಾವಣನ ವಿವರನೀಡಿ ಅವನ ಶಕ್ತಿ ಮತ್ತು ಚಟುವಟಿಕೆಗಳ ಪರಿಚಯವನ್ನು ವಿಶ್ವಾಮಿತ್ರನ ಮೂಲಕವೇ ಮಾಡಿಸಿಬಿಡುತ್ತಾರೆ. ಉಗ್ರಗಾಮಿಗಳು, ಭಯೋತ್ಪಾದಕತೆ ಈ ಮಾತುಗಳೆಲ್ಲಾ ಒಸಮಾಬಿನ್ ಲಾಡೆನ್‌ನಂತಹ ದುಷ್ಟಶಕ್ತಿಗಳನ್ನೂ ಅವನ ಅನುಚರರನ್ನೂ ಸೂಚಿಸಿಬಿಡುತ್ತವೆ.

ವಿಶ್ವಾಮಿತ್ರನು ದಿವ್ಯಾಸ್ತ್ರಗಳನ್ನು ನೀಡಲು ರಾಮಲಕ್ಷ್ಮಣರನ್ನು ಹೆಜ್ಜೆ ಹೆಜ್ಜೆಗೂ ಪರೀಕ್ಷಿಸುತ್ತಾ ಹೋಗುತ್ತಾನೆ. "ಏಕೆ ದ್ವಂದ್ವವು ದೇವ ಕೃಪೆ ಮಾಡಿ ನೀಡಿರೈ ಬೇಡ ನಿಮಗೆಮ್ಮಲ್ಲಿ ಶಂಕೆ"[೩೨] ಎಂದು ಸೌಮಿತ್ರಿ ಕೇಳಿದಾಗ "ದಿಕ್ಕು ದೆಸೆ ತಪ್ಪಿ ದಿವ್ಯಾಸ್ತ್ರ ವ್ಯರ್ಥವಾಗೆ ಎನ್ನ ತಪಃಕ್ರಿಯೆ ಸಾಧನೆ ಸಿದ್ಧಿ ದೀಕ್ಷೆ ಶ್ರದ್ಧೆ ಮಣ್ಣುಗೂಡಿ ವಿಯೋಜನೆಯಪ್ಪುದು ಪ್ರಕೃತಿಯಲಿ"[೩೩] ಎಂಬುದೇ ವಿಶ್ವಾಮಿತ್ರನ ಆತಂಕವಾಗಿರುತ್ತದೆ. ರಾಮ ಲಕ್ಷ್ಮಣರು ದಿವ್ಯಾಸ್ತ್ರ ಧರಿಸಲು ಯೋಗ್ಯರು ಎಂದರಿತ ಮೇಲೆ ಅವರಿಗೆ ಸುಮಾರು ಐವತ್ತು ರೀತಿಯ ದಿವ್ಯಾಸ್ತ್ರಗಳನ್ನು ನೀಡುತ್ತಾನೆ. ಮೂಲದಲ್ಲಿಯಂತೆಯೇ ತಾಟಕೆಯ ಸಂಹಾರ, ಮಾರೀಚನು ರಾಮನ ವಾಯುವ್ಯಾಸ್ತ್ರದಿಂದ ಅರೆಜೀವವಾಗಿ ಓಡಿಹೋದರೆ ಅಗ್ನೇಯಾಸ್ತ್ರದಿಂದ ಸುಬಾಹು ಸಂಹಾರ ಗೊಳ್ಳುತ್ತಾನೆ.

ಮುಂದಿನ ಕಥಾಭಾಗದಲ್ಲಿ ಮೊಯಿಲಿಯವರು ಅನೇಕ ಪಾತ್ರಗಳನ್ನು ಕಥೆಗೆ ಪೂರಕವಾಗಿ ಸೃಷ್ಟಿಸಿಕೊಂಡಿದ್ದಾರೆ. ಗಗನ ಮತ್ತು ಗಗನಸುತರು, ನಿಷಾದ ಯೋಧ ಜನಪದರೆಲ್ಲ ಸೇರಿ ಧರ್ಮಯುದ್ಧವನ್ನೇ ಸಾರಿದ್ದಾರೆ. ಆರ್ಯಸೇನಾಪತಿ ಸಕಲಾಶ್ವ ಪುತ್ರನಾದ ದೇವಪ್ರಿಯ ಮತ್ತವನ ದುಷ್ಟ ಸಂಗಾತಿಗಳನ್ನು ಬಂಧಿಸಿ ರಾಮನೆದುರಿಗೆ ನಿಲ್ಲಿಸಿದ್ದಾರೆ. ಕಾರಣ ಅವರು ಊರನಾರಿಯರ ಕೆಡಿಸಿದ ಲಂಪಟರು, ನೀಚಸಂತತಿಯವರೆಂದು. "ಸಕಲಾಶ್ವ ಸೇನಾಪತಿಯಾದೊಡೆ ನ್ಯಾಯವೆಂದಾಗುವುದೆ ಅಕ್ರಮ, ಅಧರ್ಮ ನಡವಳಿಕೆ; ಹೊಲವ ಮೇದೊಡೆಬೇಲಿ, ಶಾಸಕರು ಶಾಸನವ ಮುರಿದೊಡೆ, ಎಲ್ಲಿ

ಕೇಳಲಿ ನ್ಯಾಯ ಗುರುವರ್ಯ?"[೩೪] ಎಂದು ವಾದಿಸುತ್ತಾರೆ. ರಾಮನು ದೇವಪ್ರಿಯ ಮತ್ತು ಅವನ ತಂಡಕ್ಕೆ ಮೃತ್ಯುದಂಡವನ್ನು ವಿಧಿಸುತ್ತಾನೆ. ಇವರಿಗೆ ದಂಡನೆಯಾದರೆ ನಾಳೆ ಸಿದ್ಧಾಶ್ರಮವನ್ನು ಸಕಲಾಶ್ವ ಏನು ಮಾಡಿಬಿಡುತ್ತಾನೋ ಎಂಬ ಆತಂಕವಾಗುತ್ತದೆ. ಆರ್ಯಸೈನ್ಯದೊಡನೆ ಸಂಘರ್ಷ ಬೇಡವೆಂದು ರಾಮನಿಗೆ ಹೇಳುತ್ತಾರೆ. ಅಷ್ಟರಲ್ಲಿ ಸಕಲಾಶ್ವ ಅಲ್ಲಿಗೆ ಬರುತ್ತಾನೆ. 'ದಂಡಾಧಿಕಾರಿ ನಾನಿರುವಾಗ ಮೃತ್ಯುದಂಡವ ಕೊಡಲು ನೀನಾರು' ಎಂದು ಮಗನ ಪರವಾಗಿ ವಾದಿಸುತ್ತಾನೆ. ರಾಮನು ಕಾಮಾಶ್ರಮ, ಸಿದ್ಧಾಶ್ರಮಗಳನ್ನೆಲ್ಲ ಉಗ್ರಗಾಮಿ, ಆತಂಕವಾದಿಗಳು ಪೀಡಿಸುತ್ತಿರಬೇಕಾದರೆ ಎಲ್ಲಿತ್ತು ನಿನ್ನ ಅಯೋಧ್ಯೆಸೇನೆ? ಆರ್ಯವರ್ತ ಮಾನಸಮ್ಮಾನಗಳನ್ನೆಲ್ಲ ಲಂಕೆಯ ಸುವರ್ಣವರಹಗಳಿಗೆ ಬಲಿ ಕೊಟ್ಟೆಯಾ? ಎಂದು ನಿಂದಿಸಿದನು. ಅದಕ್ಕೆ ಸಕಲಾಶ್ವ 'ನಾನೆಲ್ಲಿ ನೀನೆಲ್ಲಿ ಸೈನ್ಯವಿದೆ ನನ್ನಲ್ಲಿ' ಎಂದು ಯುದ್ಧಸನ್ನದ್ಧನಾದಾಗ ರಾಮ ಅವನನ್ನು ಸಂಹರಿಸುತ್ತಾನೆ. ಈ ಪ್ರಸಂಗವು ಇಂದಿನ ಸಮಾಜದ ಕೆಲವು ಅಧಿಕಾರಿಗಳ ಮಂತ್ರಿಮಹೋದಯರ ಮತ್ತು ಅವರ ಮಕ್ಕಳ ಉಗ್ರಗಾಮಿತ್ವ-ಭಯೋತ್ಪಾದನೆ ಚಟುವಟಿಕೆಗಳನ್ನು ನೆನಪಿಗೆ ತರುವುದಲ್ಲದೆ; ದುಷ್ಕೃತ್ಯಗಳು ಮಿತಿಮೀರಿದ ಇಂಥ ಸಂದರ್ಭಗಳಲ್ಲಿ ಪ್ರಜೆಗಳೇ ಹೇಗೆ ಅನ್ಯಾಯದ ವಿರುದ್ಧ ಬಂಡೇಳುತ್ತಾರೆಂಬುದನ್ನು ತೋರಿಸುತ್ತದೆ.

ನಾರೀಮಣಿ ವನಜೆಯು ರಕ್ಕಸರಿಂದ ಶೋಷಣೆಗೊಳಗಾದ ಹೆಣ್ಣು. ರಕ್ಕಸರು ಅವಳ ಪತಿಯನ್ನು ಕೊಂದು ತಿಂದು, ಅಬಲೆಯಾದ ಅವಳ ಮಾನಹಾನಿ ಮಾಡಿದ್ದಾರೆ. ಅನಾಮಿಕ ರಕ್ಕಸರ ಪಿಂಡವನ್ನು ಹೊತ್ತಿದ್ದಾಳೆ. ಈಗ ಶೋಷಿತರ ಪ್ರತಿನಿಧಿಯಾಗಿ ಬಂದು ರಾಮನ ಪಾದಗಳಿಗೆರಗುತ್ತಾಳೆ. ನಿನ್ನಿಂದ ನಮಗೆ ಬಿಡುಗಡೆ ದೊರಕಿತು. ಆದರೆ ನಮ್ಮ ಪಾಡು ಬಾಣಲೆಯಿಂದ ಬೆಂಕಿಗೆ ಬಿದ್ದಂತಾಗಿದೆ. ನಮಗೆ ಮರುಹುಟ್ಟು, ಮರುಬಾಳು ನೀಡು ತಂದೆ ಎಂದು ಬೇಡುತ್ತಾಳೆ. ಶ್ರೀರಾಮ ಗಗನನ ರೂಪದಿ ನಾನೇ ಎಲ್ಲರನ್ನೂ ಪೊರೆಯುವೆನು ಎಂದು ಹೇಳಿ 'ನೀನು ಸಮುದಾಯ ಜಾಗೃತಿಯ ಸ್ಫೋಟಕವಾಗು' ಎಂಬ ಆತ್ಮವಿಶ್ವಾಸ ತುಂಬುವ ಪ್ರಯತ್ನ ಮಾಡುತ್ತಾನೆ.

ಈ ಪ್ರಸಂಗವು 'ವೀಣಾಧರಿ' ಎಂಬ ಹೆಣ್ಣುಮಗಳನ್ನು ನೆನಪಿಗೆ ತರುತ್ತವೆ. ಆಕೆಯ ತಪ್ಪಿಲ್ಲದಿದ್ದರೂ ಆಕೆಯನ್ನು ಅನೇಕರು ಅನ್ಯಕಣ್ಣುಗಳಿಂದಲೇ ನೋಡಿದಾಗ, ಕೆಲವರ ಸಾಂತ್ವನದಿಂದ ಆಕೆ ತನ್ನ ಮನಸ್ಥೈರ್ಯದಿಂದ ತನ್ನ ಜೀವವಿರುವವರೆಗೂ ಎಚ್.ಐ.ವಿ.ಪೀಡಿತರ ಸೇವೆ ಮಾಡುವ, ಅವರಲ್ಲಿ ಆತ್ಮಸ್ಥೈರ್ಯ ತುಂಬುವ ಕೆಲಸ ಮಾಡಿದಳು. ಮೊಯಿಲಿ ಅಹಲ್ಯಾ ಪ್ರಸಂಗವನ್ನಂತೂ

ಪ್ರಸ್ಥಾನ ೧೮ರಿಂದ ೨೩ನೇ ಪ್ರಸ್ಥಾನದವರೆವಿಗೆ ಮೀಸಲಿಟ್ಟಿದ್ದಾರೆ. ಇಲ್ಲಿಯವರೆಗೆ ಬಂದಿರುವ ಬೇರೆಲ್ಲ ರಾಮಾಯಣಗಳ ಅಹಲ್ಯೆಗಿಂತ ಮಹಾನ್ವೇಷಣದ ಅಹಲ್ಯೆ, ವಿಭಿನ್ನ ಮತ್ತು ವಿಶಿಷ್ಟ ವ್ಯಕ್ತಿತ್ವದವಳು.

ಗೌತಮನು ಕುಲಪತಿಯ ಸ್ಥಾನಕ್ಕೇರಿದಾಗ ಬ್ರಹ್ಮಸಮ್ಮೇಳನವೊಂದರ ಸಿದ್ಧತೆ ನಡೆಯುತ್ತದೆ. ಆಚಾರ್ಯಸ್ಥಾನಕ್ಕೆ ಗೌತಮನನ್ನೇ ಆಯ್ಕೆ ಮಾಡುತ್ತಾರೆ. ಯಜ್ಞದೇವತೆಯಾದ ಇಂದ್ರನನ್ನು ಆಹ್ವಾನಿಸಲಾಗಿದೆ. ಅತಿಥಿಯಾಗಿ ಬಂದ ಇಂದ್ರ ಅಹಲ್ಯೆಯ ಪಾಲಿಗೆ ಆಗಂತುಕನಾಗಿ ಕಾಡುತ್ತಾನೆ. ಗೌತಮನೇನೋ ಜ್ಞಾನದಾಹದಿ ಉಗ್ರತಪದಲಿ ನಿಂತು ಸಕಲ ಲೌಖಿಕ ಕಾಮನೆಗಳನ್ನ ನಿಗ್ರಹಿಸಿರುತ್ತಾನೆ. ಆದರೆ ಅಹಲ್ಯೆಯ ಪರಿ ಬೇರೆ. ಆಕಾಂಕ್ಷೆ ಅಳಿದಿಲ್ಲ, ಭೋಗಲಾಲಸೆಯಿಲ್ಲವೆಂಬುದು ತುದಿನಾಲಗೆಯ ಮಾತು. ಸಾಲದ್ದಕ್ಕೆ ಈಗ ಇಂದ್ರ ತನ್ನನ್ನು ಆಶ್ರಮದದ್ವಾರದಲಿ ಕಂಡ ಪರಿ ನುಡಿಸಿದ ಲೀಲೆಯನ್ನೇ ನೆನೆಯುತ್ತಾಳೆ. ಈಗ ದೇವೇಂದ್ರ ತನ್ನೆಡೆಗೆ ಬಂದರೇನು ಮಾಡುವುದು ಎಂಬ ಅವ್ಯಕ್ತಾಕಾಂಕ್ಷೆ, ಕಳವಳವು ಕಾಡುತ್ತದೆ. ಇತ್ತ ಇಂದ್ರ ಕುಟಿಲ ತಂತ್ರಗಳನ್ನೇ ಯೋಜಿಸುತ್ತಾನೆ. ನಡುರಾತ್ರಿಯಾಗಿದ್ದಾಗಲೇ ತಾನೇ ಕೋಳಿಯಾಗಿ ಗೌತಮನಿಗೆ ಕೇಳುವಂತೆ ಮೊದಲ ಜಾವದ ಕೂಗು ಮೊಳಗಿಸುತ್ತಾನೆ. ಗೌತಮ ಅರುಣೋದಯವಾಯಿತೆಂದು ಭ್ರಮಿಸಿ ನದಿಯದಾರಿ ಹಿಡಿಯುತ್ತಾನೆ. ಇತ್ತ ಇಂದ್ರ ಗೌತಮ ವೇಷದಲ್ಲಿ, ನಿದ್ದೆಗಾಣದೆ ಹೊರಳಿ ಕನವರಿಸುತ್ತಿದ್ದ ಅಹಲ್ಯೆಯ ಮುಂದೆ ಪ್ರತ್ಯಕ್ಷನಾದ. ಅಹಲ್ಯೆ ಪತಿಯೇ ಬಂದನೆಂದು ಸಂಭ್ರಮಿಸಿದಳು. ಚುಂಬನದಿ ಜೇನಸವಿ; ಬಾಹುಗಳ ಬಿಗಿತದ ಆನಂದ ಸಾಗರದಿ ಮೈಮರೆತವಳಿಗೆ ತಕ್ಷಣವೇ ಶಂಕಯು ಮೂಡಿತು. ಏಕೆಂದರೆ ಹಿಂದೆಂದೂ ಕಾಣದಿಹ ವಿನೂತನ ಲೀಲೆಯಿದು. ಅಲ್ಲದೆ ತಪದ ನಿಯಮ ಮುರಿದು ಮುನಿ ಈ ರೀತಿ ಬರುತ್ತಾನೆಯೇ? ಎಂಬ ಸಂದೇಹವುಂಟಾಗಿ ಮಬ್ಬುಗತ್ತಲಲ್ಲಿ ಕಣ್ತೆರೆದರೆ ಪತಿವೇಷದಲಿ ಬಂದವನು ಪರಪುರುಷನೆಂದು ತಿಳಿಯುತ್ತದೆ. 'ಪರ್ಣಕುಟಿಗೆ ನುಗ್ಗಿ ನನ್ನ ವಂಚಿಸಿ, ಕೆಡಿಸಿ ನನ್ನನ್ನು ಪತಿತಳಾಗಿಸಿಹೆಯಾ' ಎಂದು ಕೆರಳಿ ಕೇಳಿದಳು. ಆದರೆ ಇಂದ್ರ ತನ್ನ ಮಾತಿನಲಿ ಮರುಳು ಮಾಡಿದ. ಅಹಲ್ಯೆಯ ಹೃದಯದಂಗಳದಲ್ಲಿ ಮೋಹದ ರಂಗೋಲೆಯನ್ನೇ ಬಿಡಿಸಿದ. ಶರಣಾದ ಅಹಲ್ಯೆ ಮಹೇಂದ್ರಾದ್ಭುತ ಕಾಮ ಕಲಾಕೌಶಲಕೆ ಬೆರಗಾಗಿ ಹೀರಿದಳು ಶಯ್ಯೆಯಲಿ ರಸಪಾಕ ರಾಗವನು.

ಇತ್ತ ಗೌತಮಮುನಿಗೆ ಕತ್ತಲು ಹರಿಯಲಿಲ್ಲ. ಅಷ್ಟು ಸಾಲದು ಎಂಬಂತೆ ಇಲ್ಲಿಯವರೆವಿಗೆ ಕಾಡದಿದ್ದ ಅಹಲ್ಯೆಯ ಮೋಹಲೀಲಾವಿಲಾಸ ಕಾಡಲು ಶುರುವಾಯಿತು. ಆಶ್ರಮಕೆ ಹಿಂದಿರುಗಿದ.

ಅಪ್ಸರಲ್ಲಿ ಮಿಂಚಿಹೋಗಿತ್ತು. ವಿಕೃತವಾಯಿತೆ ಎನ್ನ ಬದುಕು ಎಂದು ಅಹಲ್ಯೆ ಹಲುಬಿದಳು. ಕುಪಿತಗೊಂಡರೂ ಗೌತಮ ಸದ್ಯಕ್ಕೆ ಮೌನಧರಿಸಿದ. ಸುದ್ದಿ ಹರಡಿತು. ತರುವಾಯ ಸಭೆ ಸೇರಿದಾಗ ದೇವೇಂದ್ರನ ದುಷ್ಕೃತ್ಯವನು ಸಕಲ ಋಷಿಗಳ ಮುಂದಿಟ್ಟು ದೇವೇಂದ್ರನಿಗಾವ ಶಿಕ್ಷೆ? ನೀವೇ ಹೇಳಿ ಎನ್ನುತಾನೆ. ಇಡೀ ಸಭೆ ಗೌತಮನ ನ್ಯಾಯದ ಬೇಡಿಕೆಗೆ ಕಿವುಡಾಗುತ್ತದೆ. ಈ ಕಥೆಯನ್ನು ವಿಶ್ವಾಮಿತ್ರನಿಂದ ಕೇಳುತ್ತಿದ್ದ ಲಕ್ಷ್ಮಣ 'ಗೌತಮಾಶ್ರಮದಲ್ಲಿ ತಾವೂ ಪ್ರತ್ಯಕ್ಷದರ್ಶಿಯಾಗಿದ್ದು, ಏಕೆ ಮೌನಧರಿಸಿದಿರಿ?' ಎಂದು ತೀಕ್ಷ್ಣವಾಗಿ ಪ್ರಶ್ನಿಸುತ್ತಾನೆ. ಉತ್ತರವಾಗಿ ವಿಶ್ವಾಮಿತ್ರ 'ಪದವಿ ಮೋಹಕೆ ಸಿಲುಕಿ ಕರ್ತವ್ಯವನ್ನೇ ಮರೆತೆ' ಎನ್ನುತ್ತಾನೆ. ಈ ಸಮಾಜದಲ್ಲಿ ಹಣ, ಅಧಿಕಾರ, ಅಂತಸ್ತು ಇರುವವರು ಏನೇ ಅತ್ಯಾಚಾರ ಮಾಡಿದರೂ ಅವರ ವಿರುದ್ಧ ಯಾರೂ ದನಿ ಎತ್ತದೆ ಇರುವುದು ಇದೇ ಕಾರಣಕ್ಕೆ. ವೀರಪ್ಪಮೊಯಿಲಿಯವರು ತಮ್ಮ ಇಡೀ ಕಾವ್ಯದಲ್ಲಿ ತುರ್ತುಪರಿಸ್ಥಿತಿಯ ವಿರುದ್ಧ ದನಿ ಎತ್ತದೆ ಇರುವುದನ್ನು ನೋಡಿದರೆ ಬಹುಶಃ ಇದೇ ಕಾರಣಕ್ಕೆಂಬ ಅನುಮಾನ ಓದುಗರ ಮನದಲ್ಲಿ ಇಣುಕದೆ ಇರಲಾರದು.

ಅಮಿತಲಾಭನೆಂಬ ಮುನಿಯು 'ಅಹಲ್ಯೆಯ ಚಾಂಚಲ್ಯ ಆರ್ಯಕುಲಕ್ಕೆ ಕೇಡು. ಅವಳನ್ನೇ ದಂಡಿಸಬೇಕು, ಇಂದ್ರನನ್ನು ಕ್ಷಮಿಸಬೇಕು ಇಲ್ಲದಿದ್ದರೆ ದೇವಜಾತಿ ಮತ್ತು ಆರ್ಯಶಕ್ತಿಯ ನಡುವೆ ವೈರತ್ವ ಬೆಳೆದುಬಿಡುತ್ತದೆ' ಎನ್ನುತ್ತಾನೆ. ಪುರುಷಪ್ರಧಾನ ಸಮಾಜದಲ್ಲಿ ಪುರುಷ ತಪ್ಪೆಸಗಿದರೂ ಶಿಕ್ಷೆ ಅನುಭವಿಸಬೇಕಾದವಳು ಹೆಣ್ಣೇ ಎಂಬುದನ್ನು ಅಮಿತಲಾಭನ ಮಾತು ಎತ್ತಿ ತೋರಿಸುತ್ತದೆ.

ಅಹಲ್ಯೆ ಗೌತಮನಿಗೆ ಹೇಳುತ್ತಾಳೆ– ನನ್ನ ಬದುಕಿನ ಪರ್ವ ಮುಗಿದುಹೋಯಿತು. ನನ್ನನ್ನು ಏಕಾಂತದಲಿ ಬಿಡು ಪರಿತಾಪದಲ್ಲಿ ಕಠಿಣ ತಪವ ಮಾಡುವೆನು. ಅದೇ ದಿವ್ಯೌಷಧ ನನಗೆ ಎಂದು ಹೇಳಿ ತನ್ನ ಸುತ ಶತಾನಂದನ ಬದುಕಿನ ಪಥಕ್ಕೆ ಬಂಡೆಯಾಗಲಿಚ್ಛಿಸದೆ ಅವನ ಶಿಕ್ಷಣಕ್ಕಾಗಿ ಅಲ್ಲಿಂದ ದೂರ ಕರೆದುಕೊಂಡು ಹೋಗಲು ಹೇಳುತ್ತಾಳೆ. ನಂತರ ಗೌತಮ ಮುನಿಯು 'ಈ ದೇವೇಂದ್ರ ಪೂಜಾರ್ಹನಾಗದಿರಲಿ' ಎಂದು ಶಾಪವಿತ್ತು ಸುತ ಶತಾನಂದನನ್ನು ಹೆಗಲಿಗೇರಿಸಿ ಹೊರಟು ಹೋಗುತ್ತಾನೆ.

ಮಹಾನ್ವೇಷಣಂ ಕಾವ್ಯದಲ್ಲೇ ಅಹಲ್ಯಾ ಪ್ರಸಂಗವು ವಿನೂತನವಾದ ಕಲ್ಪನೆಯಿಂದ ಕೂಡಿದುದಾಗಿದೆ. "ಸಾವಿರ ಪಂಕ್ತಿಗಳ ಅಹಲ್ಯೆಯ ಕಥೆ ಪು.ತಿ.ನ.ಅವರ 'ಅಹಲ್ಯೆ' ಗೀತನಾಟಕವನ್ನು ಸ್ಮರಣೀಯವಾಗಿಸುತ್ತದೆ"[೩೫] ಎಂದು ಡಾ.ಜಿ.ಎಂ.ಹೆಗಡೆ ಅಭಿಪ್ರಾಯಪಟ್ಟಿದ್ದಾರೆ. ಪೌರಾಣಿಕತೆಯ ಮೆರಗನ್ನು ಉಳಿಸಿಕೊಂಡು ವಿನೂತನವಾಗಿ ಕಲ್ಪಿಸಿ ಕಥಾಂತರಿಸಿರುವ ರೀತಿ ಅನನ್ಯವಾಗಿದೆ. ವಿನೂತನವಾದ ಕಲ್ಪನೆಯ ಅಂಶಗಳು ಈ ರೀತಿ ಇವೆ.

೧. ಗೌತಮಾಶ್ರಮದಲ್ಲಿ ನಡೆದ ಬ್ರಹ್ಮಸಮ್ಮೇಳನದಲ್ಲಿ ಪಾಲ್ಗೊಳ್ಳಲು ಹೋಗಿದ್ದುದ್ದೇ ಕಾರಣವಾಗಿ ಇಂದ್ರನು ಅಹಲ್ಯೆಯಲ್ಲಿ ಮೋಹಗೊಂಡನು.

೨. ಮುದ್ಗಲ ಮಹರ್ಷಿಯ ಸುತೆಯಾಗಿ ಜನಿಸಿದ ಅಹಲ್ಯೆಗೆ, ಬಾಲ್ಯದಿಂದಲೇ ಮಗಳ ಬೆಡಗನ್ನು ಕಂಡು "ಇವಳ ಲಾವಣ್ಯಕ್ಕೆ ಇಂದ್ರನಲ್ಲದೆ ಸರಿಸಾಟಿ ಆರಿಹರು? ಅವನ ಅರಮನೆಗಿವಳು ಸೇರಿ ಅಂದಣವೇರಿ ವಿಜೃಂಭಿಸುತ್ತಿರಬೇಕು" ಎಂದು ಹೇಳಿದ್ದು ಅಹಲ್ಯೆಯ ಅಂತರಂಗದಲ್ಲಿ ಇಂದ್ರ ವೈಭವವನ್ನು ಕುರಿತ ವರ್ಣಮಯ ಚಿತ್ರವೊಂದು ಗರಿಗೆದರಿ ನಿಂತಿತ್ತು.

೩. ಗೌತಮನು ಇಂದ್ರನನ್ನು ಶಪಿಸಿದನೇ ಹೊರತು ಅಸಹಾಯಕಳು, ಅಬಲೆ ಎಂಬ ನೆಲೆಯಲ್ಲಿ ಅಹಲ್ಯೆಯನ್ನು ಶಪಿಸಲಿಲ್ಲ. ಅವಳೇ ಪತಿಯನ್ನು ಪುತ್ರ ಸಮೇತ ಅನ್ಯನೆಲೆಗೆ ಬೀಳ್ಕೊಟ್ಟು, ತಾನಿದ್ದ ಕುಟೀರದಲ್ಲಿಯೇ ಅವಳು ದಿವ್ಯ ತಪಸ್ವಿನಿಯಾಗಿ ದಿನಗಳೆದು ಪರಿಶುದ್ಧಳಾದಳು.

– ಆಧುನಿಕ ವಾಸ್ತವ ಜಗತ್ತಿನ ಮಾನವೀಯತೆ, ಅಂತಃಕರಣ, ಮಹಿಳಾ ಶೋಷಣೆಯ ಪ್ರಜ್ಞೆಯನ್ನು ಒಳಗೊಂಡ ಗೌತಮನ ಚಿತ್ರ ಇಲ್ಲಿ ಮೂಡಿಬಂದಿದೆ.

– ಎಲ್ಲ ಅರ್ಹತೆ ಹೊಂದಿದ್ದರೂ ಪಟ್ಟಭದ್ರ ಹಿತಾಸಕ್ತಿಗಳ ರಾಜಕೀಯಕ್ಕೆ ಬಲಿಯಾಗುವ ಗೌತಮ ಅಹಲ್ಯೆ ಚಿತ್ರಣ

– ದುಷ್ಟತನದ ವಿರುದ್ಧ ಹೋರಾಡಲಾಗದ ಏಕಾಂಗಿತನ ಮತ್ತು ಅಸಹಾಯಕತನದ ಸ್ಥಿತಿ ಗೌತಮನದಾಗಿರುವುದು.

ಸೀತಾ ಪ್ರಕರಣದಲ್ಲಿ – ವಿಶ್ವಾಮಿತ್ರ ಮುನಿಯು ಜನಕಜೆಯ ಕಥೆಯನ್ನು ಹೇಳಿದಾಗ 'ವನಜೆಯ ಮೇಲೆ ಅತ್ಯಾಚಾರ, ಅಹಲ್ಯೆಗೆ ಜಗದ ಬಹಿಷ್ಕಾರ, ಈಗ ಸೀತೆಯ ಸರದಿಯೆ ಎಂದು ಇನ್ನೂ ಮುಂತಾಗಿ ಪ್ರತಿಕ್ರಿಯಿಸುವ ರಾಮನ ಮಾತುಗಳಲ್ಲಿ ಆಧುನಿಕ ಸಮಾಜದಲ್ಲಿ ಅನಿಮಿತ್ತವಾಗಿ ಹುಟ್ಟಿದ ಮಗುವನ್ನು ಅದರಲ್ಲೂ ಹೆಣ್ಣುಮಗುವನ್ನು ಬೀದಿಪಾಲು ಮಾಡುವ ಮಾತೆಯರು, ವಯಸ್ಸಿಗೆ

ಬಂದರೂ ಮದುವೆಯ ಭಾಗ್ಯ ದೊರಕದ ಹೆಣ್ಣು, ಅನಾಥ ಮಕ್ಕಳು ವೃದ್ಧಿಸುತ್ತಿರುವ ಸಮಾಜ ಇವೆಲ್ಲವೂ ವ್ಯಕ್ತವಾಗುತ್ತವೆ.

ವಿಶ್ವಾಮಿತ್ರ ರಾಮನನ್ನು ಕುರಿತು 'ದೌರ್ಜನ್ಯ ಕಾನನಕೆ ಧರ್ಮ ರಕ್ಷಣೆಗೆಂದು ಕರೆದುತಂದೆ. ಜನಕನ ಪ್ರತಿಜ್ಞೆಯೆ ನನ್ನನ್ನು ಆಹ್ವಾನಿಸಿದೆ ಇಲ್ಲಿ. ಸೀತೆ ರೂಪದಲ್ಲಿ ಗುಣದಲ್ಲಿ ಅದ್ವೀತಿಯಳು. ನೀನು ಅವಳನ್ನು ವರಿಸುವುದರ ಮೂಲಕ ಜನಕ-ದಶರಥ ಸಾಮ್ರಾಟರ ನಡುವೆ ಬೆಳದಿರುವ ವೈರತ್ವವನ್ನು ತೊಡೆದು ಹಾಕಬೇಕು' ಎನ್ನುತ್ತಾನೆ. ಉತ್ತರವಾಗಿ '_ ನಾನರಿಯದ ವಧುಸೀತೆ, ಅವಳರಿಯದ ವರ ನಾನು, ಒಪ್ಪುವುದೆಂತು? ಇಚ್ಛೆ ಅನಿಚ್ಛೆಗಳ ತುಡಿತವಿಲ್ಲವೆ ರಾಜಕುಮಾರಿಗೆ ಎನ್ನುವ ರಾಮನ ಮಾತುಗಳು ಹಿಂದಿನ ಕಾಲದಲ್ಲಿ ಹಿರಿಯರು ನೋಡಿ ನಿಶ್ಚಯಿಸಿದ ಮದುವೆಗಳು; ಇಷ್ಟವಿರಲಿ, ಇಲ್ಲದಿರಲಿ ಅದಕ್ಕೆ ತಕ್ಕಂತೆ ಬಾಳಬೇಕಾಗಿತ್ತು. ಇಲ್ಲ ಬಲಿಪಶುವಾಗಬೇಕಿತ್ತು. ಅದು ಸರಿಯಲ್ಲ, ಹೆಣ್ಣಿಗೂ ತನ್ನದೇ ಆದ ಆಸೆ ಅಕಾಂಕ್ಷೆಗಳಿರುತ್ತವೆ. ಅದಕ್ಕೆ ಮನ್ನಣೆ ಕೊಡಬೇಕು ಎಂಬುದೇ ಆಗಿದೆ. ಇಲ್ಲಿನ ರಾಮನ ಪಾತ್ರ ಆಧುನಿಕ ಸಮಾಜದ ಆದರ್ಶ ಯುವಕನಂತಿದೆ.

ಮೂಲದಲ್ಲಿ ಜನಕ-ದಶರಥರಿಗೆ ವೈರತ್ವವಿಲ್ಲ. ಆದರೆ ಇಲ್ಲಿ ಇಬ್ಬರಿಗೂ ವೈರತ್ವವಿದೆ ಎಂದು ತೋರಿಸಿ ಇವರಿಬ್ಬರ ವೈಮನಸ್ಸಿನಿಂದ ಮೂರನೆಯ ರಕ್ಕಸಕುಲ ಹೇಗೆ ಪ್ರಬಲವಾಗಿ ಸುಂದರ ಸಮಾಜವನ್ನು ನುಂಗುತ್ತಿದೆ ಎಂಬ ಕಲ್ಪನೆಯಿದೆ.

ವಿಶ್ವಾಮಿತ್ರನು ಶಿವಧನಸ್ಸನ್ನು ಕುರಿತು 'ರಕ್ಕಸವರ್ಗಕದು ವಶವಾಗೆ ನಾಶವಪ್ಪುದು ಜಗವು' ಎನ್ನುವ ಮಾತುಗಳಲ್ಲಿ ಶಿವಧನಸ್ಸು ಇಂದಿನ ಅಣ್ವಸ್ತ್ರಗಳ ಸಂಕೇತವಾಗಿದ್ದು ಅಣ್ವಸ್ತ್ರಗಳಿಂದ ಉಂಟಾಗುವ ಆಧುನಿಕ ಜಗತ್ತಿನ ಭೀಕರ ದುರಂತವನ್ನು ತಪ್ಪಿಸಬೇಕು ಎಂಬ ಹಂಬಲ ಕಂಡುಬರುತ್ತದೆ.

ಮುಂದಿನ ಪ್ರಸಂಗಗಳಾದ ರಾಮಸೀತಾವಿವಾಹ, ದಶರಥನಿಗೆ ಉಲ್ಕಾಪಾತದರ್ಶನ, ರಾಮನಿಗೆ ಪಟ್ಟಾಭಿಷೇಕದ ಸಿದ್ಧತೆ, ಮಂಥರೆ ಕೈಕೆಗೆ ಚಾಡಿಹೇಳಿ ಕೊಡುವುದು ರಾಮ ವನವಾಸಕ್ಕೆ ಹೊರಡುವುದು ಎಲ್ಲವೂ ಮೂಲಕ್ಕೆ ಬದ್ಧವಾಗಿಯೇ ಕಥಾ ಸರಣಿ ಹರಿಯುತ್ತದೆ. ಆದರೆ ಒಂದು ಸಣ್ಣ ಘಟನೆ ಗಮನಿಸಬೇಕಾದದ್ದು. ದಶರಥ ಕೈಕೆಯ ಭಾಷೆಗೆ ಕಟ್ಟುಬಿದ್ದಿದ್ದಾನೆ. ಕೈಕೆಯ ಮಾತಿನಂತೆ

ನಡೆದರೆ ಕ್ರಮದ ಉಲ್ಲಂಘನೆಯಾಗುತ್ತದೆ. ಇಲ್ಲಿದಿದ್ದರೆ ವಚನಭ್ರಷ್ಟನಾಗಬೇಕಾಗುತ್ತದೆ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಸಿಲುಕಿದ ದಶರಥನು ಲಕ್ಷ್ಮಣನನ್ನು ಕುರಿತು, ಸೌಮಿತ್ರಿ, ತಂದೆಯೆಂಬ ಹಿರಿಮೆಯನ್ನು ಕಳೆದುಕೊಂಡಿದ್ದೇನೆ ನೀನು ನನ್ನ ಬಂಧಿಸಿ ಸೆರೆಮನೆಗೆ ಹಾಕಿ, ನೀನೇ ಶ್ರೀರಾಮಪಟ್ಟಾಭಿಷೇಕವನು ಮಾಡು. ಅದರ ಮೂಲಕ ರಾಜನೀತಿಯನ್ನೂ ಪ್ರಜಾಸತ್ತೆಯನ್ನೂ ಎತ್ತಿಹಿಡಿ ಎನ್ನುತ್ತಾನೆ. ಮಾತು ಕೊಟ್ಟವನು ಅಧಿಕಾರ ಕಳೆದುಕೊಂಡು ಸೆರೆಮನೆಗೆ ಹೋಗಿ ಕುಳಿತರೆ ಕೊಟ್ಟ ಭಾಷೆಯನ್ನು ನಡೆಸುವುದಾದರೂ ಎಂತು, ಇಲ್ಲಿನ ರಾಜಕೀಯ ಪ್ರಜ್ಞೆ ಅದ್ಭುತವಾದದ್ದು.

ರಾಮಲಕ್ಷ್ಮಣರು ವನವಾಸಕ್ಕೆ ಹೊರಟ ಸಂದರ್ಭದಲ್ಲಿ ಸುಮಂತ್ರನು ಬಂದು ಅಯೋಧ್ಯೆಯ ಪ್ರಜೆಗಳು ಭರತನ ಆಳ್ವಿಕೆಗೆ ಸಮ್ಮತಿಸದೆ ಬಂಡಾಯವೆದಿದ್ದಾರೆ. ಭರತನು ಊರಿನಲ್ಲಿ ಇಲ್ಲದಿದ್ದರೂ ಪ್ರಜಾರೋಷ ಸುಡಬಹುದು. ಅವನನ್ನು; ಕೈಕೆಯನ್ನು ಜೀವ ಸಹಿತ ದಹಿಸಿಬಿಡಬೇಕು, ಎಂದು ಗಲಾಟೆ ಮಾಡುತ್ತಿದ್ದಾರೆ ಎನ್ನುತ್ತಾನೆ. ಈ ಮಾತುಗಳು ಇಂದಿನ ರಾಜಕೀಯದಲ್ಲಿ ಏನೆಲ್ಲ ಮಿಂಚಿನಂತೆ ನಡೆದು ಹೋಗಬಹುದು ಎನ್ನುವ ಸೂಚನೆಯಿದೆ. ಅಯೋಧ್ಯೆಯ ಪ್ರಜೆಗಳ ಬಂಡಾಯದ ಕಿಡಿಯು; ಇಂದಿನ ರಾಜಕೀಯ ಬೆಳವಣಿಗೆಯಲ್ಲಿ ನಡೆಯುವ ಕ್ಷಿಪ್ರಕ್ರಾಂತಿ, ದೊಂಬಿ, ಗಲಭೆಗಳನ್ನು ನೆನಪಿಸುತ್ತದೆ.

ಚಿತ್ರಕೂಟದಲ್ಲಿ ನೆಲೆಸಿದ ಸಂದರ್ಭದಲ್ಲಿ ಸೀತೆಗೆ 'ಸುಮೇಧೆ' ಎಂಬ ಹೆಣ್ಣುಮಗಳ ಪರಿಚಯವಾಗುತ್ತದೆ. ಆಕೆಯ ತಂದೆಗೆ ಒಂದಿಷ್ಟು ಹಣ ಕೊಟ್ಟು ಯಾರೋ ಒಬ್ಬ ಧನಿಕ, ಅವಳ ತನುಮನವ ವಿಕ್ರಯ ಮಾಡಿಕೊಂಡಿರುತ್ತಾನೆ. ಸುಮೇಧೆ ನೀರು ತರಲು ಬಂದಾಗ ಅವಳ ಕಂಕುಳಲ್ಲಿದ್ದ ಗಡಿಗೆಯನ್ನು ನೋಡಿ ತನಗೂ ಆ ರೀತಿಯ ಗಡಿಗೆ ಬೇಕೆನ್ನುತ್ತಾಳೆ. ಸುಮೇಧೆ ಮಾರನೆಯ ದಿನವೇ ಮಡಕೆಕಾರನ ಕರೆತರುತ್ತಾಳೆ. ಆತ ನೋಡಲು ಸುಂದರ ಯುವಕ. ಆತನ ಹೆಸರು ಕೇಳಿದಾಗ ಅವನ ಮಾತಿನಿಂದ ಅನಾಥನೆಂದು ತಿಳಿಯುತ್ತದೆ. ಆಗ ಸೀತೆಗೆ ತನ್ನ ಜನನದ ಪೂರ್ವ ವಾರ್ತೆಯ ನೆನಪಾಗಿ ಸಾವಿರ ಚೇಳುಗಳು ಒಮ್ಮೆಗೇ ಕುಟುಕಿದ ಅನುಭವವಾಗುತ್ತದೆ. ನಂತರ ಸೀತೆಯು ಸುಮೇಧೆಯ ತಂದೆ ಜುಂಗುರನನ್ನೂ ಕುಂಭಕಾರರನ್ನು ಕರೆಸಿ ಸಹಭೋಜನಕ್ಕೆ ಅಣಿ ಮಾಡಿದಾಗ ಅವರು ಒಪ್ಪದೆ ತಮ್ಮ ದಾಸ್ಯದ ಚರಿತ್ರೆಯನ್ನು ವಿವರಿಸುತ್ತಾರೆ. ಅಲ್ಲದೆ ಆರ್ಯರ ಜೊತೆ ಸಹಪಂಕ್ತಿ ಭೋಜನವು ನಮಗೆ ಬಿಡುಗಡೆಯನ್ನು ತರುವುದೆ? ನೀವು ದಕ್ಷಿಣಕ್ಕೆ ಬಂದಿರುವುದು ನಿಮ್ಮ ರಾಜ್ಯವನ್ನು ವಿಸ್ತರಿಸಲು. ನೀವು

ಹೇಳುವ ಪ್ರಜಾಪ್ರಭುತ್ವಕ್ಕೆ ಶಾಂತಿ ಸ್ಥಾಪನೆಗೆ ಬೆಲೆ ಅಪಾರ ತೆರಬೇಕಾಗುತ್ತದೆ. ಅದು ನಮಗೆ ಸಾಧ್ಯವಿಲ್ಲವೆಂದು ನಿರಾಕರಿಸುತ್ತಾರೆ. ಲಕ್ಷ್ಮಣ ಅವರನ್ನು ಒಪ್ಪಿಸಲು ತಾವು ಬಂದ ಕಾರಣ, ಈ ಹಿಂದೆ ನಿಷಾದರಿಗೆ ತಾವು ಒದಗಿಸಿಕೊಟ್ಟ ಪ್ರಜಾಸತ್ತೆ ಎಲ್ಲವನ್ನೂ ವಿವರಿಸಿ, ಈಗ ನಿಮಗೆ ಮುಕ್ತ ಜೀವನ ನೀಡುವುದೇ ನಮ್ಮ ಗುರಿಯಾಗಿದೆ ಎಂದು ಹೇಳುತ್ತಾನೆ. ನಂತರ ಕುಂಭಕಾರನಿಗೆ 'ಮುಕುರ' ಎಂದು ನಾಮಕರಣ ಮಾಡುತ್ತಾನೆ. ಎಲ್ಲರಿಗೂ ಸಮರವಿದ್ಯೆ ಕಲಿಸಿ ತಾನೇ ನಿರ್ಮಿಸಿದ ಶಸ್ತ್ರಶಾಲೆಗೆ ಮುಕುರನನ್ನು ರಕ್ಷಕನನ್ನಾಗಿ, ಗುಪ್ತಚರ ಜಾಲಕೆ ಜುಂಗುರನನ್ನು ರೂವಾರಿಯಾಗಿ ಮಾಡುತ್ತಾನೆ.

ಜುಂಗುರ ನಿರಾಕರಿಸಲು ಕಾರಣ ಒಂದು (ಅ)ವ್ಯವಸ್ಥೆಗೆ ಒಗ್ಗಿಹೋಗಿರುವ ಸಮಾಜ ಬದಲಾವಣೆ ಬಯಸಲು ಹಿಂದು ಮುಂದು ನೋಡುತ್ತದೆ. ಅವರಿಗೆ ಶೋಷಣೆಯಲ್ಲೇ ಶಾಂತಿ, ದಾಸ್ಯದ ಬಲೆಯೇ ನೆಮ್ಮದಿಯ ನೆಲೆಯಾಗಿ ಬಿಟ್ಟಿರುತ್ತದೆ.

ಸೀತೆಯು ಸುಮೇಧೆ ಮತ್ತು ಕೋಲ್ ಎಂಬ ಭಿಲ್ಲ ಬಾಲೆಯರಿಗೆ ಕರಕುಶಲ ಕಲೆಗಳನ್ನೂ ಮತ್ತು ಶಾಸ್ತ್ರಗಳ ಸಾರವನ್ನೂ ಕಲಿಸುತ್ತಾಳೆ. ಈ ಪ್ರಸಂಗದಲ್ಲಿ ಗಾಂಧಿ ಕಂಡ ಕನಸು ಸ್ವರಾಜ್ಯ ಕಲ್ಪನೆ-ಸ್ಥಳೀಯ ಆಡಳಿತ, ಪಂಚಾಯತ್ ರಾಜ್ಯ ವ್ಯವಸ್ಥೆಯನ್ನೂ ಮತ್ತು ಸ್ಥಳೀಯ ಉತ್ಪನ್ನ-ಗುಡಿಕೈಗಾರಿಕೆಗಳಿಗೆ ಆದ್ಯತೆ ಇವೆಲ್ಲವನ್ನೂ ಕಾಣಬಹುದಾಗಿದೆ.

ವನವಾಸದಲ್ಲಿದ್ದ ರಾಮಾದಿಗಳನ್ನು ಹಿಂದಿರುಗಿ ಕರೆದೊಯ್ಯಲು ಭರತ ಸೈನ್ಯ ಸಮೇತನಾಗಿ ಬರುತ್ತಾನೆ. ಅವನ ಸೈನ್ಯವನ್ನು ನೋಡಿದ್ದೆ ತಡ ಕೆಲವು ರಾಕ್ಷಸರು ಇದೆಲ್ಲ ಮುನಿಗಳ ಪಿತೂರಿ ಎಂದು ಮುನಿ ಕಾಲಿಕಾಚಾರ್ಯ ಮತ್ತು ಅವನ ಐವರು ಶಿಷ್ಯರಾದ ಜಯ, ಆನಂದ, ತ್ರಿಲೋಚನ, ಕುಶಲ, ಶಶಾಂಕರ ಮೇಲೆ ಆಕ್ರಮಣ ಮಾಡುತ್ತಾರೆ. ಈ ಕಾಲಿಕಾಚಾರ್ಯನ ಶಿಷ್ಯರೆಲ್ಲರೂ ಲಕ್ಷ್ಮಣನಿಂದ ಬಿಲ್ವಿದ್ಯೆ ಕಲಿತು ದೀಕ್ಷೆ ಪಡೆದ ಬ್ರಹ್ಮಚಾರಿಗಳು. ಆ ಕಾರಣದಿಂದ ರಾಕ್ಷಸರಿಂದ ಆಕ್ರಮಣಕ್ಕೆ ಒಳಗಾಗುತ್ತಾರೆ. ಆಗ ಕಾಲಿಕಾಚಾರ್ಯ ತನ್ನ ಶಿಷ್ಯರಿಗೆ 'ಈ ಬಿಲ್ವಿದ್ಯೆಯ ದೀಕ್ಷೆ ನಮಗಲ್ಲ. ಈ ಮಾರ್ಗವಿಡಿದರೆ ನಮ್ಮ ತಪವು ಸಾಗುವುದಿಲ್ಲ. ಎಲ್ಲವನ್ನು ಬಿಟ್ಟು ಬೇರೆಡೆಗೆ ಹೋಗೋಣ ಬನ್ನಿ' ಎಂದಾಗ ಶಿಷ್ಯರು 'ಸೌಮಿತ್ರಿ ಕೊಟ್ಟ ದೀಕ್ಷೆಯನ್ನು ತೊರೆಯಲು ಸಾಧ್ಯವೇ ಇಲ್ಲ'ವೆಂದು ನಿರಾಕರಿಸಿ ಬಿಡುತ್ತಾರೆ. ಕೊನೆಗೆ ಕಾಲಿಕಾಚಾರ್ಯನೇ ಅಲ್ಲಿಂದ ನಿರ್ಗಮಿಸುತ್ತಾನೆ. ಇಲ್ಲಿ ಮೊಯಿಲಿಯವರು ಸೌಮಿತ್ರಿಯ ವಿಕ್ರಮ ಮತ್ತು

ಸಂಘಟನಾಚಾತುರ್ಯವನ್ನು ಸಾರಲು ಕಾಲಿಕಾಚಾರ್ಯ ಮತ್ತು ಅವರ ಶಿಷ್ಯರ ಪ್ರಸಂಗವನ್ನು ಸೃಷ್ಟಿಸಿ ಕೊಂಡಿದ್ದಾರೆ.

ಚಿತ್ರಕೂಟದ ಸಂದರ್ಭದಲ್ಲಿ ಸೀತೆಯು ಪ್ರಕೃತಿಯ ಸೊಬಗನ್ನು ಸವಿಯುತ್ತಾ 'ಸೊಂಪಾಗಿ ಬೆಳೆದಿರುವ ಈ ಮರಗಳು, ಅಡ್ಡಿಯಿಲ್ಲದೆ ಹರಿಯುವ ಈ ನದಿಗಳು ಎಷ್ಟು ಚೆನ್ನ; ನಾಡಿನಲ್ಲಾದರೆ ಮರಗಿಡಗಳನ್ನು ಕಡಿವರು, ನದಿಗೆ ಅಣೆಕಟ್ಟು ಕಟ್ಟಿ ಪರಿಸರ ನಾಶಮಾಡುವರು ಎನ್ನುತ್ತಾಳೆ. ಆದರೆ ಮೊಯಿಲಿಯವರ ರಾಮ ಅದನ್ನು ಸಮರ್ಥಿಸಿಕೊಳ್ಳುತ್ತ ನದಿಗೆ ಅಣೆಕಟ್ಟು ಕಟ್ಟುವುದೇ ಜನಹಿತಕ್ಕೆ. ಆದರೆ ಅದು ಮಿತಿಮೀರಬಾರದು ಎನ್ನುತ್ತಾನೆ. ಅಷ್ಟೇ ಅಲ್ಲದೆ ಇಂದಿನ ಗಣಿವಿವಾದದ ಸಂದರ್ಭವನ್ನು ನೆನಪಿಗೆ ತರುವಂತೆ ಮೊಯಿಲಿಯವರು ರಾಮನ ಮೂಲಕ ಹೀಗೆ ಹೇಳಿಸುತ್ತಾರೆ. 'ಈಗ ಭೂಮಿಯಲ್ಲಿ ಚಿನ್ನವಿದ್ದರೆ ಅದಕ್ಕೆ ಸಾರ್ಥಕತೆಯೆಲ್ಲಿ? ಗಣಿಯ ರೂಪಿಸಬೇಕು. ಅದಿರನ್ನು ತೆಗೆದು ಅಪ್ಪಟ ಬಂಗಾರ ಮಾಡಿದರೆ ಅದರ ಮೌಲ್ಯವರ್ಧಿಸುತ್ತದೆ. ಅದುವೇ ಪ್ರಕೃತಿಗೆ ಧರ್ಮ ಪರೋಪಕಾರದ ಮರ್ಮ' ರಾಮನ ಈ ಮಾತುಗಳಲ್ಲಿ ಒಂದು ದೇಶವನ್ನು ಅಭಿವೃದ್ಧಿಪಥಕ್ಕೊಯ್ಯುವ ನಿಷ್ಠಾವಂತ ರಾಜಕಾರಣಿಗಳು ಪ್ರಕೃತಿಯಲ್ಲಿ ಲಭ್ಯವಿರುವ ಸಂಪತ್ತನ್ನು; ಪ್ರಕೃತಿಗೆ ಧಕ್ಕೆಯಾಗದ ಹಾಗೆ ಹೇಗೆ ಹಿತ–ಮಿತವಾಗಿ ಬಳಸಿಕೊಳ್ಳಬೇಕೆಂಬುದು ಸೂಚ್ಯವಾಗಿ ತಿಳಿದುಬರುತ್ತದೆ.

ಭರತ ರಾಮನನ್ನು ರಾಜ್ಯಕ್ಕೆ ಹಿಂದಿರುಗುವಂತೆ ಯಾಚಿಸಲು ಬರುವುದು, ತಂದೆಯ ಮರಣವಾರ್ತೆ ತಿಳಿದು ವಶಿಷ್ಠರ ಅಪ್ಪಣೆಯಂತೆ ಮತ್ತೊಮ್ಮೆ ತಂದೆಗೆ ಉತ್ತರಕ್ರಿಯೆ ನೆರವೇರಿಸುವುದು, ರಾಮ ಅಯೋಧ್ಯೆಗೆ ಹಿಂದಿರುಗಲು ಒಪ್ಪದೇ ಇದ್ದಾಗ ಪಾದುಕಾ ಪೀಠಗಳನ್ನು ಪಡೆದು ಭರತ ರಾಜ್ಯಭಾರಮಾಡಲು ಹಿಂತಿರುಗುವುದು. ಅಶ್ವಯತಿ ಮುನಿವರನ ನೇತೃತ್ವದಲ್ಲಿ ಮುನಿವರರೆಲ್ಲ ರಾಮನೆಡೆಗೆ ಬಂದು ಖರ–ದೂಷಣರು ಕೊಡುವ ಹಿಂಸೆಯ ಬಗ್ಗೆ ದೂರು ಕೊಡುವುದು. ಅತ್ರಿ–ಅನಸೂಯರ ಆಶ್ರಮಕ್ಕೆ ಪ್ರವೇಶ ಮಾಡಿದ್ದು. ಅನುಸೂಯೆ ಸೀತೆಗೆ ಹದಿಬದೆಯ ಧರ್ಮವನ್ನು ಉಪದೇಶಿಸುವುದು, ಶ್ರೀರಾಮನಿಂದ ವಿರಾಧ ರಕ್ಕಸನ ಶಾಪವಿಮೋಚನೆ ಇದೆಲ್ಲವನ್ನು ಮೂಲದಲ್ಲಿದ್ದಂತೆಯೇ ಬಳಸಿಕೊಂಡಿದ್ದಾರೆ.

ಶರಭಂಗ ಮುನಿಯ ಪ್ರಸಂಗವೂ ಮೂಲಕ್ಕಿಂತ ಸ್ವಲ್ಪ ಭಿನ್ನವಾಗಿದೆ. ಮೂಲದಲ್ಲಿನ ಶರಭಂಗ ಮುನಿಯು ತಪಗೈದು ತೇಜಸ್ಸಿನ ಪ್ರಭೆಯನ್ನು ಪಡೆದವನು. ಅವನನ್ನು ಬ್ರಹ್ಮಲೋಕಕ್ಕೆ ಕರೆದೊಯ್ಯಲು ಇಂದ್ರ ಮೊದಲಾದವರು ಬಂದು ಆತನಿಗೆ ಪೂಜಿಸಿ ನಮಿಸಿ ಗೌರವ ತೋರುತ್ತಾರೆ. ಆದರೆ ಶರಭಂಗರು ಇಲ್ಲೇ ಸಮೀಪದಲ್ಲಿ ಬಂದಿರುವ ವರಶ್ರೇಷ್ಠನಾದ ಶ್ರೀರಾಮನನ್ನು ಕಾಣುವವರೆಗೂ ನಾನು ಬ್ರಹ್ಮಲೋಕಕ್ಕೆ ಬರಲಾರೆ ಎನ್ನುತ್ತಾರೆ.

ಮೊಯಿಲಿಯವರ ಕಾವ್ಯದಲ್ಲೂ ತಪೋಧನ ಶರಭಂಗರು ರಾಮದರ್ಶನಕ್ಕಾಗಿ ಜೀವ ಹಿಡಿದು ನಿಂತವರೆ, ಬ್ರಹ್ಮಾನಂದ ಪದವಿ ಸೇರಲು ಅರ್ಹರೆ. ಆದರೆ ಭರತವರ್ಷದಲ್ಲೆಲ್ಲಾ ಸಂಚರಿಸಿ ಬಡವರ ನಿರ್ಗತಿಕರ ಕಷ್ಟಕಾರ್ಪಣ್ಯಗಳು ಮತ್ತು ಮೌಢ್ಯವನ್ನು ಕಂಡು ಮರುಗಿದವರು. ಜನಸೇವೆಯ ಕಳಕಳಿಯು ಇಲ್ಲವಾದರೆ ಸರ್ವವೂ ವ್ಯರ್ಥ ಎಂದರಿತವರು. 'ಹಸಿದ ಹೊಟ್ಟೆಗೆ ರುಚಿಸದು ಅಧ್ಯಾತ್ಮ' ಎಂಬ ಅನುಭವದ ನುಡಿಗಳನ್ನು ನುಡಿದವರು. ವ್ಯಕ್ತಿ ಗಳಿಸಿದ ಸಂಪತ್ತೆಲ್ಲವೂ ಅವನಿಗೇ ಸೇರಿದುದಲ್ಲ. ಅದರಲ್ಲಿ ಸ್ವಲ್ಪ ಜನರುದ್ಧಾರ ಕಾರ್ಯಕ್ಕೆ ಬಳಕೆಯಾಗಬೇಕು ಎಂದು ಆದಾಯ ತೆರಿಗೆಯ ಬಗ್ಗೆ ಮಾತನಾಡುವ ದೇಶೋದ್ಧಾರಕ, ಕಾರ್ಮಿಕ ನಾಯಕ.

ರಾಮಲಕ್ಷ್ಮಣರಿಗೆ "ವಟವೃಕ್ಷದಂತಾಗಿ ಆರ್ತರಿಗೆ ಆಶ್ರಯ ನೀಡುತ್ತ ಬಾಳಿರೈ" ಎಂದು ಆಶೀರ್ವದಿಸಿ – ವಿಶ್ವಭ್ರಾತೃತ್ವ ಬೀಜವನು ನೀವು ಬಿತ್ತಬೇಕು ಎಂದು ಉಪದೇಶ ನೀಡಿ ರಾಮನನ್ನು ಕುರಿತು ನಿನ್ನ ಕೃಪೆಯೆನಗಿರಲಿ ಸ್ವಾಮಿ ಎಂದು ಅಗ್ನಿಕುಂಡದಲ್ಲಿ ಆತ್ಮಾರ್ಪಣೆಯನ್ನು ಮಾಡಿಕೊಳ್ಳುತ್ತಾರೆ. ಲಕ್ಷ್ಮಣ ಅದನ್ನು ಆಕ್ಷೇಪಿಸಿದಾಗ, ಜ್ಞಾನಶ್ರೇಷ್ಠರೆಂಬ ಮುನಿಗಳು ಶರಭಂಗರ ಆತ್ಮಾರ್ಪಣೆಗೆ ಕಾರಣವೇನೆಂದು ಹೀಗೆ ಹೇಳುತ್ತಾರೆ.

ಅರಣ್ಯ ಪ್ರಾಂತ್ಯದಲ್ಲಿ ದೇವಜನ ಮತ್ತು ರಕ್ಕಸರು ಜೊತೆಗೂಡಿ ಗಣಿಗಾರಿಕೆ ಆರಂಭಿಸಿ ಬಡಕಾರ್ಮಿಕರಿಗೆ ಅಲ್ಪವೇತನ ಕೊಟ್ಟು ಹೆಚ್ಚು ವೇಳೆ ದುಡಿಸಿಕೊಂಡು ಶೋಷಣೆ ಮಾಡುತ್ತಿದ್ದರು. ಶೋಷಣೆಗೊಳಗಾದ ಕಾರ್ಮಿಕರು ತಮ್ಮ ವೇದನೆಗಳನ್ನು ಶರಭಂಗರೆದುರೇ ನಿವೇದನೆ ಮಾಡಿ ಕೊಳ್ಳುತ್ತಾರೆ. ಈ ಸಮಸ್ಯೆ ಪರಿಹರಿಸಲು ಶರಭಂಗರು ದೇವೇಂದ್ರ ಆಶ್ರಮಕ್ಕೆ ಬಂದಾಗ ಭವ್ಯಸ್ವಾಗತ ಕೋರಿ ಏಕಾಂತದಲಿ ಕಾರ್ಮಿಕರ ನೋವುಗಳ ವರ್ಣಿಸಿ ಪರಿಹಾರೋಪಾಯವನ್ನು ವಿಶ್ವಾಸದಲಿ

ಬೇಡಿದರೆ ದೇವೇಂದ್ರ ನೇರಮಾತಿನಲ್ಲಿ 'ನಾ ಗಳಿಸಿದೈಶ್ವರ್ಯ ದೇವಗಣಕೆ ಸಲ್ಲುವುದು ನರರಿಗಲ್ಲವು' ಎಂದು ನಿರ್ಲಕ್ಷ್ಯದಿಂದ ನಿರಾಕರಿಸಿ ನಿರ್ಗಮಿಸಿ ಬಿಡುತ್ತಾರೆ. ಆ ಕಾರಣಕ್ಕೆ ಮುನಿವರರ ಆಶಾಸೌಧ ಕುಸಿದು ಆತ್ಮಾಹುತಿ ಮಾಡಿಕೊಂಡರು ಎನ್ನುವುದೇ ಕಥೆ.

ಸುತೀಕ್ಷ್ಣಮುನಿಗಳ ಆಶ್ರಮದ ದಾರಿ ಹಿಡಿದ ರಾಮಾದಿಗಳನ್ನು ಧರ್ಮಭೃತ್ಯನೆಂಬುವವನು ತಡೆದು ತನ್ನ ತಾಣದೆಡೆಗೆ ಕರೆದೊಯ್ಯುತ್ತಾನೆ. ದಾರಿಯುದ್ದಕ್ಕೂ ಜನ ರಾಮಾದಿಗಳಿಗೆ ಉತ್ಸಾಹದಿಂದಲೇ ಸ್ವಾಗತ ಕೋರುತ್ತಾರೆ. ಆದರೆ ಅವರೆಲ್ಲ ನಿತ್ಯ ನೋವು ಆತಂಕಗಳಿಗೆ ಒಳಗಾದವರೆಂದು ತಿಳಿದುಬರುತ್ತದೆ. ಅದಕ್ಕೆ ಪೂರಕವಾಗಿ ಧರ್ಮಭೃತ್ಯ ಮರಗಳ ಮಧ್ಯೆ ರಾಶಿ ಬಿದ್ದಿರುವ ಮೂಳೆಗಳ ಬೆಟ್ಟದ ರಾಶಿಯನ್ನೇ ತೋರುತ್ತಾನೆ. ಸೀತೆ ನೋಡಲಾರದೆ ಕಣ್ಮುಚ್ಚಿ ಕಂಪಿಸುತ್ತಾಳೆ. ರಕ್ಕಸರು ಕೊಂದು ಮಾಂಸವ ತಿಂದು, ಜನಮಾನಸದಿ ಭಯದ ಬಿತ್ತಲು ಮೂಳೆಗಳ ರಾಶಿ ಹಾಕಿದ್ದಾರೆ ಎನ್ನುತ್ತಾರೆ ಕೆಲವರು. ಇನ್ನೂ ಕೆಲವರು ಮುನಿಗಳೇ ರಾಶಿ ಹಾಕಿ ಜನಮನದಿ ರಕ್ಕಸರ ವಿಷಯದಲ್ಲಿ ಆಕ್ರೋಶವೆಬ್ಬಿಸಲು ಈ ರೀತಿ ಮಾಡಿದ್ದಾರೆ ಎನ್ನುತ್ತಾರೆ. ನಗ್ನಸತ್ಯವೆಂದರೆ ರಕ್ಕಸರೇ ಮುನಿವರರನ್ನು, ಜನಪದರನ್ನು, ಕೊಲ್ಲುವರು. ಆ ರೀತಿ ಮರಣ ಹೊಂದಿದವರ ಶವಸಂಸ್ಕಾರ ಮಾಡಲು ಬಂಧುಗಳಿಗೆ ಧೈರ್ಯ ಸಾಲದೇ ಸ್ವಾರ್ಥಕುಳಿಯಲ್ಲಿ ಬಿದ್ದು ರಕ್ಕಸರು ತಿಂದು ಅತ್ತ ಸರಿದಾಗ ಇತ್ತ ಕದ್ದುಮುಚ್ಚಿ ಮೂಳೆ ಶವಗಳನ್ನು ತಂದೊಟ್ಟಿದ್ದಾರೆ– ಎನ್ನುತ್ತಾನೆ. ಇದನ್ನು ಕೇಳಿ ರಾಮನಲ್ಲಿ ಅನೇಕ ಭಾವಜಿಜ್ಞಾಸೆಗಳು ಮೂಡುತ್ತವೆ. ಸೀತೆಯಂತೂ 'ಬಂಧು ಬಳಗದ ಕೊರತೆಯ ಪರಮಾವಧಿ ಇದು. ಭರತವರ್ಷದಲ್ಲಿಂತು ನಡೆವುದೇ' ಎಂದು ಮರಗುತ್ತಾಳೆ. ಲಕ್ಷ್ಮಣನಂತು ಕುಪಿತಕೊಂಡು ಕ್ಷುದ್ರರಕ್ಕಸ ಮತ್ತು ಮುನಿಜನರ ಸ್ವಾರ್ಥಲಾಲಸೆ ತುಂಬುಜೀವಗಳ ಕಚ್ಚುತ್ತಿವೆ. ಅಣ್ಣಾ ನೀಡಾಜ್ಞೆಯನ್ನು ದುಷ್ಟಸಂಸ್ಕೃತಿಯ ಧ್ವಂಸಮಾಡುವೆನು ಎಂದು ಉದ್ರೇಕಕ್ಕೆ ಒಳಗಾದಾಗ ರಾಮ ಮತ್ತು ಸೀತೆ ಇಬ್ಬರೂ ಲಕ್ಷ್ಮಣನಿಗೆ ಸಮಾಧಾನದ ಬುದ್ಧಿ ಮಾತು ಹೇಳುತ್ತಾರೆ.

ಧರ್ಮಭೃತ್ಯುವಿನ ಆಶ್ರಮದಲ್ಲಿ ತಂಗಿದ್ದ ರಾಮನಿಗೆ ಒಂದು ದಿನ ರಾತ್ರಿ ಇದ್ದಕ್ಕಿದ್ದಹಾಗೆ ಆಕ್ರಂದನ ಧ್ವನಿ ಕೇಳುತ್ತದೆ. ಅದೊಂದು ಗೃಹಕಲಹ. ಕುಡಿತಕ್ಕೆ ದಾಸನಾಗಿದ್ದ ಮಾಖನ ಎಂಬುವವನು ಕುಡಿದ ಮತ್ತಿನಲ್ಲಿ ಹೆಂಡತಿಯನ್ನು ಬಡಿಯುತ್ತಿರುತ್ತಾನೆ. ರಾಮ ಅದನ್ನು ಬಿಡಿಸಲು ಹೋದರೆ ಮಾಖನ 'ನನ್ನ ಹೆಂಡತಿ; ನಮ್ಮ ಬಾಳು, ನೀನಾರು ಕೇಳಲು. ನೀವೆಲ್ಲ ರಕ್ಕಸರೇ, ಅಗ್ನಿವರ್ಣಿಗಳೇ,

ಮಾಂಡಕರ್ಣಿಗಳೇ ತೊಲಗಿ ಇಲ್ಲಿಂದ ಎಂದು ನಿಂದಿಸುತ್ತಾನೆ. ಆದರೂ ರಾಮ ಸಮಾಧಾನ ಮಾಡುತ್ತಾನೆ. ಈ ಘಟನೆಯೇ ಮಾಂಡಕಣಿಯ ಬಗ್ಗೆ ತಿಳಿಯಲು ಅನುವು ಮಾಡಿಕೊಡುತ್ತದೆ.

ಮಾಂಡಕರ್ಣಿ ಒಬ್ಬ ಋಷಿ–ಕಾರ್ಮಿಕ ರಕ್ಷಕನಾಗಿ ಬಂದವನು. ಈಗ ಭಕ್ಷಕನೆನಿಸಿದ್ದಾನೆ. ಇಲ್ಲಿರುವ ಗಣಿಗಳಿಗೆ ವಿವಿಧ ವರ್ಗದ ಧಣಿಗಳಿದ್ದಾರೆ. ಅವರೆಲ್ಲ ಶ್ರೀಮಂತರು. ಅವರಲ್ಲಿ ಅಗ್ನಿವಂಶದ ಅಗ್ನಿಮಿತ್ರನೆಂಬುವವನು ಒಬ್ಬ. ಆತ ಇಲ್ಲಿನ ಜನರಾದ ವಾನಋಕ್ಷ, ನಿಷಾದ, ಶಬರವರ್ಗದವರನ್ನು ಗಣಿಯಲ್ಲಿ ದುಡಿಸಿಕೊಳ್ಳುತ್ತಾ ಸ್ತ್ರೀ–ಅಬಾಲವೃದ್ಧರನ್ನೆಲ್ಲಾ ಶೋಷಿಸುತ್ತಿದ್ದ. ಎಲ್ಲಿಂದಲೋ ಬಂದ ಮಾಂಡಕರ್ಣಿ ಮುನಿವರನು ಈ ಕಾರ್ಮಿಕರ ಕಷ್ಟನಷ್ಟಗಳನ್ನು ನೋಡಿ ಮರುಗಿದ. ಆ ಜೀತದಾಳುಗಳ ಗುರುವಾಗಿ, ಪೋಷಕನಾಗಿ ಎಚ್ಚರಿಸಿದ. ಕಾರ್ಮಿಕ ಮಕ್ಕಳಿಗೆ ಅಕ್ಷರ ಕಲಿಸಿದ. ಹಕ್ಕುಸ್ವಾತಂತ್ರ್ಯಗಳ ತಿಳುವಳಿಕೆ ನೀಡಿ ದೌಷ್ಟ್ಯವನ್ನು ಪ್ರತಿಭಟಿಸಿರೆಂದು ಉಪದೇಶ ನೀಡಿದ. ಮಾಂಡಕರ್ಣಿಯ ಹೋರಾಟ ಫಲಿಸಿತು. ವೇತನ ಹೆಚ್ಚಿತ್ತು. ದೌರ್ಜನ್ಯ ತಗ್ಗಿತ್ತು. ಮಾಂಡಕರ್ಣಿ ಕಾರ್ಮಿಕರ ಆರಾಧ್ಯದೇವನೇ ಆದ.

ಈ ರೀತಿ ಜೀವನ ಸಾಗುತ್ತಿರುವಾಗ ಒಮ್ಮೆ ಧರಣಿ ನಡುಗಿ ಕಣಿವೆ ಕುಸಿದು ಗಣಿಯೊಳಗಿದ್ದ ಎರಡು ಸಾವಿರ ಕಾರ್ಮಿಕರು ಸಜೀವಸಮಾಧಿಯಾದರು. ಕಾರ್ಮಿಕರ ಅಬಲೆಯರು ಪರಿಹಾರ ಕೇಳಿದರು. ಅಗ್ನಿಮಿತ್ರನ ಆಡಳಿತ ಡೋಲಾಯಮಾನವಾಯಿತು. ಅನ್ಯಮಾರ್ಗಕಾಣದೇ ಅಗ್ನಿಮಿತ್ರನು ನಯವಾಗಿ ಮಾಂಡಕರ್ಣಿಯ ಮೇಲೆ ಸಮ್ಮೋಹನವ ಬೀಸಿದ. ಉಡುಗೊರೆಯ ನೀಡಿದ. ದೂರ ದೂರ ದೇಶಕ್ಕೆ ಯಾತ್ರೆಗೆಂದು ಕರೆದೊಯ್ದ. ಕಾರ್ಮಿಕರ ಸಂತೈಸಿರೆಂದು ಬೇಡಿದ. ಪಂಚಾಸರವೆಂಬ ನಗರದಲ್ಲಿ ಪ್ರತ್ಯೇಕ ಭವನ ನಿರ್ಮಿಸಿ 'ಗುರುವೇ ನಿಮಗರ್ಪಿತ'ವೆಂದ. ಮಾಂಡಕರ್ಣಿಯು ಕಾಮಿನಿಗೆ, ಕಾಂಚಣಕ್ಕೆ ಮದಿರೆಯ ಮೋಹಕ್ಕೆ ಶ್ರಮಿಕವರ್ಗದ ಹಿತಾಸಕ್ತಿಗಳನ್ನೇ ಬಲಿಕೊಟ್ಟ. ಇದನ್ನು ಕುಲಪತಿ ಶರಭಂಗರಿಗೆ ಬಿನ್ನೈಸಿದಾಗ ಅವರು ಮಾಂಡಕರ್ಣಿಯ ಕಪಟ ರೂಪಕ್ಕೆ ದುಃಖದಿಂದ ನೊಂದರು. ತಾವೇ ಕಾರ್ಮಿಕರನ್ನು ಮತ್ತೆ ಸಂಘಟಿಸಿ ಮಾಂಡಕರ್ಣಿಗೆ ಧಿಕ್ಕಾರ ಘೋಷಿಸಿದರು. ದೇವೇಂದ್ರನನ್ನೇ ಸಲಹೆ ಬೇಡಿದರು. ಮುಂದಿನದೆಲ್ಲವನ್ನೂ ನೀವೇ ಬಲ್ಲಿರೆಂದು ಧರ್ಮಭೃತ್ಯನು ನಿರೂಪಿಸಿದ.

ಮಾರನೆಯ ದಿನ ಮತ್ತೆ ಕೆಲವರು ಗುಡಿಸಲು ನಿರ್ಮಿಸಲೆಂದು ಮರ ಕಡಿಯುತ್ತಿದ್ದಾಗ ಉಗ್ರಾಗ್ನಿಯೆಂಬುವವನು ತನ್ನ ಸಹಚರರೊಡನೆ ಬಂದು ಅಡ್ಡಿಪಡಿಸುತ್ತಾನೆ. ಅದೇ ಕಾರಣವಾಗಿ ಲಕ್ಷ್ಮಣ ಉಗ್ರಾಗ್ನಿಯ ತಂಡವನ್ನು ಬಂಧಿಸುತ್ತಾನೆ. ರಾಮ ಕೋಪದಿಂದ "ಕಾಡಿನ ಸಂಪತ್ತು ನಿಮ್ಮೊಬ್ಬರದ್ದಲ್ಲ ಸರ್ವರಿಗೂ ಸಮಪಾಲಿದೆ. ಗಣಿದೊರೆಗಳಾದ ನೀವೇ ಕಾರ್ಮಿಕರಿಗೆ ವಸತಿ ಸೌಕರ್ಯ ನೀಡಬೇಕು. ಶ್ರಮಿಕರಿಗೆ ಸಮಪಾಲು ನೀಡದೆ, ವಸತಿಸೌಕರ್ಯ ಕಲ್ಪಿಸದಿದ್ದರೆ ಶಿಕ್ಷೆ ಕಾದಿಹುದು ಜೋಕೆ" ಎಂದು ಎಚ್ಚರಿಸುತ್ತಾನೆ. ಲಕ್ಷ್ಮಣನಿಂದ ಸಂಘಟಿತರಾದ ಕಾರ್ಮಿಕರು ಮೂಲ ಸೌಕರ್ಯ ಬೇಕೆಂದು ಗಣಿದೊರೆಗಳ ವಿರುದ್ಧ ಪ್ರತಿಭಟಿಸುತ್ತಾರೆ. ಪ್ರತಿಭಟನಾಕಾರರನ್ನು ಮುಗಿಸುವ ಸಂಚಿನಿಂದ ಗಣಿದೊರೆಗಳೇ ಗಣಿಗಳಿಗೆ ಬೆಂಕಿಯಿಡಲು ಹವಣಿಸುತ್ತಾರೆ. ಈ ವಿಷಯವನ್ನು ಮಾಖನನು ತಿಳಿದು ರಾಮನಲ್ಲಿ ದೂರುತ್ತಾನೆ. ಲಕ್ಷ್ಮಣ ಕಾರ್ಮಿಕರನ್ನೆ ಸೈನಿಕರಾಗುವಂತೆ ಹುರಿದುಂಬಿಸಿ ಗಣಿದೊರೆಗಳ ವಿರುದ್ಧ ಯುದ್ಧಸಾರುತ್ತಾರೆ. ಗಣಿದೊರೆಗಳು ಹೆದರಿ ಕಾನನದೊಳಗೆ ಕಣ್ಮರೆಯಾಗುತ್ತಾರೆ. ಗಣಿ ಕಾರ್ಮಿಕರ ಸ್ವಾಧೀನವಾಗುತ್ತದೆ. ಆಗ ಕಾರ್ಮಿಕರು ರಾಮನನ್ನೇ ಗಣಿಯೊಡೆಯನೆಂದು ಜಯಕಾರ ಹಾಕುತ್ತಾರೆ. ಅದಕ್ಕೆ ರಾಮ ಸಮ್ಮತಿಸದೆ ಸಾಕೇತ ತೊರೆದಿಲ್ಲಿ ಗಣಿಸ್ವಾಮಿಯಾಗಲು ಬಂದವನಲ್ಲ. ನೀವೇ ಗಣಿಯೊಡೆಯರಾಗಿ. ಶೋಷಣಾರಹಿತ ನವ ಸಮಾಜವನ್ನು ನಿರ್ಮಿಸಿ. ಹಾಳು ಭೂಮಿಯನುಳುವ ಕೂಲಿಕಾರನೆ ಒಡೆಯ ಎನ್ನುತ್ತಾನೆ. ಇಂದಿರಾಗಾಂಧಿಯವರು ಪ್ರಧಾನಿಯಾಗಿದ್ದಾಗ ತಂದ ಕಾನೂನು 'ಉಳುವವನೇ ಭೂಮಿಯ ಒಡೆಯ' ಎಂಬುದನ್ನು ನೆನಪಿಗೆ ತರುತ್ತದೆ.

ಸೀತೆ ಶ್ರೀರಾಮನ ಅಪ್ಪಣೆ ಪಡೆದು ಸ್ತ್ರೀಯರಿಗೆ ಮತ್ತು ಬಾಲಕರಿಗೆ ಓದು ಬರಹ ಕಲಿಸುವ ಹೊಣೆ ಹೊರುತ್ತಾಳೆ. ಧರ್ಮಭೃತ್ಯವಿನ ಶಿಷ್ಯರೇ ಶಿಕ್ಷಕರಾಗುತ್ತಾರೆ. ಆಗ 'ಭೂಲರ' ಎಂಬ ಬಾಲಕ ವಿದ್ಯೆ ಕಲಿಯಲು ನಿರಾಕರಿಸುತ್ತಾನೆ. ವಿದ್ಯೆ ಕಲಿತವನು ಸೋಮಾರಿಯಾಗುತ್ತಾನೆ. ಮತ್ತೊಬ್ಬರನ್ನು ದುಡಿಸಿ ಬದುಕುವ ಶಿಕ್ಷಣವೇಕೆ?' ಎನ್ನುವುದೇ ಅವನ ಅಭಿಪ್ರಾಯವಾಗಿರುತ್ತದೆ. ಸೀತೆ ಅವನ ತಪ್ಪು ಅಭಿಪ್ರಾಯವನ್ನು ನಿವಾರಿಸುತ್ತಾಳೆ. ನಂತರ ವೃದ್ಧರಿಗೂ ಶಿಕ್ಷಣವನ್ನು ವಿಸ್ತರಿಸುತ್ತಾರೆ. ಇದು ಮೊಯಿಲಿಯವರು ಶಿಕ್ಷಣ ಮಂತ್ರಿಯಾಗಿದ್ದಾಗ ಕೈಗೊಂಡಿದ್ದ ಶಿಕ್ಷಣಪರ ಕಾನೂನುಗಳನ್ನೂ 'ವಯಸ್ಕರಶಿಕ್ಷಣ'ವನ್ನೂ ನೆನಪಿಗೆ ತರುತ್ತದೆ.

ಸುತೀಕ್ಷ್ಣಮುನಿಗಳ ಆಶ್ರಮಕ್ಕೆ ಸೀತಾರಾಮ ಲಕ್ಷ್ಮಣರು ಭೇಟಿನೀಡಿದಾಗ ಅಲ್ಲಿನ ಪರಿಸರ ಸೀತೆಯ ಮನಸೆಳೆಯುತ್ತದೆ. ಆಶ್ರಮದಲ್ಲಿ ಪ್ರಾಣಿಗಳು ಆಜನ್ಮ ವೈರವನ್ನು ಮರೆತು ಜೀವಿಸುತ್ತವೆ. ಸಿಂಹದ ಮರಿಗಳಿಗೆ ಆನೆ ಮೊಲೆಯೂಡುತ್ತದೆ. ಗೋವುಗಳ ಸಿಂಹದ ಮರಿಗಳಿಗೆ ಹಾಲೂಡುತ್ತವೆ. ಇದನ್ನೆಲ್ಲ ಗಮನಿಸಿದ ಸೀತೆ ರಾಮನನ್ನು ಕುರಿತು ನಿನ್ನಲ್ಲಿ ಯಾವ ಅವಗುಣಗಳೂ ಇಲ್ಲ. ಆದರೂ ಅವಿಚಾರದಿಂದ ಸಿಂಹಜಾಲದಲಿ ಸಿಲುಕಿರುವೆ. ದಂಡಕಾರುಣ್ಯದಿ ನೆಲೆಸಿರುವ ತಾಪಸರನ್ನೂ, ಶ್ರಮಿಕರನ್ನೂ ರಕ್ಷಿಸಲು ಹಿಂಸಾಮಾರ್ಗವೊಂದೆ ಪರಿಹಾರ ಎಂದೆನುವ ಮೌಢ್ಯನಿನಗಿಹುದು. ವನವಾಸದ ನೆಪದಲ್ಲಿ ಇಲ್ಲಿಗೆ ಬಂದು ಹಿಂಸಾ ಪ್ರವೃತ್ತನಾಗುವುದು ಸಾಧುವೇ? ರಕ್ಕಸರನ್ನು ಕೊಲ್ಲಲು ಅವರೇನು ನಿನಗೆ ಕೇಡು ಬಗೆದಿರುವರು? ಎಂದು ಕೇಳುತ್ತಾಳೆ. ರಾಮ ಕ್ಷಾತ್ರಧರ್ಮದ ತತ್ವವನ್ನು ಹೇಳುತ್ತಾನೆ. ಅದಕ್ಕೆ ಸೀತೆ 'ಅಯೋಧ್ಯೆಗೆ ತೆರಳಿದಾಗ ಕ್ಷಾತ್ರಧರ್ಮವ ಹಿಡಿ ಇಲ್ಲೇಕೆ ರಾಜ್ಯರಕ್ಷಣೆಯ ಚಿಂತೆ. ನಿನ್ನಲ್ಲಿ ಆಯುಧ ಕಾಣುತ್ತಿದ್ದಂತೆ ರಕ್ಕಸರಿಗೆ ಪ್ರಚೋದನೆಯಾಗಿ ಹಿಂಸೆಯ ಬಯಸುವರು. ಆಕ್ರಮಣ ಮಾಡುವರು, ಆಶ್ರಮವು ಬೊಬ್ಬಿರಿದ ರಣಭೂಮಿಯಾಗುವುದು. ಎಲ್ಲಕ್ಕೂ ಧರ್ಮವೇ ನೆಲೆ ಎಂದು ತಿಳಿ ಹೇಳುತ್ತಾಳೆ. ರಾಮನು, ರಕ್ಕಸರು, ವನವಾಸಿಗಳ, ಮುನಿಗಳ ಹಿಂಸಿಸುತ್ತಿರುವಾಗ ರಕ್ಷಿಸುವ ಕ್ಷಾತ್ರಧರ್ಮ ತಪವನ್ನು ರಕ್ಷಿಸುವುದೇ ರಾಜಧರ್ಮ ಸರ್ವೋದಯದ ಸವಿಯನ್ನು ಕಾಪಾಡಬೇಕು. ಅದ್ದರಿಂದ ಈಗ ಶಾಂತಿ ಮಂತ್ರ ಜಪಿಸದೇ ಅಸ್ತ್ರ ಶಸ್ತ್ರಗಳಿಂದ ರಕ್ಕಸರ ದಮನಗೈಯ್ಯುವುದೇ ಸೂಕ್ತವೆಂದು ಸೀತೆಗೆ ಅಹಿಂಸಾತತ್ವದ ವ್ಯವಹಾರಿಕ ರೂಪವನ್ನು ತಿಳಿಸಿಕೊಡುತ್ತಾನೆ.

ಅಗಸ್ತ್ಯಾಶ್ರಮದಲ್ಲಿ ಕೆಲವು ಕಾಲ ಸೀತಾರಾಮಲಕ್ಷ್ಮಣರು ತಂಗುತ್ತಾರೆ. ಅಗಸ್ತ್ಯ ಮಹರ್ಷಿಯು; ರಾಮನು ರಾಕ್ಷಸರನ್ನು ಸಂಹರಿಸಲು 'ದೃಢಸಂಕಲ್ಪಿತನೆ' ಎಂದು ಪರೀಕ್ಷಿಸಿ, ವಿಶ್ವಕರ್ಮನಿಂದ ನಿರ್ಮಿತವಾದ ವಿಷ್ಣುಚಾಪವನ್ನು ನೀಡುತ್ತಾರೆ. ಲೋಪಾಮುದ್ರೆ ಸೀತೆಗೆ ಶಲ್ಯವಿದ್ಯಾ ರಹಸ್ಯವನ್ನು ಹೇಳುತ್ತಾಳೆ. ಈ ಮುನಿ ದಂಪತಿಗಳ ಮಗಳೊಬ್ಬಳು ವೈದ್ಯೆ. ಆಕೆಯ ಹೆಸರೇ ಪ್ರಭ. ಶಲ್ಯಚಿಕಿತ್ಸೆಯಲ್ಲಿ ಪರಿಣಿತಳು. ಮುಂದೆ ರಾಮ ರಾವಣರ ಯುದ್ಧ ನಡೆದಾಗ ಗಾಯವುಂಟಾದ ಸೈನಿಕರಿಗೆ ಚಿಕಿತ್ಸೆ ನೀಡಲು ಈಕೆಯನ್ನು ಯುದ್ಧಭೂಮಿಗೆ ಕರೆದೊಯ್ಯುತ್ತಾರೆ.

ಅಗಸ್ತ್ಯಮುನಿ ಶ್ರೀರಾಮನಿಗೆ ಆದಿತ್ಯಹೃದಯ ಸ್ತೋತ್ರವನ್ನು ಬೋಧಿಸಿ ದಿನನಿತ್ಯ ಸ್ತುತಿಸು ಜಯವು ನಿನಗಿರಲಿ ಎಂದು ಹರಸಿದರು. ನಂತರ ಇಕ್ಷ್ವಾಕು ಚಕ್ರಸುತ ದಂಡಕನ ರಾಜ್ಯ ಹೇಗೆ

ದಂಡಕಾರಣ್ಯವಾಯಿತು. ಕ್ರೂರ ದಾನವರ ನೆಲೆವೀಡಾಗಿ ರಕ್ಕಸರ ದಾಳಿ ಅಯೋಧ್ಯೆಗೂ ಹರಡಿ ರಘುವಂಶ ಸಂಜಾತ ಅನರಣ್ಯದೊರೆ ನಾಶವಾಗಿದ್ದು ತದನಂತರ ದಶರಥ ಮಹಾರಾಜ ರಕ್ಕಸರನ್ನು ಹಿಮ್ಮೆಟ್ಟಿಸಿದ್ದು ಇವೆಲ್ಲ ಕಥೆಯನ್ನು ಹೇಳುತ್ತಾರೆ. ಅವರ ಮಾರ್ಗದರ್ಶನದಂತೆ ಮುಂದೆ ಅವರು ಗೋದಾವರಿ ನದಿ ತಟಿಯಲ್ಲಿರುವ ಪಂಚವಟಿಗೆ ಬಂದು ನೆಲೆಸುತ್ತಾರೆ. ಅಲ್ಲಿನ ಋಷಿಗಳು ರಾಮಾದಿಗಳಿಗೆ ಸ್ವಾಗತ ಕೋರಿ ಆಗ ತಾನೆ ರಕ್ಕಸರು ಬಂದು ಯಜ್ಞಶಾಲೆ ಧ್ವಂಸ ಮಾಡಿ ರಕ್ತಮಾಂಸ ಸುರಿದು ಹೋಗಿರುವುದನ್ನು ತೋರಿಸುತ್ತಾರೆ. ಸೀತೆಯೂ ಋಷಿವನಿತೆಯರಿಂದ ಕ್ರೂರ ಕೃತ್ಯಗಳನ್ನು ಕೇಳಿ ರಾಮನನ್ನು ಕುರಿತು ನಿನ್ನ ಉಗ್ರಬಾಣಗಳಿಂದ ರಕ್ಕಸರನ್ನು ತರಿದುಬಿಡು ಎನ್ನುವಳು.

ಪಂಚವಟಿಯಲ್ಲೇ ಜಟಾಯುವಿನ ಪರಿಚಯವಾಗುವುದು. ಆತ ತನ್ನ ಇಂದಿನ ಸ್ಥಿತಿಗೆ ರಕ್ಕಸರೇ ಕಾರಣ. ಗೃಧ್ರಕುಲ ದೊರೆಯಾಗಿ ವೈಭವದಿ ಮೆರೆಯುತ್ತಿದ್ದೆ, ಆದರೆ ರಾವಣನ ಬಂಧುಗಳಾದ ಉಗ್ರಗಾಮಿಗಳು ಬಂದು ನನ್ನ ರಾಜ್ಯವನ್ನು ಸರ್ವನಾಶಗೈದರು. ನನ್ನ ಪರಿವಾರ ರಕ್ಕಸರಿಗೆ ಬಲಿಯಾಯ್ತು. ದಿಕ್ಕುದೆಸೆ ಕಾಣದೇ ನಾನೊಬ್ಬ ಇಲ್ಲೇ ಉಳಿದೆ. ಅಗ್ರಜ ಸಂಪಾತಿ ತಿರುಕನ ತೆರದಿ ಎಲ್ಲೊ ಅಲೆದಾಡುತಿಹನು. ಬದುಕಿದ್ದಾನೋ ಸತ್ತಿಹನೋ ಕಂಡವರಿಲ್ಲ. ನಾನೀಗ ಏಕಾಂಗಿ. ಈ ಖಡ್ಗವೇ ನನ್ನ ಜೊತೆಗಾರ. ಜನಪದರು ನನ್ನನ್ನು ಹುಚ್ಚನೆಂದು ತಿಳಿದು ದೂರವೇ ಉಳಿಯುವರು– ಎಂದು ಹೇಳಿ ಪಂಚವಟಿಗೆ ದಾರಿ ತೋರಿ ಪರ್ಣಕುಟಿ ರಚಿಸಲು ತಾನೂ ಕೈಜೋಡಿಸುವನು. ಅಲ್ಲಿ ಶ್ರೀರಾಮ ಅನುಜ ಸೌಮಿತ್ರಿಗೆ ಮಹಾನ್ವೇಷಣ ಮಾರ್ಗವನು ಬೋಧಿಸುವನು.

ಶೂರ್ಪನಖಾ ಪ್ರಸಂಗದಲ್ಲಿ ಮೊಯಿಲಿಯವರ ಶೂರ್ಪನಖಿ ರಾಜಕೀಯ ಪ್ರಜ್ಞೆಯಿಂದ ಕಂಗೊಳಿಸುತ್ತಾಳೆ. ತನ್ನ ಸಖಿಯಿಂದ ಪ್ರಚೋದಿತಳಾಗಿ ರಾಮನೆಂಬ ಮನಸಿಜನನ್ನು ಒಲಿಸಿಕೊಳ್ಳಲು ಬರುತ್ತಾಳೆ. ಶ್ರೀರಾಮನನ್ನು ನೋಡಿ ಕಾಮಜ್ವರದಲಿ ಬಳಲುತ್ತಾಳೆ. ನಂತರ ತನ್ನ ಪರಿಚಯ ಮತ್ತು ತನ್ನ ದುಃಖದ ಕಥೆಯನ್ನು ವಿವರಿಸಿ – ನೀ ನನ್ನ ವರಿಸಿದರೆ ಆರ್ಯದ್ರಾವಿಡವೆಲ್ಲ ಒಂದಾಗಿ ಸಂಘರ್ಷ ತಪ್ಪುತ್ತದೆ. ಸಾಕೇತ–ಲಂಕೆ ಬೆಸೆಯುತ್ತವೆ. ಸಾಂಸ್ಕೃತಿಕ ಕ್ಲೇಶಗಳು, ದ್ವೇಷಗಳು ಇಲ್ಲವಾಗಿ ಸುಖಶಾಂತಿ ನೆಲೆಸುವುದು. ನೀ ನನ್ನ ವರಿಸಿ ಲೋಕಕಲ್ಯಾಣಕ್ಕೆ ಪರುಶಮಣಿ ನೀನಾಗು ಮಾನವರು ರಕ್ಕಸರು ವಾನರರು ಎಂಬ ಭೇದ ಭಾವವನ್ನೆಲ್ಲ ಸಂಪೂರ್ಣ ತೊರೆದುಬಿಡು, ಎನ್ನುತ್ತಾಳೆ. ರಾಮ ಅವಳನ್ನು ಸಂತೈಸಿ ನಾನು ಏಕಪತ್ನಿ ವ್ರತಸ್ಥ. ನನಗೆ ಸೀತೆಯೆಂಬ ಈ ಹೆಂಡತಿಯಿದ್ದಾಳೆ ಎಂದು ಸೌಮಿತ್ರಯೊಡನೆ

ಹೇಳಿ ಆಕೆಯನ್ನು ಕಳುಹಿಸುತ್ತಾನೆ. ಸೌಮಿತ್ರಿ ಅಣ್ಣನ ಹಾಸ್ಯದ ಎಳೆಹಿಡಿದು ಅವಳನ್ನು ನುಡಿಸಿ ನಾನು ಶ್ರೀರಾಮ ಸೀತೆಯರ ಪರಸೇವಾ ನಿರತ. ನನ್ನ ವರಿಸಿ ದಾಸನ ದಾಸಿಯೇಕಾಗುವೆ? ರಾಮನನೆ ಒಲಿಸಿಕೊ ಎಂದು ಅಟ್ಟುತ್ತಾನೆ. ಅತ್ತಿಂದ ಇತ್ತ ಇತ್ತಿಂದ ಅತ್ತ ಎಂದು ಸುಳಿದು ಕೊನೆಗೆ "ಹಿಂಸೆಯೊಳೆ ಸಂತಸವ ಕಾಣುವ ವಂಶ ನಿಮ್ಮದು. ಮುಪ್ಪಿನಲ್ಲೂ ತರಳೆಯ ಪೀಡಿಸುವ ವಂಶ ನಿಮ್ಮದು. ಏಕಸಂಸ್ಕೃತಿಯನ್ನು ಬೆಳೆಸಲು ಬಹುಸಂಸ್ಕೃತಿಯನ್ನು ನಾಶ ಮಾಡುವವರು ನೀವು. ನಿಮ್ಮ ವಂಶದ ಚರಿತ್ರೆಯೇ ಹೀಗೆ ಎಂದು ನಿಂದಿಸುತ್ತ ತನಗವಮಾನ ಮಾಡಿದವರನ್ನು ಸುಮ್ಮನೆ ಬಿಡಲಾರೆ" ಎಂದು ಮತಿಗೆಟ್ಟು ಖರದೂಷಣರಿದ್ದ ಜನಸ್ಥಾನಕ್ಕೆ ಓಡುತ್ತಾಳೆ. ಕುವೆಂಪು ಕಾವ್ಯದ ಪ್ರಭಾವವನ್ನೂ ಈ ಪ್ರಸಂಗದಲ್ಲಿ ಕಾಣಬಹುದಾಗಿದೆ.

ಇತ್ತ ಜನಸ್ಥಾನದಲ್ಲಿದ್ದ ಖರನಿಗೆ ದುಃಸ್ವಪ್ನವಾಗುತ್ತದೆ. ಹೆಣ್ಣು ತೋಳವೊಂದು ಮಳೆಯಲ್ಲಿ ನೆನೆದು ಥರಥರನೆ ನಡುಗುತ್ತ ಊಳಿಡುತ ರಥದ ಹಿಂದೆ ಓಡುತ್ತಿರುವಾಗ ಭೀಮವೇಗದ ಜಲಧಾರೆಯೊಂದು ಗಿರಿಯ ತುದಿಯಿಂದ ಧುಮ್ಮಿಕ್ಕಿ ತೋಳವನ್ನು ಪ್ರಪಾತದೊಳಕ್ಕೆ ಅಪ್ಪಳಿಸುತ್ತದೆ. ಆತ ತಕ್ಷಣವೇ ಕನಸೊಡೆದೆದ್ದು ಶೂರ್ಪನಿಖಿಗೇನಾದುದೋ ಎಂದು ಚಿಂತಿಸುತ್ತಿರುವಷ್ಟರಲ್ಲಿ ಶೂರ್ಪನಖಿ ಕಿವಿ ಮೂಗಲ್ಲಿ ರಕ್ತ ಸುರಿಸಿಕೊಂಡು ಗೋಳಿಡುತ್ತಾ ಎದುರಾಗುತ್ತಾಳೆ. ಅದಕ್ಕೆ ಕಾರಣ ತಿಳಿದು ಖರ–ದೂಷಣರು ರಾಮನ ಮೇಲೆ ದಂಡೆತ್ತಿ ಹೋಗಿ ಧೂಳೀಪಟವಾಗುತ್ತಾರೆ.

ಕಾವ್ಯದೊಳಗೆ ಇಲ್ಲಿಯವರೆವಿಗೂ ರಾವಣನ ಹೆಸರು ಮಾತ್ರ ಪ್ರವೇಶವಾಗಿತ್ತು. ಈಗ ಕಾವ್ಯದಂಗಣದೊಳಗೆ ಸ್ವತಃ ರಾವಣನೇ ಪ್ರವೇಶಿಸುತ್ತಾನೆ. ಮೂಲವನ್ನು ಅನುಸರಿಸಿದ ಕವಿ ರಾವಣನ ಪೂರ್ವೇತಿಹಾಸವನ್ನು ಕಟ್ಟಿಕೊಟ್ಟಿದ್ದಾರೆ. ಯಕ್ಷೇಶ ವೈಶ್ರವಣ, ಲಂಕೆಯ ಅಧಿಪತಿ–ಯಕ್ಷಕುಬೇರರದೇ ಮೇಲುಗೈ. ವಿಶ್ರವಸು ರಾಜನು ಕೈಕನಿಗೆ ಉಪಪತ್ನಿದರ್ಜೆ ನೀಡಿದ್ದರಿಂದ ರಾವಣಾದಿಗಳನ್ನು ಉಪಪತ್ನಿ ಸಂತಾನವೆಂದು ಭಂಗಿಸಿದರು. ರಕ್ಕಸರು ಅವಮಾನಕ್ಕೀಡಾದರು. ರಾವಣನ ನೇತೃತ್ವದಲ್ಲಿ ರಕ್ಕಸರು ಯಕ್ಷಕುಬೇರರ ವಿರುದ್ಧ ಬಂಡಾಯವೆದ್ದರು. ಕ್ರಾಂತಿ ಸಂಘಟನೆಯ ಮಾಡಿದರು.

ಮಹಾಮಾತ್ಯ ಪ್ರಹಸ್ತನ ರಾಜನೀತಿ ನಿಪುಣತೆಯೇ ಯುದ್ಧವಿಲ್ಲದಂತೆ ಲಂಕಾರಾಜ್ಯ ರಾವಣ–ರಕ್ಕಸರ ಕೈಸೇರುವಂತೆ ಮಾಡಿತು. ನಂತರ ಯಕ್ಷ–ಕುಬೇರರು ತೆರೆಮರೆಗೆ ಸರಿದರು. ರಾವಣ

ಅಧಿಪತಿಯಾದ. ಕುಂಭಕರ್ಣ ಸೇನಾಪತಿ, ವಿಭೀಷಣ–ಯುವರಾಜ, ಪ್ರಹಸ್ತನೇ–ಅಮಾತ್ಯ. ರಾವಣ, ಅಮರಶಿಲ್ಪಿ ಮಯಸುತೆ ಮಂಡೋದರಿಯನ್ನು ಮದುವೆಯಾದ, ಕುಂಭಕರ್ಣ–ಬಲಿಸುತೆ ವೃತ್ರಜ್ವಾತೆಯನ್ನು ವರಿಸಿದ. ವಿಭೀಷಣ–ಶೈಲೂಷಗಂಧರ್ವಸುತೆ ಸುರಮೆಯನ್ನು ವಿವಾಹವಾದ.

ಶ್ರೀರಾಮಾಯಣ ಮಹಾನ್ವೇಷಣಂ ಕಾವ್ಯದ ರಾವಣನೂ ವಾಲ್ಮೀಕಿ ರಾಮಾಯಣದ ರಾವಣನಂತೆ ದುಷ್ಟ, ಕ್ರೂರಿ, ಕಾಮುಕ. ಯಕ್ಷೇಷ ವೈಶ್ರವಣನು ರಾವಣನನ್ನು ಕುರಿತು "ಪರವೆಣ್ಣ ಮೋಹದಲಿ ಸಿಲುಕದಿರು. ಹಿಂದೆ ನಾನೂ ಪಾರ್ವತಿದೇವಿಯ ಸೌಂದರ್ಯಕ್ಕೆ ಮರುಳಾಗಿ ಕಾಮಪೂರಿತ ನೇತ್ರಗಳಿಂದ ನಿಟ್ಟಿಸಿದ ಕಾರಣಕ್ಕೆ ಒಂದು ಕಣ್ಣು ಇಂಗಿಹೋಯ್ತು. ಶಿವನ ಬೇಡಿದೆ. ಮನ್ನಿಸಿದ ಆದರೂ ಒಕ್ಕಣ್ಣನಾಗಿ ಇಂದಿಗೂ ಮರುಗುತಿರುವೆ. ನೀನು ಹಾಗಾಗದಿರು"[೩೭] ಎಂದು ಹಿತವಚನ ಹೇಳಿದರೆ ರಾವಣ ಸಿಟ್ಟಿಗೆದ್ದು ಕುಬೇರನ ರಾಜ್ಯಕ್ಕೆ ದಂಡೆತ್ತಿಹೋಗಿ ಅಲಾಕಾಪುರಿಯನ್ನು ಸೂರೆಗೈದು ಪುಷ್ಪಕವಿಮಾನವನ್ನು ಹೊತ್ತೊಯ್ಯುತ್ತಾನೆ.

ರಾವಣ ಎಂತಹ ಕಾಮುಕನೆಂದರೆ, ಕಣ್ಣಿಗೆ ಕಂಡ ಸುಂದರಿಯರನ್ನೆಲ್ಲಾ ಕಾಮದ ಬಾಹುಗಳಿಂದ ಬಂಧಿಸಲೆತ್ನಿಸುವವನು. ಮುನಿಯ ಪತ್ನಿ ಧಾನ್ಯಮಾಲಿನಿ ಎನ್ನುವವಳು ರಾವಣನ ಕಾಮಕ್ಕೆ ತುತ್ತಾಗಿ ಅತಿಕಾಯನೆಂಬ ಮಗುವಿನ ಜನ್ಮಕ್ಕೆ ಕಾರಣಳಾಗುತ್ತಾಳೆ. ಸುದತಿಯೆಂಬ ಸುಂದರಿ ರಾವಣನ ಕಾಮತೃಷಾ ಕುಂಡಕ್ಕೆ ಆಹುತಿಯಾಗುತ್ತಾಳೆ.

ಕುಶಧ್ವಜನ ಮಗಳು ವೇದವತಿಯು ತಪಸ್ಸಿನಲ್ಲಿ ನಿರತಳಾಗಿದ್ದಾಗ ಅವಳ ಮೋಹಕ್ಕೆ ಮರುಳುಗೊಂಡು ಮೇಲೆರೆಗುತ್ತಾನೆ. ಆಕೆಯು "ನಿನ್ನ ಸಕಲ ಸಂಪದ ವಿಭವ ಪರವೆಣ್ಣ ಮೋಹದೊಳೆ ನಾಶವಾಗಲಿ"[೩೮] ಎಂದು ಶಾಪವಿತ್ತು ಯಜ್ಞಕುಂಡಕ್ಕೆ ಹಾರಿ ಪ್ರಾಣಬಿಡುತ್ತಾಳೆ. ಅದೇ ರೀತಿ ಸ್ವರ್ಗದ ಸಿರಿ ರಂಭೆಯು ಭೂಲೋಕಕ್ಕೆ ತನ್ನ ಸಖಿಯರೊಡಗೂಡಿ ಬಂದು ಸರೋವರದಲ್ಲಿ ಮೀಯುತ್ತಿರುವಾಗ ಈತ ಕಾಮೇಶ್ವರನಾಗಿ ಕಾಡುತ್ತಾನೆ. ಆಕೆಯು 'ನಾನು ನಿನ್ನ ಅನುಜನ ಸುತನಾದ ನಳಕೂಬರನ ತಣಿಸಲು ಬಂದಿರುವವಳು. ನಿನ್ನ ಮಗಳ ಸಮಾನವೆಂದು ಬಿಡುಗಡೆ ನೀಡೆಂದರೂ ಬಿಡದೆ ಬಲಾತ್ಕರಿಸುತ್ತಾನೆ. ಈ ಸುದ್ದಿ ತಿಳಿದ ನಳಕೂಬರನು "ಬಲವಂತದಲೆ ಬಾಲೆಯರ ಕೆಡಿಸಲೆತ್ನಿಸುವ ದುಷ್ಕೃತ್ಯದೊಳೆ ನಾಶವೊದಗಲಿ ನಿನಗೆ"[೩೯] ಎಂದು ಶಪಿಸುತ್ತಾನೆ.

ಈ ಶಾಪಗಳೇ ಮುಂದೆ ಫಲಿಸುವಂತೆ ಅಕಂಪನನೆಂಬ ಅಮಾತ್ಯ ಸೀತೆಯ ಬಗ್ಗೆ ರಾವಣನಲ್ಲಿ ಬೀಜ ಬಿತ್ತುತ್ತಾನೆ. ಅಕಂಪನನು, ಖರ-ದೂಷಣರು ಮಡಿದಾಗ ಹೆಣ್ಣು ವೇಷಧರಿಸಿ ಯುದ್ಧ ಭೂಮಿಯಿಂದ ತಪ್ಪಿಸಿಕೊಂಡು ರಾವಣನಲ್ಲಿಗೆ ಬರುತ್ತಾನೆ. ಆತನಿಗೆ ಯುದ್ಧದ ವಾರ್ತೆಯನ್ನು ವಿವರಿಸಿ; ಸಮರದಲ್ಲಿ ಶ್ರೀರಾಮ ಸೌಮಿತ್ರಿಯರನ್ನು ಗೆಲ್ಲಲು ಸಾಧ್ಯವೇ ಇಲ್ಲ. ಜಗದೇಕ ಸುಂದರಿಯಾದ ರಾಮನ ಮಡದಿ ಜಾನಕಿಯನ್ನು ಅಪಹರಿಸಿದರೆ ರಾಮ ವಿರಹದಲಿ ತೊಳಲಿ ಅಳಿದು ಹೋಗುವನು' ಎಂಬ ತಂತ್ರವನ್ನು ಹೇಳಿಕೊಡುತ್ತಾನೆ. ಈ ಕಾರಣಕ್ಕೆ ರಾವಣ ಮಾರೀಚನ ಹತ್ತಿರ ಹೋಗುತ್ತಾನೆ. ಜಾನಕಿಯನ್ನು ಅಪಹರಿಸಿದರೆ ಲಂಕೆಗೆ ಮುಳುವಾಗಿ ನೀನು ಪಾತಾಳ ಸೇರಬೇಕಾಗುತ್ತದೆ ಎಂದು ಹೇಳಿದ ಮಾರೀಚ ರಾವಣನನ್ನು ಲಂಕೆಗೆ ಹಿಂದಿರುಗುವಂತೆ ಮಾಡುತ್ತಾನೆ.

ರಾವಣ ಲಂಕೆಗೆ ಹಿಂದಿರುಗಿದರೆ ತಂಗಿ ಶೂರ್ಪನಖಿ ಗೋಳಿಡುತ್ತಾ ಬಂದು ತನಗಾದ ಅವಸ್ಥೆಯನ್ನು ವರ್ಣಿಸಿ, ರಾವಣನ ಕೋಪ ಕೆರಳುವಂತೆ ರಕ್ಕಸರ ಶಕ್ತಿಯನ್ನು ನಿಂದಿಸುತ್ತಾಳೆ. ರಾಮ ಲಕ್ಷ್ಮಣರ ಶೌರ್ಯವನ್ನು ವಿವರಿಸುತ್ತಾಳೆ. ನಂತರ ಸೀತೆಯ ಸೌಂದರ್ಯವನ್ನು ವರ್ಣಿಸಿ ನಿನ್ನ ಈರೇಳು ಲಕ್ಷ ಲೆಕ್ಕದ ಸುಂದರಿಯರೆಲ್ಲ ಸೀತಾರತ್ನದ ಮುಂದೆ ಗಾಜುಮಣಿಗಳಿದ್ದಂತೆ ಎನ್ನುತ್ತಾಳೆ. ಇಷ್ಟು ಸಾಕು ರಾವಣನಿಗೆ, ಮತ್ತೆ ಮಾರೀಚನ ಹತ್ತಿರ ಹೋಗಿ ಅವನನ್ನು ಬೆದರಿಸಿ 'ಮಾಯಾಮೃಗ'ವಾಗಿ ರಾಮನಾಶ್ರಮದ ಮುಂದೆ ಸುಳಿಯುವಂತೆ ಮಾಡಿ ಸೀತೆಯನ್ನು ಅಪಹರಿಸುತ್ತಾನೆ. ತಡೆಯಲು ಬಂದ ಜಟಾಯುವನ್ನು ಸಂಹರಿಸುತ್ತಾನೆ. ಈ ಪ್ರಸಂಗದಲ್ಲಿ ನಾಗಚಂದ್ರ ಮತ್ತು ಕುವೆಂಪು ಅವರ ಕಾವ್ಯದ ಪ್ರಭಾವವನ್ನು ಕಾಣಬಹುದಾಗಿದೆ.

ಮಾಯಾಮೃಗದ ಬೆನ್ನಟ್ಟಿಹೋಗಿದ್ದ ರಾಮ, ಅವನ ಸಹಾಯಕ್ಕೆಂದು ಹೋಗಿದ್ದ ಲಕ್ಷ್ಮಣ ಇವರಿಬ್ಬರೂ ಪರ್ಣಕುಟಿಗೆ ಹಿಂದಿರುಗಿದರೆ ಅಲ್ಲಿ ಸೀತೆಯಿಲ್ಲ. ರಾಮನಂತೂ ಸೀತಾ ವಿರಹ ದುಃಖಾಗ್ನಿಯಿಂದ ಬಳಲಿಹೋಗುತ್ತಾನೆ. ಲಕ್ಷ್ಮಣನು ಸಮಾಧಾನ ಪಡಿಸುತ್ತಾ 'ಪಕ್ಷಿಸಂಕುಲ ದಕ್ಷಿಣಕೆ ಮುಖಮಾಡಿ ಕೂಗುತ್ತಿದೆ. ರಕ್ಕಸರು ಸೀತೆಯನ್ನು ದಕ್ಷಿಣದಿಕ್ಕಿಗೆ ಒಯ್ದಿರಬಹುದು' ಅತ್ತ ಕಡೆ ಹುಡುಕೋಣ ನಡೆ ಎಂದು ದಂಡಕಾರಣ್ಯದ ಕಡೆಗೆ ಕರೆದು ತರುತ್ತಾನೆ. ದಾರಿಯಲ್ಲಿ ಧರೆಗುರುಳಿ ಬಿದ್ದ ಜಟಾಯು 'ರಾವಣ ಸೀತೆಯನ್ನು ಅಪಹರಿಸಿದ' ಎಂದು ಸುದ್ದಿ ಕೊಟ್ಟು ಮರಣಿಸುತ್ತಾನೆ. ರಾಮ ಲಕ್ಷ್ಮಣರು ದಕ್ಷಿಣಾಭಿಮುಖವಾಗಿ ಪ್ರಯಾಣ ಮಾಡುತ್ತಾರೆ.

ಇತ್ತ ಸರಯೂ ನದಿ ತೀರದಲ್ಲಿ ತಪೋನಿಧಿಯಾದ ಊರ್ಮಿಳೆಯು 'ಎನ್ನಾತ್ಮ ಜ್ಯೋತಿಯಿದು ನಿಮಗೆ ಬೆಳಕಾಗಲಿ ಎನ್ನ ಬಲ ಎನ್ನ ಛಲ ನಿಮ್ಮ ಮನವನು ಏಕಾಗ್ರ ಭಾವದಲಿ ನಡೆಸುತಿರಲಿ' ಎಂದು ಯೋಗ ದುಃಖದಲ್ಲಿ ನಿತ್ಯ ಪ್ರಾರ್ಥನೆಯನ್ನು ಮಾಡುತ್ತಾಳೆ. ಊರ್ಮಿಳೆಯ ಪಾತ್ರವನ್ನು ಕಾವ್ಯದಂಗಳಕ್ಕೆ ಮತ್ತೆ ಮತ್ತೆ ತರುವ ಪ್ರಯತ್ನವನ್ನು ಮೊಯಿಲಿಯವರು ಮಾಡಿದ್ದಾರೆ. ಕುವೆಂಪು ಕಾವ್ಯದ ಪ್ರಭಾವವಿರುವುದು ಕಂಡುಬರುತ್ತದೆ.

ಸೀತಾಪಹರಣವಾಗುವವರೆಗೆ ರಾಮ, ಲಕ್ಷ್ಮಣನಿಗೆ ಮಹಾನ್ವೇಷಣೆಯ ಪಥವನ್ನು ವಿವರಿಸುತ್ತಿದ್ದ, ಈಗ ಲಕ್ಷ್ಮಣನೆ ಮಹಾನ್ವೇಷಣೆಯ ಕಡೆಗೆ ರಾಮನನ್ನು ಕರೆದೊಯ್ಯುತ್ತಾನೆ. ಕ್ರೌಂಚಾರಣ್ಯವನ್ನು ದಾಟಿ ಕಬಂಧನಿಗೆ ರಾಮ ಮುಕ್ತಿ ನೀಡುತ್ತಾನೆ. ಕಬಂಧನು ರಾಮನಿಗೆ ರಾವಣನಿಂದ ಸೀತೆಯನ್ನು ಮರಳಿ ಪಡೆಯುವ ಬಗ್ಗೆ, ಸುಗ್ರೀವನೆಂಬ ವಾನರನ ಸಹಾಯ ಪಡೆಯಲು ಹೇಳುವುದಲ್ಲದೆ, ಶಬರಿ ರಾಮದರ್ಶನಕ್ಕಾಗಿ ಕಾತರಿಸುತ್ತಿರುವುದಾಗಿಯೂ ಅಲ್ಲಿನ ಪಂಪಾಸರೋವರ, ಕನ್ನಡಭಾಷೆ, ಕನ್ನಡನಾಡಿನ ಜನ ಎಲ್ಲವನ್ನೂ ವರ್ಣಿಸಿ ಹೇಳುವನು.

ಶಬರಿಯ ಪ್ರಸಂಗದಲ್ಲಿ, ಪಂಪಾಸರೋವರ ನಿರ್ಮಾಣಗೊಂಡಬಗೆ, ಮಾತಂಗಮುನಿಗಳ ದಿವ್ಯಜ್ಞಾನದೃಷ್ಟಿ ಇವೆಲ್ಲ ಘಟನೆಗಳೂ ಮೂಲಕ್ಕಿಂತ ವಿಸ್ತಾರವಾಗಿವೆ. ಶಬರಿಯು ರಾಮನನ್ನು ಸ್ತುತಿಸುವುದಂತೂ ಭಕ್ತಿಭಾವರಸದಿಂದ ತುಂಬಿಹೋಗಿದೆ. ಈ ಪ್ರಸಂಗದಲ್ಲಿ ಹರಿಹರನ ರಗಳೆಯ ಲಯ ಉಕ್ಕಿಹರಿಯುತ್ತದೆ. ಶಬರಿ ಚರಮ ಸೋಪಾನವೇರಿದ ನಂತರ

**"ನಾನೆಲ್ಲಿ ಸಾಕೇತವೆಲ್ಲಿ, ಮತಂಗಾಶ್ರಮವೆಲ್ಲಿ**
**ಶಬರಿತಾನೆಲ್ಲಿ, ಎತ್ತಣೆಂದೆತ್ತ ಸಂಬಂಧವಿದು**
**ಬೆಸೆದುಕೊಂಡಿತು ಆಹಾ!"**[೩೯]

ರಾಮನ ಈ ಮಾತುಗಳಲ್ಲಿ ಅಲ್ಲಮಪ್ರಭುವಿನ ವಚನದ ಪ್ರಭಾವವಿದೆ. ಅದೇ ರೀತಿ ರಾಮನು ಸೀತೆಯನ್ನು ಹುಡುಕುತ್ತಾ ಹುಡುಕುತ್ತಾ "ಕಂಡಿರಾ ಕಂಡಿರಾ ಕಮಲಕ್ಕೆ ಹಾತೊರೆವ ಕಮಲದಳ ನೇತ್ರೆಯಧರಾ ಮರುಗ ಮಾಲತಿ ಮಲ್ಲೆ ಜಾಜಿ ಸಂಪಿಗೆ ಹೊನ್ನೆ ಕಂಡಿರಾ ಕಂಡಿರಾ _..ಕಂಡಿರಲು ಪೇಳಿರೈ"[೪೦] ಎಂದು ಅರಸುವಲ್ಲಿ ಅಕ್ಕಮಹಾದೇವಿಯ ವಚನ ನೆನಪಾಗುತ್ತದೆ. ಹಾಗೆಯೇ ಹನುಮಂತನು ರಾಮನನ್ನು ಕುರಿತು –

"ನಿನ್ನ ನಾಮವುಯೆನ್ನ ಕರ್ಣ ತುಂಬಿತ್ತು ಪ್ರಭುವೆ
ನಿನ್ನ ರೂಪವು ಯೆನ್ನ ಕಣ್ಣ ತುಂಬಿತ್ತು ಪ್ರಭುವೆ

---

ನಿನ್ನ ದರ್ಶನಮಾಯ್ತು ಮತ್ತೇನ ಕಾಣಲಿದೆ?
ನಿನ್ನ ನುಡಿಕೇಳಾಯ್ತು ಮತ್ತೇನ ಕೇಳಲಿದೆ?

ನಿನ್ನ ಸ್ಪರ್ಶನಮಾಯ್ತು ಮತ್ತೇನ ಮುಟ್ಟಲಿದೆ?
ರಾಮ ರಾಮಯೆನಲು ಮತ್ತೇನ ನುಡಿಯಲಿದೆ?"[೪೧]

ಹನುಮಂತನ ಈ ರಾಮಸ್ತುತಿಯಲ್ಲಿ ಬಸವಣ್ಣನವರ ವಚನದ ಪ್ರಭಾವವನ್ನು ಗುರುತಿಸಬಹುದಾಗಿದೆ.

ಹನುಮಂತ ಸುಗ್ರೀವನನ್ನು ಕುರಿತು 'ರಾಮಲಕ್ಷ್ಮಣರು ಅಯೋಧ್ಯಾ ಸಂಸ್ಕೃತಿಯನ್ನು ಬಿತ್ತರಿಸಲು ಬಂದಿದ್ದಾರೆ. ಅವರದು ಹೊರನೋಟಕ್ಕೆ ನಾಗರಿಕತೆಯ ವೇಷವಾದರೂ ಅತಃಸತ್ವದಲಿ ಸಂಸ್ಕೃತಿಯನ್ನೇ ತುಂಬಿಕೊಂಡವರು. ಪಿತೃವಾಕ್ಯ ಪರಿಪಾಲನೆಗೆಂದು ಅರಣ್ಯವಾಸವ ಕೈಗೊಂಡು ಧರ್ಮನಿರತರಾದವರು. ಆದರೆ ಲಂಪಟನಾದ ರಾವಣ ಸೀತಾಮಾತೆಯನ್ನು ಅಪಹರಿಸಿ ಮೃತ್ಯುವನ್ನೇ ಕೆಣಕಿದ್ದಾನೆ. ಈಗ ರಾವಣನನ್ನು ಸಂಹರಿಸಲು ನಿನ್ನ ಗೆಳೆತನ ಬಯಸಿ ಬಂದಿದ್ದಾರೆ ಎಂದು ಹೇಳುತ್ತಾನೆ. ಸುಗ್ರೀವ ರಾಮಲಕ್ಷ್ಮಣರನ್ನು ಕರೆಸಿ ಪರಿಚಯಿಸಿಕೊಂಡು ರಾವಣನನ್ನು ಸದೆಬಡಿಯಲು ಸಹಕರಿಸುವುದಾಗಿ ಒಪ್ಪಿಕೊಳ್ಳುತ್ತಾನೆ. ಅದೇ ರೀತಿ ತನ್ನ ಅಣ್ಣ ವಾಲಿಯು ತನ್ನ ಧರ್ಮಸತಿ ರುಮೆಯನ್ನು ಅಪಹರಿಸಿದ್ದಾನೆ. .ನಾನು ಅವನ ಉಪಟಳದಿಂದ ತಲ್ಲಣಗೊಂಡು ಈ ಋಷ್ಯಮೂಕಪರ್ವತದಲ್ಲಿ ನೆಲೆಸುವಂತಾಗಿದೆ ಎಂಬ ತನ್ನ ಸಂಕಟದ ಕಥೆಯನ್ನೆಲ್ಲ ಹೇಳಿಕೊಳ್ಳುತ್ತಾನೆ.

ಶ್ರೀರಾಮ ಧರ್ಮನಿಷ್ಕರ್ಷೆ ಮಾಡಲು ವಾಲಿ-ಸುಗ್ರೀವರ ವೈರಕ್ಕೆ ಕಾರಣ ಕೇಳಿದಾಗ ಸುಗ್ರೀವನು "ದುಂದುಭಿಯ ಮಗ 'ಮಾಯಾವಿ' ರಕ್ಕಸ ಅಣ್ಣನನ್ನು ಕೆಣಕಲು ಬಂದದ್ದು, ಅಣ್ಣವಾಲಿ ರಾತ್ರಿಯೇ ಅವನ ಮೇಲೆ ಯುದ್ಧಕ್ಕೆ ಹೋಗಿದ್ದು, ಕೊನೆಗೆ ಮಾಯಾವಿ ಗುಹೆಯ ಪೊಕ್ಕಿದ್ದು, ಅವನನ್ನು ಅಟ್ಟಿಸಿಕೊಂಡು ಹೋದ ವಾಲಿ ಆರು ತಿಂಗಳಾದರೂ ಗುಹೆಯಿಂದ ಹೊರಗೆ ಬಾರದೆ ಇದ್ದದ್ದು, ಅತ್ತಿಗೆಯ ಅಣತಿಯಂತೆ ತಾನು ರಾಜ್ಯಭಾರವಹಿಸಿಕೊಂಡದ್ದು ಮತ್ತು ತಾನೆ ದೊರೆಯಾದ ಮೇಲೆ ತನ್ನ

ರಾಜ್ಯದಲಿ ತಂದಂತಹ ಹೊಸ ನೀತಿಗಳು, ಶಾಸನಗಳು, ಯೋಜನೆಯ ನವನಿರ್ಮಾಣದ ಕಾರ್ಯಗಳು ಎಲ್ಲಕ್ಕಿಂತ ಮುಖ್ಯವಾಗಿ ಶಿಕ್ಷಣನೀತಿಯನ್ನು ರೂಪಿಸಿದ್ದು-ಈ ಎಲ್ಲಾ ಕಥೆಯನ್ನು ರಾಮ ಲಕ್ಷ್ಮಣರಿಗೆ ಸುಗ್ರೀವ ನಿರೂಪಿಸುವನು. ಸುಗ್ರೀವ ಕೈಗೊಂಡ ಹೊಸ ನೀತಿ, ಶಾಸನಗಳು, ಯೋಜನೆ ನಿರ್ಮಾಣಗಳು, ಶಿಕ್ಷಣನೀತಿ, ಇವೆಲ್ಲ ಮೊಯಿಲಿಯವರು ಮಂತ್ರಿಗಳಾಗಿದ್ದಾಗ ಕೈಗೊಂಡಿದ್ದ ಕಾರ್ಯಗಳು. ಸುಗ್ರೀವನ ಪ್ರಕರಣದಲ್ಲಿ ಅವುಗಳನೆಲ್ಲ ಮೂಲಕಥೆಯ ಜೊತೆಗೆ ಚೆನ್ನಾಗಿ ಬಳಸಿಕೊಂಡಿದ್ದಾರೆ.

ಸುಗ್ರೀವ ರಾಮನ ಬಲವನ್ನು ಅನುಮಾನಿಸಿ ವಾಲಿಯನ್ನು ಸಂಹರಿಸಲು ಸಮರ್ಥನೇ ಎಂಬ ಶಂಕೆ ಪಟ್ಟಾಗ ರಾಮನು ಏಳು ಸಾಲವೃಕ್ಷಗಳನ್ನು ಒಂದೇ ಬಾಣದಿಂದ ಛೇದಿಸುವುದು ಮೂಲದಲ್ಲಿದ್ದಂತೆ ಬಳಕೆಯಾಗಿದೆ. ಆದರೆ ವಾಲಿಯನ್ನು ವಧಿಸಲು ರಾಮನಿಗೆ ಧರ್ಮಜಿಜ್ಞಾಸೆಯುಂಟಾಗುತ್ತದೆ. ಇದರ ಜೊತೆಗೆ ತಾನು ವಾಲಿಯನ್ನು ವಧಿಸಿದರೆ ಜನಪದರು ಮೆಚ್ಚುವರೊ ಇಲ್ಲವೋ? ಅವರೆಲ್ಲ ಬಂಡೆದ್ದು ಸಮರವನೆ ಸಾರಿದರೆ ಎಂಬ ಸಂದೇಹಕ್ಕೊಳಗಾದಾಗ ಲಕ್ಷ್ಮಣನು 'ಲಂಕೇಶ ವಾಲಿಯರು ಪೆಡಂಭೂತಗಳಾಗಿ ಅಂಟುರೋಗಕ್ಕೆಲ್ಲ ನಂಟರೇ ಆಗಿದ್ದಾರೆ. ಇಂತಹವರನ್ನು ಸಂಹರಿಸಲು ಹಿಂಜರಿಕೆಯೇಕೆ? ಈ ಹಿಂದೆ ಸಕಲಾಶ್ವ ಮತ್ತವನ ಪುತ್ರ ದೇವಪ್ರಿಯರನ್ನು ಯಾವ ಕಾರಣಕ್ಕೆ ವಧಿಸಿದೆನ್ನುವುದನ್ನು ಮರೆತುಬಿಡುವುದೆ, ಈ ವಾಲಿಯೂ ಅದೇ ಜಾತಿಗೆ ಸೇರಿದವನು, ವಧಿಸಲು ಅಡ್ಡಿಯಿಲ್ಲ; ಎಂಬ ರಾಜನೀತಿಯನ್ನೇ ಹೇಳುತ್ತಾನೆ.

ಸುಗ್ರೀವನಂತೂ ವಾಲಿಯ ಮೇಲೆ ಮಲ್ಲಯುದ್ಧ ಸಾರಿ ಪೆಟ್ಟುತಿಂದು 'ರಾಮ ನಿನ್ನ ನಂಬಿ ನಾನು ಮೋಸಹೋದೆ. ನೀನೇಕೆ ವಾಲಿಯನ್ನು ವಧಿಸಲಿಲ್ಲ? ಎಂದು ಮುಂತಾಗಿ ರೋದಿಸುತ್ತಾನೆ. ಸೌಮಿತ್ರಿಯು ಅವನನ್ನು ಸಂತೈಸಿ 'ಶ್ರೀರಾಮನು ಧರ್ಮ ಸೂಕ್ಷ್ಮದ ಯುಗಸುಳಿಯೊಳಗೆ ಸಿಲುಕಿ ವಾಲಿ ಬೆನ್ನಿಗೆಂತು ಇರಿಯುವುದು' ಎಂಬ ಚಿಂತೆಯಲ್ಲಿ ಮುಳುಗಿದ್ದಾನೆ ಎಂದಾಗ ಸುಗ್ರೀವನು "ಭ್ರಾತೃ ವಾತ್ಸಲ್ಯದಮೃತವನೆ ಕುಡಿದೆನಗೆ ವಾಲಿವಧೆ ನುಂಗಲಾರದ ಬಿಸಿತುಪ್ಪವೇ. ಆದರೆ ವಧೆಯಿಂದಲ್ಲದೆ ರುಮೆಯ ಭಾಗ್ಯವದಿಲ್ಲವೆಂದೆನುವ ಹೊಳೆವು ಎನಗಿಹುದು. ಆದೊಡೇಂ ದಂಡನೀತಿಯದೇನು ಅನಿವಾರ್ಯ ಅಸ್ತ್ರ ಹದವರಿತು ವಿಧಿಸುವುದು ಚಿತ್ತಕ್ಷೇಮ!"[೬೨] ಎಂದಾಗ ರಾಮ ನಿಮ್ಮರಲ್ಲಿ ವಾಲಿ

ಯಾರು, ಸುಗ್ರೀವ ಯಾರು ಎಂಬ ಗುರುತು ಹಚ್ಚುವುದೇ ಕಷ್ಟವೆಂದಾಗ ಹನುಮನು ಸುಗ್ರೀವನಿಗೆ ಗುರುತಿಗಾಗಿ ನಾಗಪುಷ್ಪ ಮಾಲೆಯನ್ನು ತೊಡಿಸುತ್ತಾನೆ.

ಶ್ರೀರಾಮ ಮರೆಯಲ್ಲಿ ನಿಂದು ವಾಲಿಯನ್ನು ವಧಿಸಿದಾಗ ಮರಣಶಯ್ಯೆಯಲ್ಲಿದ್ದ ವಾಲಿಯು ರಾಮನನ್ನು ಕುರಿತು ಕೇಳುವ ಪ್ರಶ್ನೆಗಳನ್ನು ಗಮನಿಸಬೇಕು

**"ಈಪರಿಯ ರಣಕಲೆಯನೆಲ್ಲಿ ಕಲಿತೆಯೊ ಪೇಳು_**
**ನಿನ್ನ ಕರ್ತವ್ಯದೊಳು ಚ್ಯುತಿಯಾಯ್ತು ಜಗದೊಳಗೆ**
**ಲಂಕೇಶ ಪತನವನು ಎಂತು ಸಾಧಿಪೆ ನೀನು?"[2]**

ನೀನು ಬಯಸಿದ್ದರೆ ರಾವಣನ ಕಂಠವನು ಪಾಶದಲಿ ಬಿಗಿದೆಳೆದು ತರುತ್ತಿದ್ದೆ. ನನ್ನಿಂದ ಯಾವ ಪ್ರಮಾದವಾಯಿತು? ಯಜ್ಞಭಂಗಗೈದು ಮುನಿಮಾರ್ಗ ಕೆಡಿಸಿದೆನೆ? ಪರರ ಸಂಪತ್ತನ್ನು ಅಪಹರಿಸಿದೆನೆ? ಸಮಚಿತ್ತ ನಿನಗಿದ್ದಿದ್ದರೆ ನನ್ನ ಕರೆಸಿ ಹಿತನುಡಿಯ ಹೇಳಿ ಸೋದರರನ್ನು ಬೆಸೆಯಬಹುದಿತ್ತಲ್ಲಾ! ಆದರೆ ನೀನು ಹಾಗೆ ಮಾಡದೆ ಅಂಜುಗುಳಿಯಾದೆ! ವೀರಮರಣೋತ್ಸವವು ತಪ್ಪಿಯೇ ಹೋಯಿತು, ಎನ್ನುತ್ತಾನೆ. ಅದಕ್ಕೆ ರಾಮನು, 'ನೀನು ರಾವಣನಿಗೆ ಒಡನಾಡಿ. ಹಾಗಿರಬೇಕಾದರೆ ಜಾನಕಿಯ ಪಡೆಯಲು ನೀನು ಹೇಗೆ ಸಹಕರಿಸುವೆ? ಲಂಕೇಶಗೈದಿರುವ ಸ್ತ್ರೀಹಿಂಸೆಯ ಪಾತಕಕೆ ನೀನೂ ಹೊಣೆಗಾರನಾಗಿರುವೆ. ನಾನಿಲ್ಲಿಗೆ ಬಂದು ಹಲವು ಮಾಸಗಳೇ ಕಳೆದರೂ ನಾನು ಶತ್ರುವೊ ಮಿತ್ರನೊ ಎಂಬುದನ್ನು ಅರಿಯದೆ ರಾಜಕರ್ತವ್ಯದಿಂದ ಚ್ಯುತನಾಗಿ ವರ್ತಿಸಿದೆ. ಸೋದರನ ಆರ್ತನುಡಿ ಆಲಿಸದೆ ಬಡಿದಟ್ಟಿ ಅವನ ಸತಿಯನ್ನು ನಿನ್ನ ಅಂತಃಪುರದೊಳು ಬಂಧಿಯಾಗಿಟ್ಟು ಮೃಗದಂತೆ ವರ್ತಿಸಿದೆ. ಮೃಗಗಳ ಹಿಡಿಯಲು ಹಲವು ತಂತ್ರಗಳ ಬಳಸುವಂತೆ ನಾನು ಬಳಸಿ ನಿನ್ನ ಕೊಂದೆ. ಈಗ ಜಾನಕಿಯ ಪಡೆಯಲು ನನಗೆ ಸುಗ್ರೀವಾದಿಗಳ ಬೆಂಬಲವಿದೆ. ಆದರೆ ನೀನು ಅನ್ಯಾಯವೆಸಗುವವನ ಸಖ್ಯ ಬೆಳಸಿದೆ. ರಾವಣಾದಿ ಲೋಕ ಕಂಟಕರೆಲ್ಲ ನಿನ್ನ ಬಗಲೊಳಗಿಹರು. ಭೋಗ ಜಾತ್ರೆಯೊಳಗೆ ಮುಳುಗಿರುವ ನಿನಗೆಂತು ಕೇಳಿಸುವುದು ಸೀತಾ ರುಮೆಯರ ಅಳಲು. ಮಲ್ಲಯುದ್ಧ ಕಾನನ ಯುದ್ಧಗಳಲ್ಲಿ ನೀನು ಪ್ರವೀಣ, ಆದರೆ ಶರಸಮರ ನಿನಗಿಲ್ಲ. ನನಗಿದೆ ಅದರ ಪ್ರಾಬಲ್ಯ ಹೀಗಿರಬೇಕಾದರೆ ಮುಖಾಮುಖಿ ಸಮರ ನಡೆಸಲು ಸಾಧ್ಯವೇ? ಅಲ್ಲದೆ ಮೃಗಪಶುವು ನೀನಾದ್ದರಿಂದ ಕೂರಂಬುನನ್ನು ಎತ್ತಕಡೆಯಿಂದ ಎಸೆದರೇನಂತೆ? ಪ್ರಾಣಿಯೆಂದೊಡೆ ಅನಿತೆ; ಸರ್ವವೂ ಸಮ್ಮತವೇ! ಕತ್ತಲೆಯ ಕಡಲೊಳಗೆ ದೀಪವಾಗದೆ ಹೋದೆ ನೀನು. ಶ್ರಮ ಸಂಸ್ಕೃತಿಯ ಧ್ವಜವ ಏರಿಸದೆ ಹೋದೆ.

ಕರ್ನಾಟ ಕೀರ್ತಿ ಕಳಸನೆಂಬ ತೇಜಸ್ಸನ್ನು ಕಳೆದುಕೊಂಡೆ. ಇಷ್ಟೆಲ್ಲ ಆದರೂ ನಾನು ನಿನ್ನ ಸಾವಿಗೆ ಪರಿತಾಪ ಪಡುತ್ತಿರುವೆ, ಶೋಕದಲ್ಲಿ ಮುಳುಗಿರುವೆ, ಎನ್ನುತ್ತಾನೆ.

ಮರಣಮುಖಿಯಾಗಿದ್ದ ವಾಲಿಯು ಸುಗ್ರೀವನನ್ನು ಕರೆದಪ್ಪಿ "ರುಮೆಯ ಕಾಮಿಸಲಿಲ್ಲ, ಕರುಳಬಳ್ಳಿಯಂತೆ ಪಾಲಿಸಿದೆ. ಆದರೆ ರಾವಣನ ಸಂಸರ್ಗ ಹರಣಕೇ ಮುಳುವಾಯ್ತು! ಶ್ರೀರಾಮನೊಡನೆ ನೇರ ಸಮರಕ್ಕಿಳಿದಿದ್ದರೆ ನಾನೊಬ್ಬನೇ ಅಲ್ಲ ವಾನರ ಸಂತತಿಯೇ ಅಳಿದುಬಿಡುತ್ತಿತ್ತು. ಆ ಪತನವ ತಡೆದ ಶ್ರೀರಾಮನಿಗೆ ಕರ್ಣಾಟ ಚಿರರುಣಿ. ಒಬ್ಬ ವಾಲಿ ಮಡಿದರೇನು, ಸಾವಿರ ಸಂಖ್ಯೆಯಲಿ ಕಿಷ್ಕಿಂಧೆ ಪಟ್ಟಣದ ವಾಲಿಗಳನುಳಿಸಿದ ರಾಮ. ರಾವಣನ ದರ್ಪವ ಮುರಿಯಲು ಕಿಷ್ಕಿಂಧೆ ನೆರವಾಗುವುದಕ್ಕಿಂತ ಪುಣ್ಯದ ಕೆಲಸವಿನ್ನಾವುದಿದೆ? ರಾಮಸೇವೆಯನು ನೀನೊಪ್ಪಿಕೊ"[೪೪] ಎಂದಾಗ ಸುಗ್ರೀವನು "ಇಂಥ ಅಣ್ಣನಿಗೆ ಕಾಮುಕ ಪಟ್ಟವ ಕಟ್ಟಿ ಕೊಲಿಸಿದೆನಲ್ಲಾ! ಈ ಪರಮಪಾತಕಿಯನು ಕ್ಷಮಿಸು" ಎಂದು ಬೇಡಿದನಲ್ಲದೆ ಅಗ್ನಿಪ್ರವೇಶಕ್ಕೆ ಸಿದ್ಧನಾಗುತ್ತಾನೆ. ಶ್ರೀರಾಮ ಸುಗ್ರೀವನನ್ನು ತಡೆದು ನಂತರ ತಾರಾದೇವಿಯನ್ನು ಸಂತೈಸುತ್ತಾನೆ. ನಂತರ ರಾಮನ ನುಡಿಗಳಿಗೆ ಒಪ್ಪಿ ವಾನರರು ಸುಗ್ರೀವಗೆ ರಾಜಪಟ್ಟ, ಅಂಗದನಿಗೆ ಯುವರಾಜ ಪಟ್ಟ ಕಟ್ಟುತ್ತಾರೆ.

ಸುಗ್ರೀವ ರಾಜವೈಭೋಗದಲ್ಲಿ ಸ್ವಲ್ಪ ಕಾಲ ತನ್ನ ಒಪ್ಪಂದ ಕಾರ್ಯವನ್ನು ಮರೆಯುತ್ತಾನೆ. ಆಗ ಹನುಮಂತನೇ ರಾಮಕಾರ್ಯವನ್ನೇಕೆ ಮರೆತೆ? ಎಂದು ಎಚ್ಚರಿಸಿದಾಗ ತಕ್ಷಣವೇ ಸುಗ್ರೀವ ಅಂಗಧನ ಸಾರಥ್ಯದಲ್ಲಿ ಸೈನ್ಯವನ್ನು ಅನುಗೊಳಿಸುತ್ತಾನಾದರೂ ಮತ್ತೆ ಮೈಮರೆತು ಸುಖದ ಲೋಲುಪತೆಯಲ್ಲಿ ಮುಳುಗುತ್ತಾನೆ.

ಶ್ರೀರಾಮ ಲಕ್ಷ್ಮಣನನ್ನು ಕುರಿತು ಸುಗ್ರೀವನನ್ನು ಎಚ್ಚರಿಸಿ ಬಾರೆಂದು ಕಳುಹುತ್ತಾನೆ. ಲಕ್ಷ್ಮಣ ಸುಗ್ರೀವನರಮನೆಗೆ ಬಂದು ಕೋಪೋದ್ರಿಕ್ತನಾಗಿ ಕೂಗಾಡುತ್ತಾನೆ. ಹನುಮಂತ, ಅಂಗದನು ಕಾಲವಿಳಂಬವಾದುದು; ಕ್ಷಮೆ ಬೇಡೆಂದು ಹೇಳಿದಾಗ ಸುಗ್ರೀವ, ಸೌಮಿತ್ರಿಯ ಸಮಾಧಾನ ಮಾಡಲು ರುಮೆಯನ್ನು ಕಳುಹಿಸುತ್ತಾನೆ. ರುಮೆಯು ಲಕ್ಷ್ಮಣನಿಗೆ ತಾಳ್ಮೆಯಿಂದ ಸಮಾಧಾನದ ಮಾತುಗಳನ್ನು ಹೇಳಿದರೂ ಕೇಳದೆ ಲಕ್ಷ್ಮಣನು ಸುಗ್ರೀವ ಮತ್ತವನ ವಾನರಸೇನೆಯನೆ ಮೆಟ್ಟಿ ಕೊಲ್ಲುವೆನೀಗ ಎಂದಾಗ ಮಾತ್ರ ರುಮೆ ಕೆರಳಿ ನಿಲ್ಲುತ್ತಾಳೆ. "ಏನೆಂದೆ ಸೌಮಿತ್ರಿ, ಸುಗ್ರೀವನೇನು ತರಳನೇ ನಾವೆಲ್ಲ ಸಾಕೇತಕೇಂ

ಜೀತದಾಳಾಗಿಹವೆ_ ಕಟ್ಟಾಳು ನಾವಾಗೆ, ನಮ್ಮ ಕೆಣಕುವೊಡೀಗ ಸಾಕೇತ ರಾಜ್ಯವೇ ನಾಶವಪ್ಪುದು ಕೇಳು ಕರ್ನಾಟ ಜನಪದರು ಸ್ವಾಭಿಮಾನಿಗಳಯ್ಯಾ. ಕೊಂದುಬಿಡುವೆ ಕೊಚ್ಚಿಬಿಡುವೆನೆಂಬ ನುಡಿಗಳಿವು ಬಾಲಿಶವು. ಇಕ್ಷ್ವಾಕು ಕುಲಜರಿಗೆ ಶೋಭೆತರುವುದಲ್ಲ!" ಎಂದು ಎಚ್ಚರಿಸಿ ರಾಮಕಜ್ಜಕೆ ವಾನರರು ಸಿದ್ಧವಾಗುತ್ತಿರುವ ಬಗೆಯನ್ನು ತಿಳಿಸುತ್ತಾಳೆ. ಕನ್ನಡ ನೆಲದ ಹೆಣ್ಣು 'ಕೆರಳಿನಿಂತರೆ ಕಾಳಿ' ಎನ್ನುವುದನ್ನು ಲಕ್ಷ್ಮಣನಿಗೆ ತೋರಿಸುತ್ತಾಳೆ. ಲಕ್ಷ್ಮಣನ ಕೋಪ ಹಾಗೇ ತಣ್ಣಗಾಗುತ್ತದೆ.

ಸೀತೆಯ ಅನ್ವೇಷಣೆಗಾಗಿ ಕಿಷ್ಕಿಂಧೆಯಲ್ಲಿ ವಾನರ ಮಹಾಮೇಳ ಸೇರುತ್ತದೆ, ಸುಗ್ರೀವನು ಶ್ರೀರಾಮನನ್ನು ಕುರಿತು ಸೈನ್ಯವನ್ನು ತೋರಿಸುತ್ತಾ

**"ನಿನ್ನ ಸೇವೆಗೆ ಸಂದ ರಾಮಸೇವಕರಿವರು**
**ರಾಷ್ಟ್ರರಕ್ಷಣೆ ದೀಕ್ಷೆ ಜೀವದುಸಿರಾಗಿಹುದು**
**ಗುಡಿಯ ಒಡೆವವರಲ್ಲ ದ್ವೇಷ ಹರಡುವವರಲ್ಲ**
**ಪರಮತ ದ್ವೇಷವನು ಬಿತ್ತಿ ಬೆಳೆವವರಲ್ಲ**
**ಕರ್ನಾಟ ಸಂಸ್ಕೃತಿಯ ಸಿರಿದೀಪಮಾಗಿಹರು**
**ಉತ್ತರಕು ದಕ್ಷಿಣಕು ಸ್ನೇಹ ಸೇತುವೆ ಕಟ್ಟಿ**
**ರಾಷ್ಟ್ರ ನವನಿರ್ಮಾಣ ರೂವಾರಿಯಾಗಿಹರು.."[೮೫]**

ಎಂದು ಹೇಳುತ್ತಾನೆ. ಸುಗ್ರೀವನ ಈ ಮಾತುಗಳಲ್ಲಿ ಕರ್ನಾಟಕದ ಜನ ಎಷ್ಟು ಸುಸಂಸ್ಕೃತರು ಎನ್ನುವುದು ವ್ಯಕ್ತವಾಗುತ್ತದೆ. ಮೊಯಿಲಿಯವರಿಗೆ ಅವಕಾಶ ಸಿಕ್ಕ ಕಡೆಯಲೆಲ್ಲಾ ಕನ್ನಡನಾಡಿನ ಸಂಸ್ಕೃತಿ, ಇಲ್ಲಿಯ ಜನರ ವೀರತನ, ಶೌರ್ಯ, ನಾಡು ನುಡಿಗಾಗಿ ಹೋರಾಡುವ ಮನೋಭಾವ ಇವೆಲ್ಲವನ್ನು ರಾಮಕಥಾಭಿತ್ತಿಯಲ್ಲಿ ತರಲು ಪ್ರಯತ್ನಪಟ್ಟಿದ್ದಾರೆ. ಒಂದೆರಡು ಪ್ರಸಂಗಗಳನ್ನು ಗಮನಿಸೋಣ.

ಸೌಮಿತ್ರಿ ಸುಗ್ರೀವರು ರಣಚಿಂತನೆಯಲ್ಲಿ ಮಗ್ನರಾಗಿರುವಾಗ ಒಬ್ಬ ವೀರರಮಣಿ ಅವರಲ್ಲಿ ಬಂದು ಈ ರೀತಿ ಹೇಳುತ್ತಾನೆ:–

"ಜಯವಿರಲಿ ಸೌಮಿತ್ರಿ, ಕನ್ನಡದ ಜೋಳವನು
ಉಂಡು ಬೆಳದಿಹ ಜೀವ, ಸಿಡಿಲು ಮಿಂಚಿನ ತೆರದಿ
ಖಡ್ಗವನು ಝಳಪಿಸುತ ಹೋರಾಡಿ ಗೆಲ್ಲುವೆವು
ಶ್ರೀರಾಮಸೇವೆಯೊಳು ಪೌರುಷವ ಮೆರೆಸುವೆವು
ಶತ್ರುವಿನ ಗಜದಂತದುಯ್ಯಾಲೆಯಲಿ ತೂಗುವೆವು
ರುಂಡ ಹಾರಿದೊಡೇನು ಮುಂಡದೊಳೆ ಮುನ್ನೆಡೆದು
ಶತ್ರುವಿನ ರುಂಡವನು ಬಿಡದೆ ಚೆಂಡಾಡುವೆವು."[೪೬]

ಈ ರೀತಿ ವೀರಯೋಧನೊಬ್ಬ ತನ್ನ ರಣೋತ್ಸಾಹವನ್ನು ಪ್ರಕಟಿಸುತ್ತಿದ್ದಂತೆಯೇ ಮತ್ತೊಬ್ಬಳು ವೀರನಾರಿ ತನ್ನ ಗಂಡನೊಡನೆ ಅಲ್ಲಿಗೆ ಬರುತ್ತಾಳೆ. ಬಂದವಳೇ "ಸೌಮಿತ್ರಿ ಕೇಳು, ನನ್ನ ಪತಿ ಬಲಭೀಮನಿದ್ದಾನೆ. ಸೀತಾಮಾತೆಯನ್ನು ಲಂಕೇಶನ ಬಂಧನದಿಂದ ಬಿಡಿಸಲು ನನ್ನ ಮುತ್ತೈದೆಸಿರಿಯನ್ನು ಒತ್ತಿಟ್ಟು ಯುದ್ಧಕ್ಕೆ ತೆರಳುವನು.

"ಸರ್ವವೂ ವಿಧಿಲಿಖಿತ
ಎಲ್ಲಾದೊಡೇನಂತೆ ಕೂಡುವೆನು ರಮಣನನು
ಗೆದ್ದುಬಂದೊಡೆ ಮತ್ತೆ ಕಿಷ್ಕಿಂಧೆ ನಗರಿಯಲಿ
ಸೋತು ಸತ್ತೊಡೆ ಮತ್ತೆ ದೇವೇಂದ್ರನಗರಿಯಲಿ
ಮಾಸತಿಯು ನಾನಾಗಿ ಸಗ್ಗದಪ್ಸರೆಯಾಗಿ
ಉತ್ಸವವ ಹೊರಡಿಸುವೆ ಇದಿರುಗೊಂಬೆನು ಪತಿಯ
ಕನ್ನಡದ ಪೌರುಷವನಿಂತು ಮೆರೆಯಲು ಬೇಕು"[೪೭]

ಸಮರ ಸನ್ನಾಹವು ಬಿರುಸಿನಿಂದ ನಡೆಯುತ್ತಿರಬೇಕಾದರೆ ಶ್ರೀರಾಮನು ಸೌಮಿತ್ರಿಯನ್ನು ಕುರಿತು "ಶಾಂತಿ ಮಂತ್ರವು ಬೇಕು, ರಕ್ತಪಾತವು ಬೇಡ, ನಿನ್ನಿನ ರಾತ್ರಿಯ ಕನಸಿನಲ್ಲಿ, ಕೋಟಿ ಕೋಟಿ ಸೈನಿಕರು ಯುದ್ಧದಲ್ಲಿ ನಾಶವಾಗುವುದನ್ನೂ ಆ ಹುಚ್ಚು ದಿಗ್ವಿಜಯದಲ್ಲಿ ಮಣ್ಣಾಗಿ ಹೋದುದನ್ನು ಕಂಡೆ. ಈ ರೀತಿಯ ದುಃಸ್ವಪ್ನ ಮುಂದಿನ ಲಂಕಾಸಮರವನ್ನು ಸೂಚಿಸುತ್ತದೆ.

"ಯುಗವನಂತ್ಯಕೆ ತರ್ಪ ಸಮರಬೇಕೇ ನಮಗೆ
ಮೃತ್ಯು ದೇವತೆಯಲ್ಲಿ ಜಗವ ನುಂಗುವೆನೆಂದು
ಬಾಯ್ದೆರೆದು ನಿಂದಿಹಳು, ರಾಮರಾವಣ ತಲೆಗೆ
ಜೀವಸಂತತಿಯೆಲ್ಲ ಕಡೆಗಾಂಬುದೇನೋ
ಯುಗದಂತ್ಯದಂಚಿನಲಿ ನಾವೆಲ್ಲ ನಿಂದಿಹೆವು"[೬೮]

ಈ ಮಾತುಗಳಲ್ಲಿ ಶಾಂತಿಪ್ರಿಯನಾದ ರಾಮನು ಯುದ್ಧವಿರೋಧಿ ನಿಲುವನ್ನು ಪ್ರಕಟಿಸುತ್ತಾನೆ. ಇಂದಿನ ಜಾಗತಿಕ ಸಂದರ್ಭದಲ್ಲಿ ಈಗಾಗಲೇ ಎರಡು ಮಹಾಯುದ್ಧಗಳು ನಡೆದುಹೋಗಿವೆ. ಯುದ್ಧದಿಂದ ಉಂಟಾಗಿರುವ ಅನಾಹುತ ನಮ್ಮ ಕಣ್ಮುಂದೆಯಿದೆ. ಆದ್ದರಿಂದ ಅದು ಕೇವಲ ಶ್ರೀರಾಮನ ಯುದ್ಧ ವಿರೋಧಿ ನಿಲುವಲ್ಲ. ಯುಗಧರ್ಮಕ್ಕೆ ಸ್ಪಂದಿಸುವ ಮೊಯಿಲಿಯವರ ನಿಲುವು ಅದೇ ಆಗಿದೆ ಎನ್ನಬಹುದು.

ಮೊಯಿಲಿಯವರು ತಮ್ಮ ಶ್ರೀರಾಮಾಯಣ ಮಹಾನ್ವೇಷಣಂ ಕಾವ್ಯದ ಮೊದಲ ಮೂರು ಸೋಪಾನಗಳಲ್ಲಿ ಅನೇಕ ಹೊಸ ಪಾತ್ರಗಳನ್ನು, ಪ್ರಸಂಗಗಳನ್ನೂ ಸೃಷ್ಟಿಸಿಕೊಂಡು ರಾಮಕಥೆಗೆ ಪೂರಕವಾಗುವಂತೆ ಹೆಣೆದಿದ್ದಾರೆ. ಇನ್ನುಳಿದ ಚತುರ್ಥ ಮತ್ತು ಪಂಚಮ ಸೋಪಾನಗಳಲ್ಲಿ ಮೂಲಕಥೆಗೆ ಹೆಚ್ಚು ಬದ್ಧರಾಗಿದ್ದಾರೆ. ಮುಂದಿನ ಈ ಎರಡೂ ಸೋಪಾನಗಳಲ್ಲಿ ಕಥೆಯ ಓಟ ಬಿರುಸಾಗಿ ಸಾಗುತ್ತದೆ.

ಸೀತಾನ್ವೇಷಣ ಕಾರ್ಯಕ್ಕಾಗಿ ಹನುಮಂತ ಸಮುದ್ರಲಂಘನಕ್ಕಾಗಿ ಸಿದ್ಧನಾಗಿ ನಿಲ್ಲುತ್ತಾನೆ. ಸೀತಾಮಾತೆಯು ಎಲ್ಲೇ ಇದ್ದರೂ ಹುಡುಕಿ ಸುದ್ದಿ ತಂದೇ ತರುತ್ತೇನೆಂದು ಪ್ರಮಾಣ ಮಾಡುತ್ತಾನೆ. ಸಾಗರೋಲ್ಲಂಘನ ಮಾಡಲು ನಿಂತ ಹನುಮನನ್ನು ನೋಡಿ ಸ್ವತಃ ಸಮುದ್ರರಾಜನೇ ಸಂತಸಗೊಂಡು ಇಲ್ಲಿಯವರೆಗೆ ತಾನು ಬೈತಿಟ್ಟುಕೊಂಡಿದ್ದ ಮೈನಾಕ ಪರ್ವತರಾಜನಿಗೆ 'ಮೇಲೇಳು, ಹನುಮ ರಾಮಭಕ್ತ, ಅವನು ವಿಶ್ರಮಿಸಲು ಅವಕಾಶಕೊಡು ಅವನಿಗೆ ಆತಿಥ್ಯ ನೀಡಿ ಸತ್ಕರಿಸು' ಎಂದು ಆಜ್ಞೆ ಮಾಡುತ್ತಾನೆ. ಇಲ್ಲಿಯವರೆಗೂ ಬಚ್ಚಿಟ್ಟುಕೊಂಡಿದ್ದ ಮೈನಾಕ ಪರ್ವತದ ಕಥೆ ಇಲ್ಲಿಂದ ರೆಕ್ಕೆ ಬಿಚ್ಚಿಕೊಳ್ಳುತ್ತದೆ.

ಮೈನಾಕನಿಂದ ಆತಿಥ್ಯ ಸ್ವೀಕರಿಸಿ ಮುನ್ನೆಡೆದ ಹನುಮಂತ ಅಲ್ಲಿಂದ ಹಾರಿ ಮತ್ತೊಂದು ದ್ವೀಪಕ್ಕೆ ಸೇರುತ್ತಾನೆ. ಆದರೆ ಅಲ್ಲಿಂದ ಮುಂದಕ್ಕೆ ಲಂಕಾಮಾರ್ಗವೇ ಗೋಚರಿಸುವುದಿಲ್ಲ. ಅದೇ ದ್ವೀಪದಲ್ಲಿ ಗುಪಿತದಲಿ ತಪಗೈದ ತೃಣಬಿಂದು ಎಂಬ ಸಾಧಕನ ಮುಂದೆ ತಾನು ರಾಮಭಕ್ತನೆಂದೂ ತನಗೆ ಲಂಕೆಯ ಮಾರ್ಗ ತೋರಿದರೆ ಸಾಕು, ಸೀತೆಯನು ಅಪಹರಿಸಿರುವ ಲಂಕೇಶನನ್ನು ಸಂಹರಿಸಿ ಬಿಡುವೆನೆಂದು ಬಾಲಿಶ ಪೌರುಷ ಮಾತುಗಳನ್ನಾಡಿದಾಗ ತೃಣಬಿಂದುವು 'ನನ್ನ ಕಾಯ ತಪದಿಂದ ಸೊರಗಿದೆ. ನನ್ನ ಮೇಲೆತ್ತು ದಾರಿ ತೋರುತ್ತೇನೆ.' ಎಂದು ಹೇಳುತ್ತಾನೆ. ಹನುಮಂತನಿಗೆ ಏನು ಮಾಡಿದರೂ ಆ ಸೊರಗಿದ ದೇಹವನ್ನು ಕದಲಿಸಲೂ ಸಾಧ್ಯವಾಗುವುದಿಲ್ಲ. ನಂತರ ಹನುಮಂತ ತೃಣಬಿಂದುವಿನ ಕ್ಷಮೆ ಕೋರುತ್ತಾನೆ. ತದನಂತರ ತೃಣಬಿಂದು ಮೇಲೆದ್ದು ಹನುಮಂತನಿಗೆ ಮಾರ್ಗ ತೋರುತ್ತಾನೆ. ಈ ಪ್ರಸಂಗ ಮಹಾಭಾರದ ಭೀಮ ಮತ್ತು ಹನುಮಂತರ ಪ್ರಸಂಗವನ್ನು ನೆನಪಿಗೆ ತರುತ್ತದೆ.

ಅಲ್ಲಿಂದ ಹಾರಿದ ಹನುಮಂತನು ಮುಂದೆ ಕ್ರೂರರಕ್ಕಸಿ ಸುರಸೆಯ ಕಣ್ಣಿಗೆ ಬೀಳುತ್ತಾನೆ. ಸುರಸೆ ತನ್ನ ಭಂಟರಿಗೆ ಆಜ್ಞೆ ಮಾಡುತ್ತಾಳೆ. "ಈತನಿಗೆ ಕೆಂಪುಮಾಲೆಯ ತೊಡಿಸಿ ಶಾಕಿನಿ ಢಾಕಿನಿಯರ ಬಲಿಪೀಠಕ್ಕೆ ಕರೆತನ್ನಿ"ಎನ್ನುತ್ತಾಳೆ. ಆಗ ಹನುಮಂತ ತಾನು ರಾಮ ಕಾರ್ಯದ ಮೇಲೆ ಬಂದಿರುವ ರಾಮಸೇವಕ. ಕೆಲಸ ಮುಗಿಸಿ ಬಂದು ಬೇಕಾದರೆ ಬಲಿಗೆ ಸಿದ್ಧನಾಗುವೆನು (ಪುಣ್ಯಕೋಟಿಯ ಕಥೆ ನೆನಪಾಗುವುದು) ಎಂದರೂ ಆಕೆ ಒಪ್ಪದೆ ಇದ್ದಾಗ ಹನುಮಂತ ತನ್ನ ಬೃಹದ್ರೂಪ ತೋರಿ ಮತ್ತೇ ತೀರ ಸಣ್ಣವನಾಗಿ ಕುಗ್ಗಿಬಿಡುತ್ತಾನೆ. ಹೀಗೆ ಹನುಮಂತನ ಹಿಗ್ಗುವಿಕೆ-ಕುಗ್ಗುವಿಕೆ ಆಕೆಗೊಂದು ಜಾದು ವಿಸ್ಮಯದಂತೆ ತೋರಿದಾಗ "ರಾಮಕಾರ್ಯದುರಂಧರನನೆಂತು ಕಬಳಿಸಲಿ .. ಗುರು ನೀನು. ನಿನ್ನ ದರ್ಶನದಿಂದ ವಿವೇಕೋದಯವಾಯ್ತು" ಎಂದು ಹನುಮಂತನನ್ನು ಸ್ತುತಿಸಿ ಕಳುಹಿಸಿಕೊಡುತ್ತಾಳೆ. ನಂತರ ತನ್ನನ್ನು ಕಬಳಿಸಲು ಬಂದ ಕಾಮರೂಪಿಣಿಯಾದ ಸಿಂಹಿಕೆಯನ್ನು ಸಂಹರಿಸುತ್ತಾನೆ. ಹೀಗೆ ಲಂಕೆ ಸೇರಲು ಇದ್ದ ಅಡ್ಡಿ ಆತಂಕಗಳನ್ನೆಲ್ಲ ನಿವಾರಿಸಿಕೊಂಡು ಲಂಕಾನಗರಿಯ ತ್ರಿಕೂಟಾಚಲಶಿಖರವನ್ನು ತಲುಪಿದ ಹನುಮನು ಲಂಕೆಯ ಸಿರಿಸೊಬಗಿಗೆ ಬೆರಗಾಗಿ ನಿಲ್ಲುತ್ತಾನೆ. ಮೊಯಿಲಿಯವರು ಲಂಕಾವೈಭವದ ವರ್ಣನೆ ಒಂದು ಕಲೆ ಎನ್ನುವಂತೆ ಬಣ್ಣಿಸಿದ್ದಾರೆ.

ಸೀತಾಮಾತೆಯನ್ನು ಅರಸುವ ಕಾರ್ಯ ಆರಂಭವಾಯಿತು. ಆ ನೆಪದಲ್ಲಿ ಹನುಮಂತ ಲಂಕಾಪಟ್ಟಣದ ಅನೇಕ ಬೀದಿಗಳಲ್ಲಿ ಸಂದುಗೊಂದುಗಳಲ್ಲಿ ಹುಡುಕಿದನು. ಲಂಕೆಯ ವೈಭವ, ಸಿರಿಸಂಪದಗಳು, ಭೋಗಲೋಲುಪತೆ ಮುಂತಾದುವನ್ನೆಲ್ಲ ಕಂಡು ಆಶ್ಚರ್ಯಚಕಿತನಾದನು. ಪ್ರಮುಖ ರಕ್ಕಸರ ಮಹಲುಗಳಲ್ಲಿ ಅರಸಿದನು. ನಂತರ ರಾವಣನ ಅರಮನೆಗೆ ಬಂದನು. ಸೌಂದರ್ಯಲಕ್ಷ್ಮಿಯೇ ರಾವಣನರಮನೆಯಲ್ಲಿ ಕಾಲ್ಮುರಿದು ಬಿದ್ದಿರುವಂತೆ ಹನುಮಂತನಿಗೆ ಭಾಸವಾಯಿತು. ಎಷ್ಟು ಹುಡುಕಿದರೂ ಸೀತಾಮಾತೆ ಮಾತ್ರ ಕಾಣಸಿಗಲಿಲ್ಲ. ಹನುಮಂತ ನಿರಾಶನಾಗದೆ ತನ್ನ ಶೋಧನೆಯನ್ನು ಮುಂದುವರೆಸಿ ರಾವಣನ ಅಂತಃಪುರಕ್ಕೆ ಕಾಲಿಟ್ಟನು. ಅಲ್ಲೊಬ್ಬ ಪರಮಸುಂದರಿಯು ಲಂಕೇಶನ ಮಂಚದ ಮೇಲೆ ಹಾಯಾಗಿ ಮಲಗಿದ್ದನ್ನು ಕಂಡನು. ಅವಳಾದರೋ ಜಗದೇಕ ಸುಂದರಿಯಂತೆ ಕಂಗೊಳಿಸುತ್ತಿದ್ದಳು. ಅವಳೇ ಸೀತಾದೇವಿಯೆಂದು ಭ್ರಮಿಸಿ, ಭ್ರಾಂತಿಗೆ ತುತ್ತಾಗಿ ತಲೆತಿರುಗಿ ಪಾತಾಳಕ್ಕೆ ಕುಸಿದ. ಆದರೆ ಅವಳು ರಾವಣ ಸತಿ ಮಂಡೋದರಿ ಎಂಬುದನ್ನು ನಿಧಾನವಾಗಿ ಅರಿತು ಮತ್ತೆ ಸೀತಾಮಾತೆಯ ಶೋಧಕಾರ್ಯಕ್ಕೆ ಹೊರಟ, ಮುಂದೆ ಹನುಮನಿಗೆ ಕಾಮರಾಜ್ಯದ ದರ್ಶನವಾಗುವುದು

**"ಏನಿದ್ದರೇನಾಯ್ತು ಗುಣಹೀನನಾದನಲಾ**
**ಲಂಕೇಶ ಮೃತ್ಯುವನು ಕೈಬೀಸಿ ಕರೆದನಲಾ**
**ಮೃತ್ಯುವಿನ ಮೇಲುದವ ತಾನೆ ಸೆಳೆದನಲಾ**
**ಎಂದೆನುತ ಮರುಗಿದನು"**[೪೯]

ಕುಮಾರವ್ಯಾಸನ ಶೈಲಿಯನ್ನು ಈ ಸಾಲುಗಳಲ್ಲಿ ಯಥಾವತ್ತಾಗಿ ಬಳಸಿದ ಮೊಯಿಲಿಯವರು ರಾವಣನು ಈ ಗುಣಹೀನ ಕಾಮಭೋಗದಿಂದಲೇ ತನ್ನ ಮರಣವನು ತಂದುಕೊಂಡನು ಎಂದು ಹನುಮಂತನಿಂದ ನುಡಿಸುತ್ತಾರೆ. ರಾಕ್ಷಸಾಂಗನೆಯರು ಆ ರಾತ್ರಿಯಲ್ಲಿ ಕಾಮಪೀಡಿತೆಯರಾಗಿ ಕ್ರೀಡಿಸಿ ಅಸ್ತವ್ಯಸ್ತರಾಗಿ ನಿದ್ರೆಗೆ ಸಂದಿದ್ದ ದೃಶ್ಯಗಳನ್ನು ಅವನು ಮನಸಿಲ್ಲದಿದ್ದರೂ ನಿಟ್ಟಿಸಬೇಕಾಯಿತು. ತನ್ನ ಆಜನ್ಮ ಬ್ರಹ್ಮಚರ್ಯಕ್ಕೆ ಲೋಪವಾಯಿತಲ್ಲ ಎಂದು ಕಳವಳಿಸಿದನು. ಕೊನೆಗೆ ತನ್ನಷ್ಟಕ್ಕೆ ತಾನೇ ಸಮಾಧಾನ ತಂದುಕೊಂಡನು.

ಹೀಗೆ ಹುಡುಕಾಟದಲ್ಲೇ ರಾತ್ರಿ ಕಳೆದು ಅರುಣೋದಯವಾಯಿತು. ಅಷ್ಟುಹೊತ್ತಿಗೆ ಅಶೋಕವನಕ್ಕೆ ಕಾಲಿಟ್ಟಿದ್ದನು. ಆ ಸುಂದರ ವನದಲ್ಲಿ ರಾಕ್ಷಸಿಯರಿಂದ ಸುತ್ತುವರಿದ ತಪಸ್ವಿನಿಯಂತೆ ಶೋಭಿಸುವ ಚಂದ್ರಮುಖಿಯೊಬ್ಬಳನ್ನು ಕಂಡನು. ಈಕೆಯೆ ಜಾನಕಿಯಾಗಿರಬಹುದೆಂದು ನಿಶ್ಚಯಿಸಿದನು. ಅಷ್ಟರಲ್ಲಿ ರಾವಣ ತನ್ನ ಪರಿವಾರ ಸಮೇತನಾಗಿ ಅಲ್ಲಿಗೆ ಬಂದ. ಸೀತೆಯನ್ನು ತನ್ನ ಮನದನ್ನೆಯನ್ನಾಗಿ ಮಾಡಿಕೊಳ್ಳುವ ಪ್ರಯತ್ನ ನಡೆಸಿ ವಿಫಲನಾಗಿ ಸಿಟ್ಟಿನಿಂದ ಹಿಂದಿರುಗುತ್ತಾನೆ. ಇತ್ತ ದುಃಖಿತಳಾದ ಸೀತೆಗೆ ತ್ರಿಜಟೆಯು ತಾನು ಕಂಡ ದುಃಸ್ವಪ್ನವನ್ನು ಈ ರೀತಿ ವರ್ಣಿಸುತ್ತಾಳೆ.

**"ಕತ್ತೆ ಹೂಡಿದ ರಥದಿ**
**ರಕ್ತಚಂದನತೀಡಿ ಹುಚ್ಚುನಗೆಯನು ಬೀರಿ**
**ಹುಚ್ಚುನರ್ತನಮಾಡಿ ತೆಂಕುದಿಕ್ಕಿಗೆ ರಥವ**
**ನಮ್ಮೊಡೆಯ ಹರಿಸುವುದ ನಾ ಕಂಡೆ!**

**ಕುಂಭಕರ್ಣಾನುಜನು**
**ಇಂದ್ರಜಿತು ಮುಂತಪ್ಪ ರಾವಣನ ಸುತರೆಲ್ಲ**
**ತಲೆಯ ಮುಂಡನಮಾಡಿ ಮೈಗೆ ತೈಲವಬಳಿದು**
**ದುಃಸ್ವರದಿ ಅರಚುತ್ತ ಅಲೆಯುವುದ ನಾ ಕಂಡೆ"**[೫೦]

ಎಂದು ಹೇಳುತ್ತಾಳಲ್ಲದೆ ಮುಂದೆ ವಿಭೀಷಣನು ಲಂಕಾಪ್ರಭುವಾಗುವ ಸೂಚನೆಗಳೂ ತನ್ನ ಸ್ವಪ್ನದಲ್ಲಿ ಗೋಚರಿಸಿದವು ಎನ್ನುತ್ತಾಳೆ. ಈ ಮೇಲಿನ ಮೊದಲ ಚರಣಗಳಲ್ಲಿ ಬರುವ ಸ್ವಪ್ನದ ವರ್ಣನೆ ಕುವೆಂಪು ಅವರ ಕಾವ್ಯದಲ್ಲಿ ಭರತನು ತನ್ನ ತಂದೆಯ ಬಗ್ಗೆ ಕಂಡ ಸ್ವಪ್ನದಂತಿದೆ. ಇದರ ಜೊತೆಗೆ ಮೊಯಿಲಿಯವ ಒಂದು ಸಣ್ಣ ಮಾರ್ಪಾಟನ್ನು ಮಾಡಿಕೊಂಡಿದ್ದಾರೆ. ಅದೆಂದರೆ ತ್ರಿಜಟೆಯಿಂದ ಇಂಥ ಭಯಾನಕ ಅಶುಭದ ಕನಸಿನ ವರ್ಣನೆಯನ್ನು ಕೇಳಿದ ಕಾವಲಿನ ರಕ್ಕಸಿಯರೆಲ್ಲ ಈ ಭಯದಿಂದ ಕಂಪಿಸಿ ಅರಮನೆಯ ಕಡೆಗೋಡಿದರು. ತತ್ಕಾಲಕ್ಕೆ ಸೀತೆಗೆ ಚಿತ್ರಹಿಂಸೆ ತಪ್ಪಿತು. ಈ ಸಮಯದ ಅವಕಾಶವನ್ನು ಹನುಮಂತ ಬಳಸಿಕೊಂಡು ತನ್ನ ಪರಿಚಯ ಮಾಡಿಕೊಂಡ. ಮೊದಲು ಸೀತೆ ಸಂದೇಹಪಟ್ಟರೂ ನಂತರ ಆತನ ನಿಜರೂಪವನ್ನು ತಿಳಿದು; ಈತ ರಾಮಭಕ್ತನೆಂದು ಅರಿತಳು. ಹನುಮನು ರಾಮನಾಮಾಂಕಿತ ಉಂಗುರವನ್ನು ಸೀತೆಗೆ ಕೊಟ್ಟು ಅವಳಿಂದ ಚೂಡಾಮಣಿಯನ್ನು ಪಡೆದನು. ಅಲ್ಲಿಂದ ಹೊರಡುವ ಮುನ್ನ ರಾಮನಶಕ್ತಿಯನ್ನು ರಾವಣನಿಗೆ ಮನವರಿಕೆ ಮಾಡುವ

ಸಲುವಾಗಿ ಅಶೋಕವನವನೆಲ್ಲ ಬುಡಮೇಲು ಮಾಡಿದ. ಇವನ ಹಾವಳಿಗೆ ಹೆದರಿದ ರಕ್ಕಸರು ರಾವಣನಿಗೆ ದೂರಿದರು. ರಾವಣನ ಸೈನ್ಯ ಬಂಧಿಸಲು ಬಂದರೆ ಧೂಳೀಪಟ ಮಾಡಿದ. ಕೊನೆಗೆ ರಾವಣಸುತ ಮೇಘನಾದನು ಬ್ರಹ್ಮಾಸ್ತ್ರವನ್ನು ಬಿಟ್ಟಾಗ ಅದಕ್ಕೆ ಗೌರವ ಕೊಡಬೇಕೆಂದು ಹನುಮಂತ ಬಂಧಿತನಾದನು ಎನ್ನುತ್ತಾರೆ ಕವಿ. ಅಶೋಕವನವನ್ನು ಹಾಳುಗೆಡವಿದವನಿಗೆ ಏನು ಶಿಕ್ಷೆ ಕೊಡಬೇಕೆಂದು ಸಭೆಯಲ್ಲಿ ಚರ್ಚಿಸಿ ನಿರ್ಧರಿಸಲಾಯಿತು. ಹನುಮಂತನು ತನ್ನ ಬಾಲದಿಂದ ರಾವಣನನ್ನು ಅಣಕಿಸಿದ್ದರಿಂದ ಅಂಗವಿಚ್ಛೇದನ ಶಿಕ್ಷೆಯೆಂದು ಬಾಲಕ್ಕೆ ಬೆಂಕಿ ಹಚ್ಚಲು ಹೇಳಿದ. ಬಾಲಕ್ಕೆ ಬೆಂಕಿ ಹಚ್ಚುವ ಪ್ರಸಂಗವನ್ನು ಸ್ವಾರಸ್ಯವಾಗಿ ವರ್ಣಿಸಿದ್ದಾರೆ ಮೊಯಿಲಿಯವರು. ಬಾಲಕ್ಕೆ ಬೆಂಕಿ ಹಚ್ಚಲು ಬಟ್ಟೆ ಸುತ್ತಲು ಹೋದರೆ ಬಾಲ ಬೆಳೆಯುತ್ತಲೇ ಹೋಗುತ್ತದೆ. ಎಷ್ಟು ಅತಿರೇಕಕ್ಕೆ ಹೋಗುತ್ತೆಂದರೆ 'ಉಟ್ಟಿರುವ ಬಟ್ಟೆಬಿಡಿ ಮಿಕ್ಕೆಲ್ಲ ಕೊಟ್ಟುಬಿಡಿ' ಎಂದು ಡಂಗೂರ ಸಾರುತ್ತಾರೆ. ಹನುಮನ ಬಾಲಕ್ಕೆ ಬೆಂಕಿ ಬಿದ್ದಿದ್ದೇ ತಡ 'ಹಸಿರು ಕಾನನಕೆಲ್ಲ ಮಸಿ ಚೆಲ್ಲಿದೋಲಾಯ್ತು' 'ಸ್ವರ್ಣ ಲಂಕೆಯು ತಾನೇ ಮಸಿಲಂಕೆಯಾಗಿತ್ತು' 'ವಿಭೀಷಣನರಮನೆಯು ಸುಡದೆವುಳಿದಿತ್ತೊಂದು ಉಳಿದೆಲ್ಲವಳಿದಿತ್ತು ಸಕಲ ಸಂಪದಮೆಲ್ಲ ಭಸ್ಮಮಯವಾಗಿತ್ತು'[೫೧] ಕಾವ್ಯದುದ್ದಕ್ಕೂ ಪರಿಸರ ಕಾಳಜಿಯನ್ನು ವ್ಯಕ್ತಪಡಿಸುತ್ತಾ ಬಂದ ಕವಿಯ ಧೋರಣೆಗೂ ಇಲ್ಲಿ ಮಸಿಯಾಯಿತೇನೋ ಎಂದೆನಿಸುತ್ತದೆ.

ಲಂಕೆಯಲ್ಲವೂ ಬೆಂದ ಮೇಲೆ ಹನುಮಂತನಿಗೆ ಸೀತೆಯ ಕ್ಷೇಮದ ಚಿಂತೆ ಕಾಡುತ್ತದೆ. ತಾನಿಟ್ಟ ಬೆಂಕಿಯಲ್ಲಿ ಸೀತೆಯೂ ಸುಟ್ಟುಹೋಗಿದ್ದಾಳೆ. ನಾನಿನ್ನು ಬದುಕಿ ಫಲವೇನು' ಎಂದು ಕಳವಳಿಸಿ ಸಾಗರಕ್ಕೆ ಬಿದ್ದು ಸಾಯಲು ನಿಶ್ಚಯಿಸುತ್ತಾನೆ. 'ಪಾತಿವ್ರತ್ಯದ ಮಹಿಮೆಯಗ್ನಿಯೇಂ ಸುಡುವನೇ' ಎಂಬ ಚಾರಣರ ದಿವ್ಯಧ್ವನಿ ಮೊಳಗಿದಾಗ ಮನಸು ಬದಲಿಸಿ ಸೀತೆಯನ್ನು ನೋಡಲು ಅಶೋಕವನಕ್ಕೆ ಬರುತ್ತಾನೆ. ಮತ್ತೆ ಸೀತೆಯ ಆಶೀರ್ವಾದ ಪಡೆದು ಹಿಂದಿರುಗುತ್ತಾನೆ.

ಇತ್ತ ವಿಭೀಷಣನ ಹಿತನುಡಿಗಳು ವ್ಯರ್ಥವಾದಾಗ ರಾವಣನಿಗೆ ಬುದ್ಧಿ ಹೇಳಲು ತಾಯಿ ಕೈಕಸೆಗೊಪ್ಪಿಸಿದ. ಆಕೆಯ ಪ್ರಯತ್ನವೂ ವಿಫಲವಾಯಿತು. ಕೊನೆಗೆ ವಿಭೀಷಣನು ಲಂಕಾಪಟ್ಟಣವನ್ನು ತೊರೆಯುವ ಕಾಲ ಹತ್ತಿರ ಬಂದಾಗ ತನ್ನ ಆಪ್ತರಾದ ಅನಲ, ಅನಿಲ, ಪ್ರಘನ ಮುಂತಾದವರೊಡನೆ ಸಮಾಲೋಚನೆ ನಡೆಸುತ್ತಾನೆ. ಆಪ್ತರ ಸಭೆಯಲ್ಲಿ ಬಂಡಾಯ, ಕ್ರಾಂತಿಯ ಧ್ವನಿಗಳೇಳುತ್ತವೆ. ವಿಭೀಷಣನು ಕ್ರಾಂತಿ ಮಾಡಲು ಒಪ್ಪದೆ, ಶ್ರೀಲಂಕೆ-ಅಯೋಧ್ಯೆಗಳನ್ನು ಸ್ನೇಹದಿಂದ ಬೆಸೆಯುವ

ಕಾರ್ಯಕ್ಕೆ ಧುಮುಕುವ ತನ್ನ ಅಭೀಪ್ಸೆಯನ್ನು ಅವರ ಮುಂದಿಟ್ಟು ಲಂಕೆಯನ್ನು ತೊರೆದು ಶ್ರೀರಾಮನ ಸ್ನೇಹ ಯಾಚಿಸುತ್ತಾನೆ. ಅದರ ಜೊತೆಗೆ ತನ್ನ ಬೇಡಿಕೆಗಳನ್ನು ರಾಮನ ಮುಂದಿಡುತ್ತಾನೆ. ರಾವಣನ ಮರಣ ಮತ್ತು ಲಂಕೆಯನಾಶ ತಪ್ಪಬೇಕು. ಎಲ್ಲಕ್ಕಿಂತ ಮಿಗಿಲಾಗಿ ಯುದ್ಧವನ್ನೇ ನಿವಾರಿಸಿ ಸಮರಕಲಾಪರಿವರ್ತನೆ ಪ್ರಕ್ರಿಯೆಗೆ ಚಾಲನೆ ನೀಡಬೇಕು. ಹಲವು ಬಾರಿ ಬೇಡಿಕೊಳ್ಳುತ್ತಾನೆ. ಈ ವಿಶೇಷ ಗುಣದಿಂದಲೇ ಮೊಯಿಲಿಯವರ ವಿಭೀಷಣ ಮಿಕ್ಕೆಲ್ಲ ರಾಮಾಯಣಗಳಿಗಿಂತ ವಿಭಿನ್ನನಾಗಿ ಕಂಡು ಬಂದು, ತತ್ವಕ್ಕೆ ಬದ್ಧನಾದ ಮೌಲ್ಯಾಧಾರಿತ ರಾಜಕಾರಣಿಯಂತೆ ಕಂಡುಬರುತ್ತಾನೆ.

ಮಂಡೋದರಿ ಲಂಕಾಸಂಸ್ಕೃತಿಯಲ್ಲಿರುವ ಏಕದೈವನಿಷ್ಠೆಯನ್ನೂ ಸ್ತ್ರೀಸ್ವಾತಂತ್ರ್ಯವನ್ನೂ ಅಂತೆಯೇ ರಾವಣನ ಪೌರುಷವನ್ನೂ ಮನಸಾರೆ ಮೆಚ್ಚಿ ಮದುವೆಯಾಗಿ ಲಂಕೆಗೆ ಬಂದವಳು. ಅಯೋಧ್ಯಾ ಸಂಸ್ಕೃತಿಯಲ್ಲಿನ ಬಾಲ್ಯವಿವಾಹಪದ್ಧತಿ, ಸತಿಪದ್ಧತಿ, ಸ್ತ್ರೀಸ್ವಾತಂತ್ರ್ಯಹರಣ ಇನ್ನೂ ಮುಂತಾದವು. ಆಕೆ ಅಯೋಧ್ಯಾ ಸಂಸ್ಕೃತಿಯನ್ನು, ವಿರೋಧಿಸಲು ಕೊಡುವ ಕಾರಣಗಳು. ಮಂಡೋದರಿ ರಾವಣನನ್ನು ಕುರಿತು ಹೇಳುವ ಮಾತುಗಳನ್ನು ಗಮನಿಸಬೇಕು–

"ಪ್ರಿಯತಮನೆ ಲಾಲಿಸೈ
ವಾನರರ ರಕ್ಕಸರ ಕೋಲಭಿಲ್ಲರ ಮೇಣು
ಬಹುಸಂಸ್ಕೃತಿಯನೆಲ್ಲ ನುಂಗಿನೊಣೆಯುತ್ತಲಿದೆ
ಏಕಸಂಸ್ಕೃತಿರೂಪಿ ಕಬಂಧಬಾಹುವು ನೋಡೆ
ವಾಲಿಸುಗ್ರೀವರೊಳು ರಾವಣವಿಭೀಷಣರೊಳು
ಏಕಸಂಸ್ಕೃತಿದ್ಯೂತ ತಪ್ಪದೆಯೆ ನಡೆಯುತಿದೆ
ಅನನ್ಯಮೆಂದೆನಿಪ ಲಂಕಾದ್ವೀಪಸಂಸ್ಕೃತಿ
ಸಾಕೇತಸಾಮ್ರಾಜ್ಯ ಸಾಗರದಿ ಮುಳುಗುತಿದೆ
ಶ್ರೀರಾಮ ಸಜ್ಜನನು ಶೀಲವಂತನುಮಹುದು
ಆದೊಡೇಂ ಆಕ್ರಮಣಕಾರಕ ಅಯೋಧ್ಯಾ
ಸಂಸ್ಕೃತಿಯ ವೃಕ್ಷಮನೆ ಪೋಷಿಸುತ ನಡೆದಿಹನು
ಪೆಂಗಳನು ಕೆಲೆದಿರ್ಪ ಸಮಾಜವದು ನೋಡೆ
ಪುರುಷರ್ಗೆ ಮೀಸಲದು ಪಶುಗಳಾದದಿ ನಾರಿ

**ಸ್ವಾತಂತ್ರ್ಯಮಿಲ್ಲದೆಯೆ ಅಂತಃಪುರ ಕಣಿವೆಯೊಳು**
**ಸ್ತ್ರೀಶಕ್ತಿ ನರಳುತಿದೆ ಕೊಳೆಯುತಿದೆ."[೫೨]**

ಅಯೋಧ್ಯಾ ಸಂಸ್ಕೃತಿ ಏಕರೂಪಿ ಸಂಸ್ಕೃತಿ ಅದು ಬಹುಸಂಸ್ಕೃತಿಯನ್ನು ಆಕ್ರಮಣ ಮಾಡುವುದರ ಮೂಲಕ ಕಬಳಿಸಿ ನಾಶ ಮಾಡಿಬಿಡುತ್ತದೆ. ಶ್ರೀರಾಮ ಶೀಲವಂತ, ಸಜ್ಜನ ಆದರೇನು ಬಂತು ಅವನು ಏಕರೂಪಿಸಂಸ್ಕೃತಿಯನ್ನೇ ಪೋಷಿಸುವವನು. ಆದ್ದರಿಂದ ತನ್ನ ಲಂಕೇಶನೇ ಏಕರೂಪಿಸಂಸ್ಕೃತಿಯನ್ನು ವಿಷದ ಬಳ್ಳಿಯನ್ನು ಕಡಿದುಹಾಕಬೇಕು. ಆ ಮೂಲಕ ಲಂಕಾಸಂಸ್ಕೃತಿಯನ್ನು ಉಳಿಸಿ ಕಟ್ಟಬೇಕು. ಹಾಗೆ ಮಾಡಬೇಕಾದರೆ ಆತ ರಾವಣತ್ವವ ತೊರೆಯಬೇಕು"ಎನ್ನುತ್ತಾಳೆ ಮಂಡೋದರಿ.

ಮಂಡೋದರಿಯ ಮಾತುಗಳಲ್ಲಿ ಮೂರು ಅಂಶಗಳನ್ನು ಮುಖ್ಯವಾಗಿ ಗಮನಿಸಬಹುದಾಗಿದೆ. ೧) ಆರ್ಯಸಂಸ್ಕೃತಿಯ ವಿರೋಧಿನೆಲೆ ೨) ದ್ರಾವಿಡ ಅಥವಾ ಬಹುಸಂಸ್ಕೃತಿ ಬಲವಾಗಬೇಕು ೩) ರಾವಣ ತನ್ನ ರಾವಣತ್ವವನ್ನು ದೂರಮಾಡಬೇಕೆಂಬುದು. ಹೀಗೆ ಮೊಯಿಲಿಯವರು ಧರ್ಮಸಂಸ್ಕೃತಿಯ ಹೆಸರಿನಲ್ಲಿ ಕೆಳವರ್ಗವನ್ನು ಶೋಷಿಸುವ, ತುಳಿಯುವ ಆರ್ಯಸಂಸ್ಕೃತಿಯ ವಿರುದ್ಧ ಕಾವ್ಯದುದ್ದಕ್ಕೂ ಧ್ವನಿಯೆತ್ತಿರುವುದು ಕಂಡುಬರುತ್ತದೆ.

ಇಷ್ಟೆಲ್ಲ ಆದರೂ ರಾವಣ ಮಾತ್ರ ತನ್ನ ರಾವಣತ್ವವನ್ನು ಬಿಡುವುದಿಲ್ಲ. ತಾನು ಇಲ್ಲಿಯವರೆಗೂ ನಡೆದುಬಂದದಾರಿ, ಮಾಡಿರುವ ರೀತಿಯೇ ಸರಿಯೆಂದು ಸಮರ್ಥಿಸಿಕೊಳ್ಳುತ್ತಾನೆ.

**"ಲೋಕಬುಡಮೇಲಾಗಿ ಜಗವೆಲ್ಲ ಕಂಪಿಸಲಿ**
**ಜಾನಕಿಯ ಬಿಡಲಾರೆ!"[೫೩]**

ಹೀಗಾದರೆ ಮಹಾನ್ವೇಷಣ ಪಥದಲ್ಲಿ ಇನ್ನು ಉಳಿದಿರುವುದು ಒಂದೇ, ಅದು ಯುದ್ಧ. ಆದರೆ ಯುದ್ಧ ಯಾರಿಗೂ ಬೇಕಿಲ್ಲ. ರಾಮನ ಮಾತುಗಳಲ್ಲೂ ಯುದ್ಧ ವಿರೋಧಿ ನಿಲುವುಗಳನ್ನು ಕಾಣಬಹುದಾಗಿದೆ. ರಾಮ ಲಕ್ಷ್ಮಣನನ್ನು ಕುರಿತು ಆಡುವ ಈ ಮಾತುಗಳನ್ನು ಗಮನಿಸೋಣ

೧. **"ರಾಮ ರಾವಣರೊಳಗೆ ಮೇಲಾ ಮೆರೆದಿರಲು**
**ಜೀವ ಕೋಟಿಗಳೆಲ್ಲ ರಣಮಾರಿಗೌತಣವೆ?"[೫೪]**

೨. **".. ಸಮರ ಕೋಲಾಹಲ ದಾಹವಳಿಯಲೆಬೇಕು**

ಅಹಿಂಸಾ ಪರಮೋಧರ್ಮವೆಂದೆನುವ ನುಡಿಮುತ್ತು

ಜಾನಕಿಯು ಒರೆದಿಹಳು ಭವಪಥಾನ್ವೇಷಣೆಯ

ನುಡಿಗಳನು ಎಂತು ಮರೆವೆನು ವತ್ಸ!"[೫೫]

೩. "ಸಮರ ಹಿಂಸಾಚಾರ

ಸಮರವಿಲ್ಲದೆ ಗೆಲುವ ಹೊಸನೀತಿ ಬೇಕೆಮಗೆ

ಸಮರ ಸರಕುಗಳೆಲ್ಲ ಸಾಗರಕೆ ಒಗೆಯುವಾ"[೫೬]

ಶಾಂತಿಸಂಧಾನಕ್ಕೆಂದು ಹೋಗಿದ್ದ ವಾಲಿಸುತ ಅಂಗದನು ಸಭೆಯಲ್ಲಿ ರಾವಣನಿಗೆ ಹೇಳುವ ಮಾತುಗಳು–

"ಸಂಧಾನ ಮಾರ್ಗವನು ಆಧರಿಸಿ ಹೇ ದೊರೆಯೆ

ಹಿಂಸೆಯನು ತೊರೆದುಬಿಡು ನ್ಯಾಯದನ್ವೇಷಣೆಯ

ಪಥವಿಡಿದು ನಡೆದುಬಿಡು"[೫೭]

ರಾವಣ ಈ ಮಾತುಗಳಿಗೆ ಒಪ್ಪುವುದಿಲ್ಲ "ಮಣಿದು ಬದುಕುವವನಲ್ಲ ರಣಮಹೋತ್ಸವದದೊಳಗೆ ಕೈದಣಿಯೆ ಹೋರುವೆನು" ಆದರೆ "ರಾಮ ಶರಣಾಗುತ್ತ ರಣಹೇಡಿಯಾಗುತ್ತ ಜಾನಕಿಯ ಬೇಡುವೊಡೆ ನೀಡುವೆನು, ರಣಮಿಲ್ಲ" ಎಂಬ ಚತುರೋಕ್ತಿಗಳನ್ನಾಡುತ್ತಾನೆ.

ಯುದ್ಧವೇ ನಿಶ್ಚಯಗೊಂಡು ರಾವಣನ ಸೈನ್ಯ ಮೊದಮೊದಲು ರಣೋತ್ಸಾಹ ತೋರಿದರೂ ರಾಮ–ಲಕ್ಷ್ಮಣರ ಬಾಣಗಳಿಂದ ಕ್ಷೀಣಿಸುತ್ತಾ ಹೋಗುತ್ತದೆ. ತನ್ನ ಸೈನ್ಯ ಹಂತ ಹಂತವಾಗಿ ಕರಗುತ್ತಿರುವುದನ್ನು ನೋಡಿ ರಾವಣ, ಯುದ್ಧಕ್ಕೆ ಕುಂಭಕರ್ಣನನ್ನು ಕಳುಹಿಸುವುದೇ ಯುಕ್ತವೆಂದು ಭಾವಿಸಿ ಅವನನ್ನು ಕರೆಸುತ್ತಾನೆ. ಕುಂಭಕರ್ಣ ಬಂದನಂತರ ಯುದ್ಧದಲ್ಲಿ ತಮ್ಮ ಪಕ್ಷಕ್ಕೆ ಉಂಟಾಗಿರುವ ಹಾನಿಯನ್ನು ವಿವರಿಸುತ್ತಾನೆ. ಕುಂಭಕರ್ಣ ತಕ್ಷಣವೇ "ರಾಮಮರಣೋತ್ಸವ ತಪ್ಪದೇ ಜರುಗುವುದು!" ಎಂದು ದರ್ಪದ ನುಡಿಗಳನ್ನಾಡುತ್ತಾನೆ. ಆಗ ಮಹೋದರನು ನೊಂದು ಈ ರೀತಿ ನುಡಿಯುತ್ತಾನೆ.

"ಶೂರನೀನಹುದಯ್ಯ ಕುಂಭಕರ್ಣನೆ ಕೇಳು
ಕರ್ಮಫಲವಿಂದೀಗ ಲಂಕೆಯನು ಸುಡುತಲಿದೆ
ಅಂದುನೀ ಸಭೆಯೊಳಗೆ, ಭೂಮಿಜೆಯ ಮರಳಿಸಲು
ಅಗ್ರಜನ ಬೇಡಿದ್ದೆ ಆದೊಡೇಂ ಹಿತಶತ್ರು
ನುಡಿಗಳಿಗೆ ಕಿವಿಗೊಟ್ಟು ಹೊಗಳಿಕೆಯ ಶೂಲಕ್ಕೆ
ಲಂಕೇಶನೇರಿದನು ಈಗೆಂತು ರಕ್ಷಿಪೆವು?"[೫೮]

ಮಹೋದರನ ಈ ಮಾತುಗಳನ್ನು ಕುಂಭಕರ್ಣನು ಒಪ್ಪಿಕೊಳ್ಳುವುದಷ್ಟೇ ಅಲ್ಲ; ಸೀತೆಯನ್ನು ರಾಮನಿಗೆ ಒಪ್ಪಿಸಿಬಿಡಲು ಒತ್ತಾಯಿಸುವನು. ಆದರೂ ಈಗ ರಾವಣ ಎಸಗಿರುವ ಮಹಾಪರಾಧಕ್ಕೆ ಯುದ್ಧ ಅನಿವಾರ್ಯವೆಂದೇ ತೀರ್ಮಾನಿಸಿ ಯುದ್ಧಭೂಮಿಗೆ ಹೊರಡುತ್ತಾನೆ.

ಈ ಹಿಂದೆ ಪ್ರಹಸ್ತನೂ ಇದೇ ಮಾತನ್ನು ಹೇಳಿದ್ದನ್ನು ಗಮನಿಸಬೇಕು.

"ಹೊಗಳಿಕೆಗೆ ಮರುಳಾಗಿ ಸಂಧಿಯನು ನೀ ಮುರಿದೆ
ಜಾನಕಿಯನೊಪ್ಪಿಪುದೆ ಶ್ರೇಯಮಾರ್ಗಮದೆಂದು
ಪೇಳ್ದವರ ಪಕ್ಷದಲಿ ನಾನಿರ್ದೆ, ಇನ್ನೀಗ
ಎಲ್ಲವೂ ಕೈಮೀರಿ ಸಮರವೊಂದೇ ದಾರಿ
ಚಿಂತೆಯೇತಕೆ ದೊರೆಯೆ ಆರನೂ ದೂರದಿರು"[೫೯]

ಈ ಮೇಲಿನ ಎಲ್ಲಾ ಮಾತುಗಳನ್ನು ಗಮನಿಸಿದಾಗ ಎರಡು ಅಂಶಗಳು ಸ್ಪಷ್ಟವಾಗುತ್ತವೆ. ರಾಮ ಮತ್ತು ಅಂಗದರ ಮಾತುಗಳಲ್ಲಿ ಯುದ್ಧವಿರೋಧಿ ನಿಲುವು ಕಂಡುಬರುತ್ತದೆ. ಅದರ ಜೊತೆಗೆ ಇಂದಿನ ಜಾಗತಿಕ ವ್ಯವಸ್ಥೆಯಲ್ಲಿ ಯುದ್ಧ ಅನಿವಾರ್ಯವಾಗಿಬಿಟ್ಟಿದೆ ಎಂಬುದು ಮಹೋದರ, ಪ್ರಹಸ್ತರ ಮಾತುಗಳಲ್ಲಿ ಕಂಡು ಬರುತ್ತದೆ.

"ನಿಸ್ಸತ್ವರಂತೇಕೆ ರೋದನವ ಗೈಯುತಿಹೆ
ಸಮರವೆಂಬುದು ನೋಡೆ ಪರಮಶಾಂತಿಯ ತಾಣ"[೬೦]

ಲಕ್ಷ್ಮಣ ರಾಮನನ್ನು ಕುರಿತು ಹೇಳುವ ಈ ಮಾತಿನ ಸಮರವು ಅನಿವಾರ್ಯವಾಗಿರುವಾಗ ಅದರಿಂದ ಹಿಂಜರಿಯುವುದು ಸಲ್ಲದು' ಯುದ್ಧವೆಂದರೆ ಅದು ಶಾಂತಿಸ್ಥಾಪನೆಗೆ ಮಾರ್ಗವೂ ಹೌದು ಎಂಬುದನ್ನು ಧ್ವನಿಸುತ್ತದೆ. ಹೀಗೆ ಯುದ್ಧವೇ ಅನಿವಾರ್ಯವಾಗಿ "ರಾಮತ್ವ-ರಾವಣತ್ವಗಳ ಸಂಘರ್ಷದಲ್ಲಿ ಶುದ್ಧಚಾರಿತ್ರ, ಸಾತ್ತ್ವಿಕ ಉದ್ದೇಶಗಳಿಗೆ ವಿಜಯ ನಿಶ್ಚಯ ಎಂಬುದನ್ನೂ ದುರ್ದಮ್ಯವಾದ ಸ್ವಾಭಿಮಾನ, ನೈತಿಕ ಪಥನಗಳಿಗೆ ಸೋಲು ಅನಿವಾರ್ಯ ಎಂಬುದನ್ನೂ ಪ್ರತಿಪಾದಿಸುವ ಘಟನಾವಳಿಗಳನ್ನು ನಾವು ಉದ್ದಕ್ಕೆಗಮನಿಸುತ್ತಾಹೋಗುತ್ತೇವೆ"[೬೧] ಎಂಬ ಡಾ.ಟಿ.ವಿ.ವೆಂಕಟಾಚಲ ಶಾಸ್ತ್ರೀಯವರ ಮಾತು ಅರ್ಥ ಪೂರ್ಣವಾಗಿದೆ.

## ಟಿಪ್ಪಣಿ

೧. ದೇ.ಜವರೆಗೌಡ : ಶ್ರೀರಾಮಾಯಣ ದರ್ಶನಂ, ವಚನಚಂದ್ರಿಕೆ, ೧೯೫೪, ಡಿ.ವಿ.ಕೆ.ಮೂರ್ತಿ ಪ್ರಕಾಶಕರು, ಮೈಸೂರು-೪, ಪುಟ-೪೮

೨. ಅದೇ : ಪುಟ-೧೫೭

೩. ಅದೇ : ಪುಟ-೧೫೮

೪. ಅದೇ : ಪುಟ-೧೭೮

೫. ಚಿರಂತನ : ವಾಲ್ಮೀಕಿ ರಾಮಾಯಣ- ಶ್ರೀರಾಮಾಯಣ ದರ್ಶನಂ, ಕುವೆಂಪು ಸಾಹಿತ್ಯ ಲೋಕ-೪, ಪುಟ-೧೦೫

೬. ಹಾ.ಮಾ.ನಾಯಕ : ಕನ್ನಡದಲ್ಲಿ ರಾಮಾಯಣ, ಕುವೆಂಪು ಸಾಹಿತ್ಯ ಲೋಕ-೪, ಪುಟ-೧೭

೭. (ಪ್ರ.ಸಂ.) ಡಾ.ಜಿ.ಎಸ್.ಶಿವರುದ್ರಪ್ಪ: ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ-೩,೪,೫. ಪ್ರಸಾರಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೮. ಕೆ.ಜಿ.ನಾರಾಯಣಪ್ರಸಾದ್ : ವೈದಿಕ ರಾಮಾಯಣ, ಶ್ರೀರಾಮಾಯಣ ದರ್ಶನಂ, ಕುವೆಂಪು ಸಾಹಿತ್ಯ ಲೋಕ-೪, ಪುಟ-೬೬

೯. ವೈ.ಸಿ.ಭಾನುಮತಿ : ಜೈನ ರಾಮಾಯಣ, ಶ್ರೀರಾಮಾಯಣದರ್ಶನಂ, ಕುವೆಂಪು ಸಾಹಿತ್ಯ ಲೋಕ-೪, ಪುಟ-೫೭

೧೦. ಕುವೆಂಪು : ಶ್ರೀರಾಮಾಯಣ ದರ್ಶನಂ, ಪುಟ-೩೩೭

೧೧. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಶ್ರೀರಾಮಪಟ್ಟಾಭಿಷೇಕ, ಮುನ್ನುಡಿ. ಪುಟ-೩

೧೨. ಅದೇ : ಪ್ರಸ್ತಾವಿಕ ನುಡಿ

೧೩. ಅದೇ : ಪುಟ-೧೫

೧೪. ಅದೇ : ಪುಟ-ಟಿಪ್ಪಣಿಗಳು, ಪುಟ-೬

೧೫. ಅದೇ : ಪುಟ-೪೬

೧೬. ಅದೇ : ಪುಟ-೫೧

೧೭. ಅದೇ : ಪುಟ-೬೨

೧೮. ಅದೇ : ಪುಟ-೬೩

೧೯. ಅದೇ : ಪುಟ-೬೪

೨೦. ಅದೇ : ಪುಟ–೮೪

೨೧. ಡಾ.ಸಾಲಿಮರುಳಯ್ಯ : ಮಾಸ್ತಿಯವರ ಕಾವ್ಯ ಒಂದು ಸಮೀಕ್ಷೆ, ೧೯೯೪, ಕನ್ನಡ ಮತ್ತು ನಿರ್ದೇಶನಾಲಯ. ಪುಟ–೧೮೨

೨೨. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಶ್ರೀರಾಮಪಟ್ಟಾಭಿಷೇಕ, ಪುಟ–೧೫೧

೨೩. ಅದೇ : ಪುಟ–೧೫೪

೨೪. ಅದೇ : ಪುಟ–೨೨೫

೨೫. ಅದೇ : ಪುಟ–೩

೨೬. ಅದೇ : ಪುಟ–೨೪೭

೨೭. ಅದೇ : ಪುಟ–೩೧೧

೨೮. ಅದೇ : ಪುಟ–೩೧೩

೨೯. ಡಾ.ಜಿ.ಎಂ.ಹೆಗಡೆ : ಮೊಯಿಲಿಯವರ ಮಹಾನ್ವೇಷಣೆ ಮತ್ತು ಪ್ರಾಚೀನ ಮಹಾಕಾವ್ಯ ಪರಂಪರೆ ಅನ್ವೇಷಣೆ. (ಸಂ).ಡಾ.ಎಚ್.ಟಿ.ಪೋತೆ, ಪುಟ–೭೮

೩೦. ವೀರಪ್ಪ ಮೊಯಿಲಿ : ಶ್ರೀರಾಮಾಯಣ ಮಹಾನ್ವೇಷಣಂ, ೨೦೦೧, ಪ್ರಥಮ ಸೋಪಾನ, ಪುಟ–೬೧

೩೧. ಅದೇ : ಪುಟ–೭೫

೩೨. ಅದೇ : ಪುಟ–೮೯

೩೩. ಅದೇ : ಪುಟ–೮೯

೩೪. ಅದೇ : ಪುಟ–೧೧೯

೩೫. ಡಾ.ಜಿ.ಎಂ.ಹೆಗಡೆ : ಮೊಯಿಲಿಯವರ ಮಹಾನ್ವೇಷಣೆ ಮತ್ತು ಪ್ರಾಚೀನ ಮಹಾಕಾವ್ಯ ಪರಂಪರೆ ಅನ್ವೇಷಣೆ. (ಸಂ).ಡಾ.ಎಚ್.ಟಿ.ಪೋತೆ, ಪುಟ–೭೮

೩೬. ಮೊಯಿಲಿ : ಶ್ರೀರಾಮಾಯಣ ಮಹಾನ್ವೇಷಣಂ, ೨೦೦೨, ಪ್ರಥಮ ಸೋಪಾನ–೨ ಪುಟ–೨೪೬

೩೭. ಅದೇ : ಪುಟ–೨೫೦

೩೮. ಅದೇ : ಪುಟ–೨೫೩

೩೯. ಅದೇ : ಪುಟ–೪೨೧

೪೦. ಅದೇ : ಪುಟ–೪೨೯

೪೧. ಅದೇ : ಪುಟ–೪೩೮

೪೨. ಮೊಯಿಲಿ : ಶ್ರೀರಾಮಾಯಣ ಮಹಾನ್ವೇಷಣಂ, ೨೦೦೨, ಪ್ರಥಮ ಸೋಪಾನ–೩
ಪುಟ–೧೧೯

೪೩. ಅದೇ : ಪುಟ–೧೩೬

೪೪. ಅದೇ : ಪುಟ–೧೫೩

೪೫. ಅದೇ : ಪುಟ–೨೫೧, ೨೫೨

೪೬. ಮೊಯಿಲಿ : ಶ್ರೀರಾಮಾಯಣ ಮಹಾನ್ವೇಷಣಂ, ೨೦೦೨, ಪ್ರಸ್ಥಾನ–೧೩೨
ಪ್ರಥಮ ಸೋಪಾನ–೩, ಪುಟ–೩೩೯, ೩೪೦

೪೭. ಅದೇ: ಪುಟ–೩೪೦

೪೮. ಅದೇ ಪುಟ–೩೪೭

೪೯. ಅದೇ– ಪ್ರಸ್ಥಾನ–೧೪೨, ಸೋಪಾನ–೪, ಪುಟ–೬೭

೫೦. ಅದೇ– ಪ್ರಸ್ಥಾನ–೧೫೧, ಸೋಪಾನ–೪, ಪುಟ–೧೪೨, ೧೪೩

೫೧. ಅದೇ– ಪ್ರಸ್ಥಾನ–೧೬೦, ಸೋಪಾನ–೪, ಪುಟ–೨೩೨, ೨೩೩

೫೨. ಅದೇ– ಪ್ರಸ್ಥಾನ–೧೭೦, ಸೋಪಾನ–೪, ಪುಟ–೩೧೪, ೩೧೫

೫೩. ಅದೇ– ಪ್ರಸ್ಥಾನ–೧೭೦, ಸೋಪಾನ–೪, ಪುಟ–೩೨೩

೫೪. ಅದೇ– ಪ್ರಸ್ಥಾನ–೧೮೧, ಸೋಪಾನ–೫, ಪುಟ–೧೭

೫೫. ಅದೇ– ಪ್ರಸ್ಥಾನ–೧೮೩, ಸೋಪಾನ–೫, ಪುಟ–೩೮

೫೬. ಅದೇ– ಪ್ರಸ್ಥಾನ–೧೮೩, ಸೋಪಾನ–೫, ಪುಟ–೪೦

೫೭. ಅದೇ– ಪ್ರಸ್ಥಾನ–೧೮೬, ಸೋಪಾನ–೫, ಪುಟ–೭೫

೫೮. ಅದೇ– ಪ್ರಸ್ಥಾನ–೨೦೦, ಸೋಪಾನ–೫, ಪುಟ–೨೫೧

೫೯. ಅದೇ– ಪ್ರಸ್ಥಾನ–೧೯೮, ಸೋಪಾನ–೫, ಪುಟ–೨೧೭

೬೦. ಅದೇ– ಪ್ರಸ್ಥಾನ–೧೮೨, ಸೋಪಾನ–೫, ಪುಟ–೩೩

೬೧. ಅದೇ– ಮಹಾನ್ವೇಷಣ ಪರಿಕ್ರಮಣ: ಸೋಪಾನ–೩– ಪುಟ–xxxiv–xxxv

## ಅಧ್ಯಾಯ – ೪

## ಕಥಾಂತರಕ್ಕೆ ಕಾರಣವಾದ ಪ್ರಭಾವಗಳ ಪರಿಶೀಲನೆ

### ೪.೧ ಶ್ರೀರಾಮಾಯಣ ದರ್ಶನಂ:–

ಶ್ರೀರಾಮಾಯಣದರ್ಶನಂ ಕುವೆಂಪು ಅವರ ಮೇರುಕೃತಿ. ಮಹತ್ವಾಕಾಂಕ್ಷೆಯಿಂದ ಕವಿ ಈ ಬೃಹತ್ ಕಾವ್ಯವನ್ನು ರಚಿಸಿದ್ದಾರೆ. ಕುವೆಂಪು ಅವರಿಗೆ ಮೊದಲಿನಿಂದಲೂ ಮಹಾಕಾವ್ಯವೊಂದನ್ನು ರಚಿಸಬೇಕೆಂಬ ಅಭೀಪ್ಸೆ ಇದ್ದೆ ಇದ್ದಿತು. ಮಿಲ್ಟನ್ ಮಹಾಕವಿಯ 'ಪ್ಯಾರಡೈಸ್ ಲಾಸ್ಟ್' ಕುವೆಂಪು ಅವರನ್ನು ಗಾಢವಾಗಿ ಪ್ರಭಾವಿಸಿತ್ತು. ಸ್ವತಃ ಕುವೆಂಪು ಅವರೆ ಮಿಲ್ಟನ್ ಮಹಾಕವಿಯ ಪ್ಯಾರಡೈಸ್ ಲಾಸ್ಟ್‌ನಂತೆ ಕನ್ನಡದಲ್ಲಿ ಬ್ಲಾಂಕ್‌ವರ್ಸ್ ಎಪಿಕ್ ಬರೆಯಬೇಕೆನ್ನುವ ಅಭೀಪ್ಸೆ ತಮ್ಮನ್ನು ಕಾಡುತ್ತಿತ್ತು ಎಂಬುದನ್ನು ತಮ್ಮ ಆತ್ಮಕಥೆ 'ನೆನಪಿನದೋಣಿ'[೧]ಯಲ್ಲಿ ಹೇಳಿಕೊಂಡಿದ್ದಾರೆ. ಆಂಗ್ಲಕವಿಗಳಲ್ಲಿ ಮಿಲ್ಟನ್‌ನಂತೆ ತಮ್ಮನ್ನು ಬೇರಾರೂ ಮರುಳುಗೊಳಿಸಿಲ್ಲ ಎಂಬುದನ್ನು ಕುವೆಂಪು ಹೇಳಿಕೊಂಡಿದ್ದಾರೆ. ಕುವೆಂಪು ಅವರಿಗೆ ಪ್ರಿಯನಾದ ಇನ್ನೊಬ್ಬ ಕವಿ ಹೋಮರ್. ಆದರೆ ಹೋಮರನ ಕಲೆಯನ್ನು ಮೆಚ್ಚುವ ಅವರು ಅವನ ಕಥೆಯನ್ನು ಮೆಚ್ಚಿಲ್ಲ. (ಹೋಮರ್ ನಿನ್ನ ಕಲೆ ಪಿರಿದಾದೊಡಂ ನಿನ್ನ ಕಥೆ ಪಿರಿದಲ್ತು–ಕುವೆಂಪು) ವಾಲ್ಮೀಕಿ ರಾಮಾಯಣದ ಸೀತೆಯ ಶುಚಿಗಂಗೆಯಲ್ಲಿ ಮಿಂದ ಅವರಿಗೆ ಹೋಮರನ ಕಾವ್ಯದ ನಾಯಕಿಯಾದ ಹೆಲನ್‌ಳ ನಡವಳಿಕೆ ಇಷ್ಟವಾಗಿಲ್ಲ. ಕುವೆಂಪು ಅವರ ದೃಷ್ಟಿಯಲ್ಲಿ ಒಂದು ಮಹಾಕಾವ್ಯದ ನಿರ್ಮಾಣಕ್ಕೆ ಮಹತ್ವದ ಸಾಧನ ಸಾಮಗ್ರಿಯು ಬೇಕಾಗುತ್ತದೆ. ಕುವೆಂಪು ಹೇಳುತ್ತಾರೆ–'ನನ್ನ ಆಲೋಚನೆ ಅನುಭವ ದರ್ಶನಗಳಿಗೆ ರೂಪುಕೊಡಲು ಒಂದು ಸಾಧನ (ನಿದರ್ಶನ ಸಾಮಗ್ರಿ) ಬೇಕಾಗಿತ್ತು. ಆ ಸಾಧನವೂ ಆ ದರ್ಶನಷ್ಟೇ ಮಹತ್ವಪೂರಿತವಾದುದಾಗಿರಬೇಕಿತ್ತು. ಅದಕ್ಕೆ ರಾಮಾಯಣವೇ ಸರಿ ಎಂದು ನನಗೆ ತೋರಿತು. ಏಕೆಂದರೆ ರಾಮಾಯಣ ಇಂದಿನದಲ್ಲ. ಅದು ಅನಾದಿಯಾದುದು, ಅನಂತವಾದುದು"[೧]

ಒಮ್ಮೆ ತಮ್ಮ ವಸ್ತು ವಾಲ್ಮೀಕಿಯ ರಾಮಾಯಣದ ಕಥಾಭಿತ್ತಿಯನ್ನು ಆಧರಿಸುವುದು ನಿಶ್ಚಿತವಾದ ಮೇಲೆ ಕುವೆಂಪು ಅವರು ತಮ್ಮ ಮಹಾಕಾವ್ಯಕ್ಕೆ ಅಗತ್ಯವಾದ ಛಂದಸ್ಸಿನ ಶೋಧಕ್ಕಾಗಿ ಪ್ರಯೋಗದಲ್ಲಿ ತೊಡಗಿದರು. ೧೯೨೮ರಲ್ಲಿ 'ಮಹಾದರ್ಶನ' ಎಂಬ ೮೦೫ ಪಂಕ್ತಿಗಳ ಕಥನ

ಕವನವನ್ನು ರಚಿಸಿದರು. ಸರಿಸುಮಾರು ಇದೇ ಸಮಯದಲ್ಲಿ ೫೧೨ ಪಂಕ್ತಿಗಳ ಸಮುದ್ರಲಂಘನ ಎಂಬ ಕಾವ್ಯವನ್ನು ರಚಿಸಿದರು. ಈ ಯಾವ ಪ್ರಯೋಗವೂ ಅವರಿಗೆ ತೃಪ್ತಿನೀಡಲಿಲ್ಲ. ಕೊನೆಗೆ ಸರಳ ರಗಳೆಯನ್ನು ಅಂತ್ಯಪ್ರಾಸದಿಂದ ಮುಕ್ತಗೊಳಿಸಿ ಮಹಾಛಂದಸ್ಸನ್ನು ರೂಪಿಸಿಕೊಂಡರು. ಮಾಸ್ತಿಯವರ ಮಾದರಿಯಲ್ಲಿ ೧೯೨೭ರಲ್ಲಿ 'ಕರಿಸಿದ್ಧ' ಮತ್ತು 'ಪ್ರಾಯಶ್ಚಿತ್ತ' ಎಂಬ ಕವಿತೆಗಳನ್ನು ರಚಿಸಿದ್ದರೂ ಮಾಸ್ತಿಯವರ ಬ್ಲಾಂಕ್‌ವರ್ಸ್ ರೀತಿ ತಾವು ಬರೆಯಲು ಉದ್ದೇಶಿಸಿದ ಮಹಾಕಾವ್ಯದ ಶೈಲಿಗೆ ಒಂದಿನಿತೂ ಹೊಂದಿಕೊಳ್ಳುವುದಿಲ್ಲ ಎನ್ನುವುದು ಅವರಿಗೆ ಖಾತರಿಯಾಗಿತ್ತು. ೧೯೨೭ರಲ್ಲಿ ಕುವೆಂಪು ರಚಿಸಿದ 'ಜಲಗಾರ', 'ಯಮನಸೋಲು' ಮಹಾರಾತ್ರಿ ನಾಟಕಗಳಲ್ಲಿ ಕುವೆಂಪು ಅವರಿಗೆ ತಮ್ಮ – ಮಹಾಕಾವ್ಯಕ್ಕೆ ಹೊಂದಬಹುದಾದ ಛಂದಸ್ಸಿನ ಸುಳಿವು ಸಿಕ್ಕಿತು. ಮುಂದೆ ಇದೇ ಛಂದಸ್ಸನ್ನು ಕುವೆಂಪು ತಿದ್ದಿತೀಡಿ ತಮ್ಮ ರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಬಳಸಿಕೊಂಡರು. ಮತ್ತು ಆ ಛಂದಸ್ಸಿಗೆ 'ಮಹಾಛಂದಸ್ಸು' ಎಂದು ನಾಮಕರಣ ಮಾಡಿದರು.

**"ಪಿಂತೆ_..**

**ವಾಲ್ಮೀಕಿಯುಲಿದ ಕತೆಯಾದೊಡಂ ಕನ್ನಡದಿ**
**ಬೇರೆ ಕತೆಯೆಂಬಂತೆ ಬೇರೆ ಮೆಯ್ಯಾಂತಂತೆ**
**ಮರುಹುಟ್ಟು ಪಡೆದಂತೆ ಮೂಡಿದೀ ಕಾವ್ಯಮಂ**
**ವಿಶ್ವವಾಣಿಗೆ ಮುಡಿಯಮಣಿ ಮಾಡಿಹೆನ್"**[೨]

ಡಾ.ಜಿ.ಎಸ್.ಶಿವರುದ್ರಪ್ಪನವರು ಹೇಳಿರುವಂತೆ "ರಾಮಾಯಣ ಕಥಾವಸ್ತು ಕುವೆಂಪುರವರಿಗೆ ಕೇವಲ ಕಥೆಯಾಗಲಿ, ಆ ಕಥೆಗೆ ಹಿನ್ನೆಲೆಯಾದ ಇತಿಹಾಸವಾಗಲಿ ಮುಖ್ಯವಲ್ಲ. ಅದು ಕನ್ನಡದಲ್ಲಿ ಬೇರೆ ಕಥೆ ಎಂಬಂತೆ ಬೇರೆ ಮೆಯ್ಯಾಂತಂತೆ ಮರುಹುಟ್ಟು ಪಡೆದಂತೆ ನಿರ್ವಹಿಸುವುದರಲ್ಲಿ ಅವರಿಗೆ ಆಸಕ್ತಿ"[೩]

ಬೇರೆ ಮೆಯ್ಯಾಂತಂತೆ ಎಂಬುದು ಮುಖ್ಯವಾದ ಮಾತು. ಇದನ್ನೇ ಕಥಾಂತರ ಎಂಬ ಪಾರಿಭಾಷಿಕದಿಂದ ನಾವು ಗುರುತಿಸುತ್ತಾ ಬಂದಿದ್ದೇವೆ. ಕುವೆಂಪು ಅವರು ಭಾವಿಸುವಂತೆ 'ಕಲೆಯನ್ನಲ್ಲದೆ ಶಿಲ್ಪಿ ಶಿಲೆಯನ್ನೇಂ ಸೃಷ್ಟಿಪನೆ' ಕಥೆ ಹಳೆಯದಿರಬಹುದು, ಆದರೆ ಅದನ್ನು ಖಂಡರಿಸುವ ಕಲೆ ಹೊಸದು. ಕವಿಯ ಪ್ರತಿಭಾ ದರ್ಶನದಿಂದ ಉದ್ಭವವಾಗುವಂತಹದ್ದು. ಕುವೆಂಪು ಅವರಿಗೆ ಅವರ ಕೃತಿ ಇತಿಹಾಸದ ಬರೀ ಕಥೆಯಲ್ಲ. ಆತ್ಮಕ್ಕೆ ಶರೀರವು ಹೇಗೋ ಹಾಗೆ ಕಥೆಯು ಕೇವಲ ನಿಮಿತ್ತ ಮಾತ್ರ. ಕುವೆಂಪು ಅವರ ಕಾವ್ಯವು ವಾಲ್ಮೀಕಿ ರಾಮಾಯಣವನ್ನು ಆಧರಿಸಿದೆ ನಿಜ.

ಆದರೆ ಅದು ಕೇವಲ ವೈದಿಕ ರಾಮಾಯಣದ ಅನುಸರಣೆಯಾಗಿ ಉಳಿದಿಲ್ಲ. ಹಾಗೆ ನೋಡಿದರೆ ಕುವೆಂಪು ಅವರ ರಾಮಾಯಣದ ಹಿಂದೆ ಕೇವಲ ದೇಶೀ ಪರಂಪರೆ ಮಾತ್ರ ಇಲ್ಲ. ಕುವೆಂಪು ಅವರೇ ಹೇಳಿರುವಂತೆ ಅವರ ರಾಮಾಯಣ ದರ್ಶನವು "ಯುಗಚೈತನ್ಯದ ಸಮಷ್ಟಿ ಪ್ರಜ್ಞೆಯ ಸೃಷ್ಟಿ ಅದು ಶ್ರೀರಾಮಾಯಣದ ಅತ್ಯಂತ ಆಧುನಿಕ ಅವತಾರ. ಅದು ವೈದಿಕ ಸಂಪ್ರದಾಯದ ವಾಲ್ಮೀಕಿ ರಾಮಾಯಣಕ್ಕೆ ಋಣಿಯಾಗಿರುವಂತೆ, ಜೈನಸಂಪ್ರದಾಯದ ರಾಮಾಯಣಗಳಿಗೂ ಋಣಿಯಾಗಿದೆ. ವ್ಯಾಸ, ವಾಲ್ಮೀಕಿ, ಪಂಪ, ನಾಗಚಂದ್ರಾದಿಗಳಿಗೆಂತೋ ಅಂತೆಯೇ ಹೋಮರ್, ವರ್ಜಿಲ್, ಡಾಂಟೆ, ಮಿಲ್ಟನ್ನರಿಗೂ ಋಣಿಯಾಗಿದೆ. ಅಲ್ಲಿ ಶ್ರೀರಾಮಕೃಷ್ಣ, ವಿವೇಕಾನಂದರ ಸಮನ್ವಯದರ್ಶನವನ್ನೆಂತೋ ಅಂತೆಯೇ, ಗಾಂಧೀಜಿ, ವಿನೋಬಾಜಿಯವರಿಂದ ಪ್ರಣೀತವಾದ ಸರ್ವೋದಯ ಭಾವನೆಯನ್ನೂ, ಪಾಶ್ಚಾತ್ಯ ವಿಜ್ಞಾನದ ವಿಕಾಸವಾದವನ್ನೆಂತೋ ಅಂತೆಯೇ, ಶ್ರೀಅರವಿಂದ ಪ್ರಣೀತವಾದ ಪೂರ್ಣಯೋಗ ದರ್ಶನವನ್ನು ಸಂದರ್ಶಿಸಬಹುದು. ಸಮನ್ವಯ, ಸರ್ವೋದಯ ಮತ್ತು ಪೂರ್ಣದೃಷ್ಟಿ–ಇವುಗಳೇ ಶ್ರೀರಾಮಾಯಣದರ್ಶನದ ತ್ರಿನೇತ್ರಗಳಾಗಿವೆ"[1]

ಕುವೆಂಪು ಅವರು ತಮ್ಮ ರಾಮಾಯಣವನ್ನು 'ದರ್ಶನ' ಕಾವ್ಯ ಎಂದು ಕರೆದಿದ್ದಾರೆ. ಈ ದರ್ಶನದ ಕೇಂದ್ರವನ್ನು ಅವರು ತಮ್ಮ ಕಾವ್ಯದಲ್ಲಿ ಕೆಳಗಿನ ಮಾತುಗಳಲ್ಲಿ ವಿವರಿಸಿದ್ದಾರೆ.

**"ಶ್ರೀರಾಮನಾಲೋಕದಿಂದವತರಿಸಿ ಬಂದು**
**ಈ ಲೋಕ ಸಂಭವೆಯನೆಮ್ಮ ಭೂ ಜಾತೆಯಂ**
**ಸೀತೆಯಂ ವರಿಸುತಾಕೆಯ ನೆವದಿ ಮೃಚ್ಛಕ್ತಿಯಂ**
**ಮರ್ದಿಸುತೆ, ಸಂವರ್ಧಿಪೋಲ್ ಚಿಚ್ಛಕ್ತಿಯಂ**
**ರಾವಣಾವಿದ್ಯೆಯೀ ನಮ್ಮ ಮರ್ತ್ಯ ಪ್ರಜ್ಞೆ ತಾಂ**
**ತನ್ನ ತಮದಿಂ ಮುಕ್ತಮಪ್ಪುದು ದಿಟಂ"[2]**

ಇಷ್ಟು ಮಾತ್ರವಲ್ಲ, ಒಂದು ಮಹಾಶಕ್ತಿಯು ಅನ್ನಮಯ ಪ್ರಪಂಚದಿಂದ ಆನಂದಮಯ ಪ್ರಪಂಚಕ್ಕೇರಿದ ಆತ್ಮದ ಪ್ರಯಾಣದ ಕಥೆ ಎಂಬುದಾಗಿ ಕುವೆಂಪು ಭಾವಿಸಿದ್ದಾರೆ. ರಾಮಾಯಣದರ್ಶನಂ ಮಹಾಕಾವ್ಯವು ಕೇವಲ ನನ್ನ ಸೃಷ್ಟಿಯಲ್ಲ. ಭಗವಂತನ ಅವತಾರ ಎಂಬುದು ಅವರ ನಂಬುಗೆಯಾಗಿದೆ. ಕುವೆಂಪು ಅವರ ಶ್ರೀರಾಮಾಯಣದರ್ಶನಂ ಅನೇಕ ಪರಂಪರೆಗಳಿಂದ ಪೋಷಿತವಾಗಿ ಒಂದು ಅಖಂಡ ದರ್ಶನದ ಪ್ರತಿಪಾದನೆಗಾಗಿ ಮರುಹುಟ್ಟು ಪಡೆಯುವ ಚೋದ್ಯವನ್ನು

ನಾವು ನೋಡುತ್ತೇವೆ. ದರ್ಶನಂ ಕಾವ್ಯದ ಪ್ರಾರಂಭದಲ್ಲೇ ಅದಕ್ಕೆ ಸೂಚನೆ ದೊರೆಯುತ್ತದೆ. ವಾಲ್ಮೀಕಿ ರಾಮಾಯಣದಲ್ಲಿ ಬರುವಂತೆ ಕುವೆಂಪು ಅವರ ರಾಮಾಯಣ ದರ್ಶನಂ ಕಾವ್ಯದಲ್ಲಿ ಸಹಾ ಕ್ರೌಂಚ ಯುಗಳಗಳಲ್ಲಿ ಒಂದನ್ನು ಕೊಲ್ಲುವ ಚಿತ್ರ ಬರುತ್ತದೆ. ಆದರೆ ಕ್ರೌಂಚ ವಧೆಯಿಂದ ಮೂಲ ರಾಮಾಯಣದಲ್ಲಿ ವಾಲ್ಮೀಕಿಯು ಕ್ರೋಧ ಪರವಶನಾಗಿ ನಿಷಾಧನನ್ನು ಶಪಿಸುತ್ತಾನೆ. ಆದರೆ ಕುವೆಂಪು ಅವರ ರಾಮಾಯಣದರ್ಶನಂನಲ್ಲಿ ವಾಲ್ಮೀಕಿ ಕ್ರೋಧಗೊಳ್ಳದೆ ನಿಷಾಧನಿಗೆ ಅಹಿಂಸಾವ್ರತವನ್ನು ಬೋಧಿಸುತ್ತಾನೆ. ಮೃತಪಟ್ಟಿದ್ದ ಗಂಡು ಕ್ರೌಂಚ ಪಕ್ಷಿಯನ್ನು ಸಂಜೀವಿನಿಯಿಂದ ಮತ್ತೆ ಬದುಕಿಸುತ್ತಾನೆ. ಮುಂದೆ ಕಾವ್ಯವು ಪಡೆಯುವ ಅದ್ಭುತವಾದ ತಿರುವುಗಳಿಗೆ ಆರಂಭದಲ್ಲೆ ಈ ಪ್ರಸಂಗವು ಸೂಚನೆಯಾಗಿ ಒದಗುತ್ತದೆ.

ರಾಮಾಯಣ ದರ್ಶನಂ ಕಾವ್ಯದಲ್ಲಿ ಕವಿ ಮಾಡಿಕೊಳ್ಳುವ ಕಥಾಂತರಗಳಿಗೆ, ಕುವೆಂಪು ಅವರ ಕೆಲವು ತಾತ್ವಿಕ ಚಿಂತನೆಗಳ ತಳಹದಿಯಿರುವುದು ಕಂಡುಬರುತ್ತದೆ. ಮೊದಲನೆಯದಾಗಿ ಈ ಜಗತ್ತಿನಲ್ಲಿ ಪ್ರತಿಯೊಬ್ಬರಿಗೂ ಉದ್ಧಾರವಿದೆ ಎಂಬ ಕುವೆಂಪು ಅವರ ತಾತ್ವಿಕ ನಿಲುವು. ಇದು ಗಾಂಧಿ ಮತ್ತು ವಿನೋಭಾ ಅವರ ಸರ್ವೋದಯ ಕಲ್ಪನೆಯ ಪರಿಣಾಮವೆಂದು ನಾವು ಭಾವಿಸಬಹುದು. ರಾಮಾಯಣದಲ್ಲಿ ಪ್ರತಿಯೊಂದು ಪಾತ್ರವು ಉದ್ಧಾರದ ಹಾದಿಯಲ್ಲಿ ಚಲಿಸುವ ಉಪಕ್ರಮವನ್ನು ನಾವು ನೋಡಬಹುದು. ಸೃಷ್ಟಿಯೆಂಬುದು ಒಂದು ಮಹಾನ್ ವ್ಯೂಹ ರಚನೆಯಾಗಿದ್ದು ಈ ವ್ಯೂಹರಚನೆಯಲ್ಲಿ ಯಾರು ಯಾವ ಕಾರಣಕ್ಕೂ ಇದ್ದಲ್ಲೇ ಇದ್ದು ಸ್ಥಗಿತಗೊಳ್ಳಬೇಕಾಗಿಲ್ಲ.

"ಪ್ರತಿಯೊಂದು ಜೀವಕ್ಕೂ ತನ್ನ ಪಾರಿಣಾಮಕ ಪಥದ ಯಾತ್ರೆಯಲ್ಲಿ ಇಂದಲ್ಲ ನಾಳೆ ತಮ್ಮ ಬಿಡುಗಡೆಯನ್ನು ಪಡೆದುಕೊಳ್ಳುವ ಅವಕಾಶ ಮತ್ತು ಅಧಿಕಾರವಿದೆ. ಶ್ರೀರಾಮಾಯಣದರ್ಶನಂ ಎತ್ತಿ ಹಿಡಿಯುವ ದರ್ಶನಗಳಲ್ಲಿ ಇದು ಒಂದು. ಮಂಥರೆಯಿಂದ ಮೊದಲುಗೊಂಡು ರಾವಣನವರೆಗೆ ಯಾವ ಪಾತ್ರವೂ ಈ ಮಹಾಚಲನೆಯಲ್ಲಿ ಕ್ರಮೇಣ ಪಡೆದುಕೊಳ್ಳುವ ಪರಿವರ್ತನೆಗೆ ಹೊರತಲ್ಲ. ಲಂಕೆಯಿಂದ ಅಯೋಧ್ಯೆಯವರೆಗೆ ಅದೆಷ್ಟು ಬಿಡುಗಡೆಗಳು, ಅದೆಷ್ಟು ತಪಸ್ಸಿದ್ಧಿಗಳು. ಈ ಹಿನ್ನೆಲೆಯಿಂದ ಕುವೆಂಪು ರಾಮಾಯಣದ ಪ್ರತಿಯೊಂದು ಪಾತ್ರವು ತಮ್ಮ ಜನ್ಮೋದ್ದೇಶ ಸಾಧನೆಯ ಪಾರಿಣಾಮಕ ಪಥದೊಳಗಿನ ಸಾಧಕರೇ ಮಂಥರೆ, ಅಹಲ್ಯೆ, ಶಬರಿ, ಸಂಪಾತಿ, ಮಹಾಪಾರ್ಶ್ವ, ರಾವಣ ಅಷ್ಟೇ ಅಲ್ಲ ರಾಮ ಸೀತೆಯರೂ ಸಾಧಕರೆ"[3]

ಸೃಷ್ಟಿಯ ಮಹಾನ್ ವ್ಯೂಹ ರಚನೆಯಲ್ಲಿ ಪಾಪಿಗೂ ಉದ್ಧಾರವಿಹುದು ಎಂಬ ಕುವೆಂಪು ಅವರ ನಂಬಿಕೆ ಈ ದರ್ಶನದ ಆಧಾರವಾಗಿದೆ. ಎರಡನೆಯದಾಗಿ ಕುವೆಂಪು ಅವರ ದರ್ಶನವೆಂದರೆ ಪೂರ್ಣದೃಷ್ಟಿ. ಕವಿಯೇ ಹೇಳುವಂತೆ ಯಾವುದು "ಕಂಡ ದೃಷ್ಟಿಗೆ ಅನ್ಯಾಯವೆಂದೂ, ಅಧರ್ಮವೆಂದೂ, ವ್ಯರ್ಥವೆಂದೂ ತೋರುವ ವ್ಯಾಪಾರಗಳು, ಪೂರ್ಣದೃಷ್ಟಿಗೆ ಅಪ್ಪರಲ್ಲಿಯೇ ಕೊನೆಗಾಣದೆ ಪರಮ ಪ್ರಯೋಜನದ ಕಡೆಗೆ ಚಲಿಸುವಂತೆ ಗೋಚರಿಸುತ್ತವೆ. ಅದಕ್ಕೆ ಕುವೆಂಪು ಅವರ ಪ್ರಕಾರ ಪೂರ್ಣದೃಷ್ಟಿ ಎನ್ನುವುದು ದರ್ಶನ ಎನ್ನುವುದಕ್ಕೆ ಒಂದು ಪರ್ಯಾಯ ಕಲ್ಪನೆ.

**"ನೆಯ್ದಾಳುತಿದೆ ಜಗವನೊಂದತಿ ವಿರಾಣ್ ಮನಂ**
**ಸೂಕ್ಷ್ಮಾತಿ ಸೂಕ್ಷ್ಮತಂತ್ರದಿಂ ಬಿಗಿದು ಕಟ್ಟಿಯುಂ**
**ಜೀವಿಗಳ್ಗಿಚ್ಛೆಯಾ ಸ್ವಾತಂತ್ರ ಭಾವಮಂ**
**ನೀಡಿ. ಮಂಥರೆ, ಸೀತೆ, ರಾಮರಾವಣರೆಲ್ಲರುಂ**
**ಸೂತ್ರಗೊಂಬೆಗಳಲ್ತೆ ಈ ವಿಧಿಯ ಹಸ್ತದಲಿ"[2]**

ಈ ವಿರಾಣ್ ಮನ ಎಂಬುದನ್ನು ವಿಧಿಯೆಂಬ ಕಲ್ಪನೆಗೆ ಪರ್ಯಾಯವಾಗಿ ಕುವೆಂಪು ಬಳಸಿದ್ದಾರೆ. ಜೈನ ಕಾವ್ಯದಲ್ಲಿ ಮತ್ತೆ ಮತ್ತೆ ಕಾಣುವ ಈ ವಿಧಿಯ ಸರ್ವಶಕ್ತಿ, ಕುವೆಂಪು ಕಾವ್ಯದಲ್ಲಿ ಪೌರುಷವಾದದ ಕಲ್ಪನೆಯಿಂದ ಸಂಘರ್ಷಕ್ಕೂ ಒಳಪಡುತ್ತದೆ. ಎಲ್ಲವೂ ಈಶ್ವರೇಚ್ಛೆಯಂತೆ ನಡೆಯುತ್ತದೆ ಎಂಬುದನ್ನು ಕುವೆಂಪು ಅವರು ಒಪ್ಪುತ್ತಾರಾದರೂ ಮನುಷ್ಯರು ತಮ್ಮ ವಿಧಿಯ ವಿರುದ್ಧದ ಹೋರಾಟವನ್ನು ಸುಲಭಕ್ಕೆ ಬಿಟ್ಟುಕೊಡುವುದಿಲ್ಲ. ಹಾಗಾಗಿ ರಾಮಾಯಣದರ್ಶನಂ ಕಾವ್ಯದಲ್ಲಿ ಪಾತ್ರಗಳು ಕೇವಲ ಸೂತ್ರದ ಗೊಂಬೆಗಳಾಗಿ ಪರಿಣಮಿಸುವುದಿಲ್ಲ. ವಿಧಿಯ ವಿರುದ್ಧ ಅವು ಕೈಮೀರಿ ಸೆಣಸುತ್ತವೆ. ಈ ಸೆಣಸಿನಿಂದ ರಾವಣ ಮೊದಲಾದ ಪಾತ್ರಗಳಿಗೆ ವಿಲಕ್ಷಣವಾದ ಸ್ವಾಯತ್ತತೆಯು ಪ್ರಾಪ್ತವಾಗುತ್ತದೆ.

ಪೂರ್ಣದೃಷ್ಟಿಯ ದರ್ಶನವನ್ನು ಸ್ಪಷ್ಟಪಡಿಸುವುದಕ್ಕೆ ಮಂಥರೆಯ ಪ್ರಸಂಗವನ್ನೇ ದೃಷ್ಟಾಂತವಾಗಿ ನೋಡಬಹುದು. ಖಂಡದೃಷ್ಟಿಯಿಂದ ನೋಡಿದಾಗ, ಮಂಥರೆ ರಾಮನ ವನವಾಸಕ್ಕೆ ಕಾರಣಳಾದುದು ಅಮಂಗಳಕಾರಿ ಕೃತ್ಯವೆನ್ನಿಸಬಹುದು. ಆದರೆ ಪೂರ್ಣದೃಷ್ಟಿಯಲ್ಲಿ ಮಂಥರೆಯ

ಕಾರ್ಯವು ಕೊನೆಗೆ ಲೋಕ ಮಂಗಳಕಾರಿ ಅನ್ನಿಸಬಹುದು. ಆದುದರಿಂದಲೇ ಪೂರ್ಣದೃಷ್ಟಿಯು ದರ್ಶನದ ಒಂದು ಘನವಾದ ನೋಟವೆಂದು ಕುವೆಂಪು ಭಾವಿಸಿದ್ದಾರೆ.(ಪೂರ್ಣದೃಷ್ಟಿಯೇ ನಿಜವಾದ ಶಾಶ್ವತವಾದ ಸರ್ವೋತ್ಕೃಷ್ಟವಾದ ದರ್ಶನ) ಪೂರ್ಣದೃಷ್ಟಿಗೆ ವಿಧಿಯ ಎಲ್ಲ ವಿನ್ಯಾಸವು ಕೊನೆಗೆ ಶಿವಾಭಿಮುಖವಾದದ್ದು ಎಂಬುದನ್ನು ಗ್ರಹಿಸಲು ಸಾಧ್ಯವಾಗುತ್ತದೆ”[೮]

ಕುವೆಂಪು ಅವರ ರಾಮಾಯಣದರ್ಶನಂ ಕಾವ್ಯದಲ್ಲಿ ಕಥಾಂತರಕ್ಕೆ ಕಾರಣವಾಗುವ ಇನ್ನೊಂದು ಮುಖ್ಯ ಅಂಶವೆಂದರೆ ಮೂಲರಾಮಾಯಣದಲ್ಲಿ ಅಲಕ್ಷ್ಯಕ್ಕೆ ಒಳಗಾದ ಅನೇಕ ಪಾತ್ರಗಳಿಗೆ ನ್ಯಾಯ ಒದಗಿಸುವ, ಆ ಪಾತ್ರಗಳನ್ನು ಮತ್ತೆ ಮುನ್ನೆಲೆಗೆ ತರುವ ಘನವಾದ ಉದ್ದೇಶ. ಮೂಲ ರಾಮಾಯಣದಲ್ಲಿ ಹಾಗೆ ನಿರ್ಲಕ್ಷಿತವಾದ ಪಾತ್ರಗಳಲ್ಲಿ ಊರ್ಮಿಳೆಯ ಪಾತ್ರವೂ ಒಂದು. ಕವಿ ರವೀಂದ್ರನಾಥ ಠಾಗೂರರು ತಮ್ಮ 'ಕಾವ್ಯದ ಅನಾದರ' ಎಂಬ ಲೇಖನದಲ್ಲಿ ಈ ಕುರಿತು ಪ್ರಸ್ತಾಪ ಮಾಡಿದ್ದಾರೆ. ೧೯೨೦ರಲ್ಲಿ ಕುವೆಂಪು ಅವರ ಗುರುಗಳಾದ ಟಿ.ಎಸ್.ವೆಂಕಣ್ಣಯ್ಯನವರು ಠಾಗೂರರ ಲೇಖನವನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದ್ದಾರೆ. ಕುವೆಂಪು ಅವರಿಗೆ ಇಂಥ ಲೇಖನಗಳು ಪ್ರಚೋದನೆ ಒದಗಿಸಿರಲೇಬೇಕು. ಅವರು ಊರ್ಮಿಳೆಯ ಪಾತ್ರವನ್ನು ಕುರಿತು ತಮ್ಮ ಕಾವ್ಯದಲ್ಲಿ ಪುನಾರಾಲೋಚನೆ ಮಾಡಿದ್ದಾರೆ. ಹಾಗೆ ಊರ್ಮಿಳೆಯ ಪಾತ್ರವನ್ನು ಮತ್ತೆ ಮುನ್ನೆಲೆಗೆ ತಂದ ಕವಿಗಳು ಭಾರತದಲ್ಲಿ ಇಬ್ಬರು. ಹಿಂದಿಯಲ್ಲಿ 'ಸಾಕೇತ' ಎಂಬ ಕಾವ್ಯದ ಮೂಲಕ ಊರ್ಮಿಳೆಯನ್ನು ಕುರಿತು ಬರೆದವರು ಮೈಥಿಲಿ ಶರಣಗುಪ್ತರು. ೧೯೩೨ರಲ್ಲಿ ಸಾಕೇತ ಪ್ರಕಟವಾದರೆ ೧೯೪೯ರಲ್ಲಿ ಕುವೆಂಪು ಅವರು ತಮ್ಮ ರಾಮಾಯಣ ಕಾವ್ಯದಲ್ಲಿ ಊರ್ಮಿಳೆಯ ಪಾತ್ರವನ್ನು ಮುನ್ನೆಲೆಗೆ ತಂದು ಆ ಪಾತ್ರಕ್ಕೆ ನ್ಯಾಯ ಒದಗಿಸುವ ಪ್ರಯತ್ನ ಮಾಡಿದ್ದಾರೆ. ರಾಮಾಯಣದರ್ಶನಂ ಕಾವ್ಯದ ಅಯೋಧ್ಯಾ ಸಂಪುಟದಲ್ಲಿ ಊರ್ಮಿಳೆಯನ್ನು ಕುರಿತು ಬರೆದ ಒಂದು ಸಂಚಿಕೆಯೇ ಇದೆ. ಊರ್ಮಿಳಾದೇವಿಯನ್ನು 'ನೀರವಧ್ಯಾನವಧು' ಎಂದು ಕುವೆಂಪು ಗುರುತಿಸುತ್ತಾರೆ. ಅಷ್ಟು ಮಾತ್ರವಲ್ಲ ಕಾವ್ಯದ ಉದ್ದಕ್ಕೂ ಊರ್ಮಿಳೆಯ ಪಾತ್ರದ ಪ್ರಸ್ತಾಪ ಮತ್ತೆ ಮತ್ತೆ ಬರುತ್ತದೆ. ರಾಮ ಲಕ್ಷ್ಮಣ ಸೀತೆಯರು ಚಿತ್ರಕೂಟದಲ್ಲಿರುವಾಗ ಊರ್ಮಿಳೆಯನ್ನು ರಾಮ ಕನಸಿನಲ್ಲಿ ಕಾಣುತ್ತಾನೆ. ಆಗ ನಡುರಾತ್ರಿಯಲ್ಲೇ ಲಕ್ಷ್ಮಣನನ್ನು ಕರೆದು 'ತಮ್ಮ ನೀನು ಅಯೋಧ್ಯೆಗೆ ಹಿಂದಿರುಗು. ಊರ್ಮಿಳೆ ನಿನ್ನನ್ನೇ ಕರೆದು ಗೋಳಾಡುತ್ತಿರುವಂತೆ ನಾನು ಕನಸನ್ನು ಕಂಡೆ'ಎನ್ನುತ್ತಾನೆ. ಆಗ ಲಕ್ಷ್ಮಣನೇ ರಾಮನನ್ನು ಸಮಾಧಾನ ಪಡಿಸಬೇಕಾಗುತ್ತದೆ.

"ಅಣ್ಣಾ,

ಕಾಂತೆ ಊರ್ಮಿಳೆ ತಪಸ್ವಿನಿ. ನಿನ್ನೊಡನೆ ಬರುವ
ಮುನ್ನ ಆಕೆಯ ಕೃಪೆಯನಾಂತೇ ಬಂದೆನ್. ನಿನಗೆ
ಚಿಂತೆಯಿನಿತಾ ದೆಸೆಗೆ ಬೇಡಯ್"

ಇಷ್ಟು ಮಾತ್ರವಲ್ಲ ಊರ್ಮಿಳೆಯ ತಪಃಶಕ್ತಿಯು ರಕ್ಷಾಮಣಿಯಂತೆ ಸೀತಾರಾಮಲಕ್ಷ್ಮಣರ ಕ್ಷೇಮವನ್ನು ಕಾಪಾಡಿದ್ದನ್ನು ಕುವೆಂಪು, ಕಾವ್ಯದ ಉದ್ದಕ್ಕೂ ಚಿತ್ರಿಸುತ್ತಾ ಹೋಗಿದ್ದಾರೆ.

ಕುವೆಂಪು ಅವರ ಪ್ರತಿಭೆಯ ಮತ್ತೊಂದು ವಿಶೇಷ ಲಕ್ಷಣವೆಂದರೆ ಅವರ ನಿಸರ್ಗಪ್ರೀತಿ. ಸಹ್ಯಾದ್ರಿಯ ತಪ್ಪಲಲ್ಲಿ, ದಟ್ಟಮಲೆನಾಡಿನಲ್ಲಿ ತಮ್ಮ ಬಾಲ್ಯವನ್ನು ಕಳೆದ ಕುವೆಂಪುರವರಿಗೆ ನಿಸರ್ಗಪ್ರೀತಿಯು ತೀರ ಸಹಜವಾಗಿರುವಂತಹದ್ದು. ಹೀಗಾಗಿ ರಾಮನ ವನವಾಸವು ಕುವೆಂಪು ಅವರಿಗೆ ರಾಮನನ್ನು ಗಿರಿವನಪ್ರೇಮಿಯಾಗಿ ಚಿತ್ರಿಸುವಲ್ಲಿ ತುಂಬಾ ಸಹಕಾರಿಯಾಗಿ ಒದಗಿಬಂದಿದೆ.

"ದಾರಿದ್ರ್ಯಮಲ್ತೆ ನಾಗರಿಕ ಜೀವನಂ ಈ ವನ್ಯಸಂಸ್ಕೃತಿಯ ಮುಂದೆ"[೧೦] ಎಂದು ರಾಮನು ಉದ್ಗರಿಸುತ್ತಾನೆ. ಮತ್ತು ಈ ವನ್ಯ ಸಂಸ್ಕೃತಿಯು ರಾಮನಲ್ಲಿ ರಸೋತ್ಕರ್ಷವನ್ನೂ, ಆಧ್ಯಾತ್ಮಿಕ ಚೈತನ್ಯಾನುಭವವನ್ನೂ ನೀಡುತ್ತದೆ. ಕೇವಲ ರಾವಣನನ್ನು ಕೊಂದ ಮಾತ್ರದಿಂದ ರಾಮನು ದೊಡ್ಡವನಾಗುವುದಿಲ್ಲ. ರಾಮನು ತನ್ನ ಪತ್ನಿಯನ್ನು ಒಲಿದ ಕಾರಣಕ್ಕಾಗಿ ದೊಡ್ಡವನಾಗುತ್ತಾನೆ. ಕುವೆಂಪು ಅವರ ಪ್ರಕಾರ 'ಪೆರ್ಮೆಗೆ ಒಲ್ಮೆಯೇ ಚಿನ್ಹೆ' ದರ್ಶನಂ ಕಾವ್ಯದಲ್ಲಿ ಅವರು ಸ್ಪಷ್ಟವಾಗಿ ಹೇಳುತ್ತಾರೆ.

"ಮಣಿಯುವೆನು ರಾಮನಡಿದಾವರೆಗೆ
ದಶಶಿರನ ವಧೆಗಾಗಿಯಲ್ತು ಮಂದಾಕಿನಿಯ
ತಿಳಿವನಲ ಮೀಯುತಿರಲೊರ್ ದಿನಂ ತಾಂ ಕಂಡ
ದೃಶ್ಯ ಸೌಂದರ್ಯದಿಂದಾತ್ಮದರ್ಶನಕೇರ್ದ
ರಸ ಸಮಾಧಿಯ ಮಹಿಮೆಗಾಗಿ!"[೧೧]

ಕುವೆಂಪು ಅವರ ಈ ನಿಸರ್ಗ ಪ್ರೀತಿಗೆ ಪೂರಕವೆನಿಸುವ ಇನ್ನೊಂದು ಅಂಶ, ಅವರ ವೈಚಾರಿಕ ನಿಲುವು. ಕುವೆಂಪು ತಮ್ಮ ಕಾವ್ಯವನ್ನು ಬರೆಯುತ್ತಿದ್ದುದು ವಿಶ್ವಇತಿಹಾಸದ ಪರ್ವಕಾಲದಲ್ಲಿ. ಜಗತ್ತನ್ನು ಮಹಾನಾಶಕ್ಕೆ ನೂಕುತ್ತಿದ್ದ ಸಮರ ಪಿಪಾಸುಗಳಾದ ಹಿಟ್ಲರ್, ಮುಸಲೋನಿಯಂಥವರು ಒಂದುಕಡೆ, ಶಾಂತಿಪ್ರಿಯರು, ಆಧ್ಯಾತ್ಮಸಾಧಕರಾದಮಹಾತ್ಮಗಾಂಧಿ, ಅರವಿಂದ, ರಮಣಮಹರ್ಷಿ ಯಂಥವರು ಇನ್ನೊಂದು ಕಡೆ. ಕುವೆಂಪು ಅವರು ತಮ್ಮ ಕಾವ್ಯದಲ್ಲಿ ಉದ್ದಕ್ಕೂ ಯುದ್ಧವಿರೋಧಿ ನಿಲುವನ್ನು ಎತ್ತಿ ಹಿಡಿಯುತ್ತಾರೆ. ಗಾಂಧೀಜಿಯವರ ಅಹಿಂಸೆ, ಸರ್ವೋದಯದ ಕಲ್ಪನೆಗಳು ಯಾವಕಾಲಕ್ಕೂ ಜಗತ್ತಿನ ದೊಡ್ಡ ಮೌಲ್ಯಗಳೆಂದು ಗೌರವಿಸುತ್ತಾರೆ. ಆದ ಕಾರಣವೇ ಅವರ ಕಾವ್ಯ, ಹಿಂಸೆ, ಯುದ್ಧ ಇವುಗಳ ವಿರುದ್ಧ ಉದ್ದಕ್ಕೂ ತನ್ನ ಧ್ವನಿ ಎತ್ತುತ್ತದೆ. ದಶರಥನು ಸಂತಾನಕ್ಕಾಗಿ ಯಾಗವನ್ನು ಮಾಡಲು ಕಲ್ಪಿಸಿದಾಗ ಜಾಬಾಲಿಯೆಂಬ ಋಷಿ ಅತನಿಗೆ ಹಿಂಸೆ ಮತ್ತು ಕ್ರೌರ್ಯಗಳಿಲ್ಲದ ಯಾಗ ಮಾಡುವಂತೆ ಬೋಧಿಸುತ್ತಾನೆ. ಮೂಲ ರಾಮಾಯಣದ ಯಾಗದ ಹಿಂಸಾಕಾಂಡಕ್ಕೆ ಇದು ತದ್ವಿರುದ್ಧವಾದ ನಿಲುವಾಗಿದೆ. ಶ್ರೀರಾಮನು ಸೀತೆಯ ವಿಮುಕ್ತಿಗಾಗಿ ರಾವಣನೊಂದಿಗೆ ಯುದ್ಧ ಮಾಡುವುದು ಅನಿವಾರ್ಯವಾಗುತ್ತದೆ. ಆದರೆ ರಾಮ ತನ್ನ ಸ್ವಾರ್ಥಕ್ಕಾಗಿ, ಸುಖಕ್ಕಾಗಿ ಅನೇಕರನ್ನು ನಾನು ಬಲಿಗೊಡುತ್ತಿರುವೆನಲ್ಲ ಎಂಬ ಪಾಪ ಪ್ರಜ್ಞೆಯನ್ನು ನೀಲನ ಮುಂದೆ ಮಾತನಾಡುವಾಗ ವ್ಯಕ್ತಪಡಿಸುತ್ತಾನೆ. ನನ್ನ ಮತ್ತು ನನ್ನ ಪತ್ನಿಯ ಅನಿಶ್ಚಿತವಾದ ಭವಿಷ್ಯದ ಸುಖಕ್ಕಾಗಿ ಅನೇಕ ಜನ ಯೋಧರ ಸಂಸಾರ ಸುಖವನ್ನು ನಾನು ನಾಶ ಮಾಡುತ್ತಿರುವೆನಲ್ಲವೆ ಎಂದು ರಾಮ ತನ್ನ ಒಳತೋಟಿಯನ್ನು ವ್ಯಕ್ತಪಡಿಸುತ್ತಾನೆ. ಇತ್ತ ಅಶೋಕವನದಲ್ಲಿರುವ ಸೀತೆಯು ತ್ರಿಜಟೆಗೆ ಇದೇ ರೀತಿಯ ಮಾತುಗಳನ್ನು ಹೇಳುತ್ತಾಳೆ. 'ನನ್ನ ಕಾರಣದಿಂದ ಅದೆಷ್ಟು ಜನ ಕಿಷ್ಕಿಂಧೆಯ ಮತ್ತು ಲಂಕೆಯ ಹೆಣ್ಣುಮಕ್ಕಳು ತಮ್ಮ ಮಂಗಳಸೂತ್ರ ಭಂಗವನ್ನು ಕಾಣುತ್ತಾರೋ ಎಂದು ವ್ಯಥೆಪಡುತ್ತಾಳೆ. ರಾವಣನನ್ನು ಅಗಲಿ ವಿಭೀಷಣನು ನಗರವನ್ನು ಬಿಟ್ಟು ಕಾಡಿಗೆ ಹೋಗುತ್ತಾನೆ. ಯುದ್ಧವೆನ್ನುವುದು ಯಾರೋ ಕೆಲವರ ಸ್ವಾರ್ಥಕ್ಕಾಗಿ ಬಹುಮಂದಿಯ ಬದುಕನ್ನು ಬಲಿಕೊಡುವ ಅವಿವೇಕ ಎಂಬ ನಿಲುವೇ ವಿಭೀಷಣ ಈ ವರ್ತನೆಗೆ ಕಾರಣ. ಅವನೇನು ತಾನಾಗಿ ಶ್ರೀರಾಮನ ಪಕ್ಷವನ್ನು ಸೇರುವುದಿಲ್ಲ. ರಾಮನು ತಾನೇ ದೂತರನ್ನು ಕಳುಹಿಸಿ ವಿಭೀಷಣನನ್ನು ತನ್ನ ಬಳಿಗೆ ಕರೆಸಿಕೊಳ್ಳುತ್ತಾನೆ ಮತ್ತು ಲಂಕೆಯಲ್ಲಿ ಯಾರು ಒಳ್ಳೆಯವರೋ, ಸಜ್ಜನರೋ ಅವರ ನಾಶವನ್ನು ತಪ್ಪಿಸಲು, ವಾನರಸೇನೆಗೆ ಮಾರ್ಗದರ್ಶನ ಮಾಡುವ ಸಲುವಾಗಿ ವಿಭೀಷಣನ ಮನವೊಲಿಸುತ್ತಾನೆ.

"ಲಂಕೆಯೊಳ್
ಬದುಕಲ್ ಅರ್ಹತೆಯಾಂತುದು ಪೊರೆಯಲ್ಕೆ
ಸಾರುತಿರ್ಪೆಂ ನಿನ್ನ ನೆರವಂ, ಕಪಿಧ್ವಜರ್
ಉತ್ತಾಮಾನುತ್ತಮಂಗಳಂ ಎಂತುಟರಿವಯ್?
ನಿಷ್ಪಕ್ಷಪಾತದಿಂ ನಿರ್ಮೂಲನಂಗೈದಪರ್
ಲಂಕಾಸಮಸ್ತಂ. ನೀನೆಮ್ಮ ಪಕ್ಕಮಿರೆ
ಅಳಿವುದಧಮಂ. ಉಳಿವುದುತ್ತಮಂ. ನಮಗಾಗಿ
ಬರದಿರ್ದೊಡಂ, ನಿನ್ನ ದೇಶಕ್ಕೆ, ಜನಕ್ಕೆ, ಮೇಣ್
ಧರ್ಮಕ್ಕೆ ಹಿತಂಗೈಯ್ಯಲೆಂದಾದೊಡಂ ನೀಂ
ಬರಲ್ ವೇಳ್ಕುಮಯ್, ಸತ್ವಶೀಲ."[೧೨]

ರಾವಣನ ಸಭೆಯಲ್ಲಿ, ರಾವಣನು ಸಭೆಯನ್ನು ಉದ್ದೇಶಿಸಿ ಯೋಧರನ್ನು ಪ್ರಚೋದಿಸುವಂತೆ ಭಾವಾವೇಶ ಪೂರ್ಣವಾದ ಭಾಷಣವನ್ನು ಮಾಡುತ್ತಾನೆ. ಲಂಕೆಯ ಸಂಸ್ಕೃತಿಯ ರಕ್ಷಣೆಗಾಗಿ ನಾವು ರಾಮನೊಂದಿಗೆ ಹೋರಾಡಬೇಕು ಎನ್ನುತ್ತಾನೆ. ಅವನ ಮಾತಿನ ನಂತರ ಆ ಸಭೆಯಲ್ಲಿದ್ದ ಕೆಲವರು ತಮ್ಮ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸುತ್ತಾರೆ. ಅಕಂಪನ ಎಂಬ ರಾಕ್ಷಸವೀರನು ರಾಜಭಕ್ತಿಯ ನೆಲೆಯಲ್ಲಿ ರಾಜತ್ವವನ್ನು ವೈಭವೀಕರಿಸಿ ಮಾತನಾಡುತ್ತಾನೆ. ಆದರೆ ಹಿರಣ್ಯಕೇಶಿ ಎಂಬ ತರುಣಕವಿ ನೇರವಾಗಿ ರಾವಣನನ್ನು ಖಂಡಿಸಿ ದಿಟ್ಟವಾದ ನಿಲುವನ್ನು ವ್ಯಕ್ತಪಡಿಸುತ್ತಾನೆ.

"ಸುಖನೊರ್ವನದು ಸಕಲರ ದುಃಖಕಾರಣಂ
ತಾನೊಪ್ಪೊಡದು ನಿಂದನೀಯಂ ನೃಪನಾದೊಡಂ"[೧೩]

ಈ ಎಲ್ಲ ಭಾಗಗಳು ಕುವೆಂಪು ಅವರ ವೈಚಾರಿಕತೆಗೆ ಸ್ಪಷ್ಟ ಉದಾಹರಣೆಗಳಾಗಿವೆ. ಯುದ್ಧಾನಂತರ ಸೀತೆಯೊಂದಿಗೆ ರಾಮನು ಅಗ್ನಿಪ್ರವೇಶ ಮಾಡಿ ತನ್ನ ಶುಚಿತ್ವವನ್ನು ಸಾಧಿಸುವ ಕಲ್ಪನೆಯಂತೂ ಕುವೆಂಪು ವೈಚಾರಿಕತೆಯ ಶೃಂಗಾಂಶವೆನ್ನಬಹುದು. ಪುರುಷ ಕೇಂದ್ರಿತ ಸಮಾಜದಲ್ಲಿ ಸ್ತ್ರೀಪರವಾದ ಈ

ನಿಲುವು, ರಾಮಾಯಣದ ಅತ್ಯಂತ ಬಿಕ್ಕಟ್ಟಿನ ಒಂದು ಪ್ರಸಂಗವನ್ನು ಅತ್ಯುನ್ನತ್ತ ಘನತೆಯ ಮಟ್ಟಕ್ಕೇರಿಸುತ್ತದೆ.

ಕುವೆಂಪು ಅವರು ತಮ್ಮ ಕಾವ್ಯವನ್ನು ವಸಾಹುತಶಾಹಿ ಸಂದರ್ಭದಲ್ಲಿ ಬರೆದರೆಂಬುದನ್ನು ಕೂಡಾ ನಾವು ಮರೆಯುವಂತಿಲ್ಲ. ರಾಮನು ಪುಣ್ಯಾಶ್ರಮಗಳ ರಕ್ಷಣೆಯ ನೆವವೊಡ್ಡಿ ದಕ್ಷಿಣದ ಮೂಲ ನಿವಾಸಿಗಳನ್ನು, ನಿವಾರಿಸುತ್ತಾ ಅಥವಾ ಕೊಲ್ಲುತ್ತಾ ಅವರ ನೆಲವನ್ನು ಆಕ್ರಮಿಸಿಕೊಳ್ಳುತ್ತ, ಆರ್ಯರಾದ ಋಷಿಗಳು ಅಲ್ಲಿ ನೆಲೆಸಲು ಅವಕಾಶ ಕಲ್ಪಿಸುವುದನ್ನು ಸಮ್ಮತಿಸದೆ ಸೀತೆಯೇ ರಾಮನನ್ನು ಆಕ್ಷೇಪಿಸುತ್ತಾಳೆ. ಒಬ್ಬ ರಾಕ್ಷಸ ಕೆಟ್ಟವನಾದ ಮಾತ್ರಕ್ಕೆ ಎಲ್ಲಾ ರಾಕ್ಷಸರು ಶಿಕ್ಷೆಗೆ ಅರ್ಹರೆ ಎಂಬುದಾಗಿಯೂ ಪ್ರಶ್ನಿಸುತ್ತಾಳೆ. ರಾಮನು ಆಗ 'ಪಿರಿತನಕೆ ಮಣಿವುದೇ ಕಿರಿಯ ಸಂಸ್ಕೃತಿಗೆ ಮೇಲ್ಮೆ'ಎಂದು ತನ್ನನ್ನು ಸಮರ್ಥಿಸಿಕೊಳ್ಳುತ್ತಾನೆ. ಇದು ವಸಾಹುತುಶಾಹಿ ಸಂದರ್ಭದ ಸಾಮ್ರಾಜ್ಯಶಾಹಿ ಧೋರಣೆಯಾಗಿದೆ. ಬ್ರಿಟೀಷ್ ಪ್ರಭುತ್ವವು ಹೀಗೆ ತಾನೆ ವಾದ ಮಾಡಿದ್ದು? ಈ ಸಂಗತಿಯನ್ನು ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ತಮ್ಮ ಬರವಣಿಗೆಯಲ್ಲಿ ಸವಿವರವಾಗಿಯೇ ಚರ್ಚೆ ಮಾಡಿದ್ದಾರೆ– "ಕಿರು ಸಂಸ್ಕೃತಿಯ ಉದ್ಧಾರ ಮಾಡಲೇಂದೇ ಅಥವಾ ಅಧೀನ ಸಂಸ್ಕೃತಿಯ ಉದ್ಧಾರಕ್ಕೆಂದೇ ತಾನು ಆಳುತ್ತಿರುವುದು ಎಂಬ ಈ ವಾದವನ್ನೇ ಬ್ರಿಟೀಷರು ಮಂಡಿಸಿದ್ದು, ಪುಣ್ಯಂ ವಿಪತ್ತಿನ ತೆರದಿ ಒಮ್ಮೊಮ್ಮೆ ದೈತ್ಯನತೆರದಿ ಜನತೆಯನ್ನು, ನಾಡನ್ನು ಆಕ್ರಮಣ ಮಾಡುತ್ತದಂತೆ. ಆದರೆ ಈ ಆಕ್ರಮಣ ಜನತೆಯ ಉದ್ಧಾರಕ್ಕೆ, ಇಲ್ಲಿ ರಾಮ ಮಾಡುತ್ತಿರುವುದು ಈ ಬಗೆಯ ಆಕ್ರಮಣವೆ. ಈಗ ಶ್ರೀರಾಮ ನಮಗೆ ಸಾಮ್ರಾಜ್ಯಶಾಹಿಯ ಪ್ರತಿನಿಧಿಯಾಗಿ ಕಾಣಿಸುತ್ತಿದ್ದಾನೆ. ಅವನ ದಕ್ಷಿಣ ಪಯಣ ಸಾಮ್ರಾಜ್ಯದ ವಿಸ್ತರಣೆಯ ದಿಗ್ವಿಜಯದ ಕ್ರಮವಾಗಿ ರೂಪಾಂತರಗೊಳ್ಳುತ್ತದೆ. ತಾನು ಗೆದ್ದ ಕಡೆ ವಸಾಹುತ ಸ್ಥಾಪಿಸಿ ಆತ ಮುಂದುವರಿಯುತ್ತಾನೆ. ಕಿಷ್ಕಿಂಧೆ, ಲಂಕೆ ಹೀಗೆ ಇವೆಲ್ಲವೂ ವಸಾಹುತುಗಳಾಗಿ ಬಿಡುತ್ತದೆ. ರಾಮಾಯಣದ ಕಥೆ ಸಾಮ್ರಾಜ್ಯಶಾಹಿಯೊಬ್ಬನ ದಿಗ್ವಿಜಯದ ಕಥೆಯ ರೂಪ ಪಡೆದುಕೊಂಡು ಬಿಡುವುದರಲ್ಲಿ ಶ್ರೀರಾಮಾಯಣದರ್ಶನಂ ಕಾವ್ಯದ 'ದರ್ಶನ'ವಿದೆ"[೧೪] ಎನ್ನುತ್ತಾರೆ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ.

ಆಧುನಿಕತೆಯು ಹೇಗೆ ಪ್ರಾಚೀನ ವೃತ್ತಾಂತಗಳಿಗೆ ಹೊಸ ಅರ್ಥಛಾಯೆಗಳನ್ನು ಕಲ್ಪಿಸುತ್ತದೆ ಎಂಬುದು ಬೆರಗುಗೊಳಿಸುವ ಸಂಗತಿ. ಕುವೆಂಪು ಅವರ ಪ್ರಾತಿಭದರ್ಶನವು ಒಂದು ಪಾತ್ರವನ್ನು

ಅನೇಕ ನೆಲೆಯಲ್ಲಿ ಪೃಥಃಕರಿಸುತ್ತದೆ. ಹಾಗಾಗಿಯೇ ರಾಮಾಯಣದರ್ಶನಂ ಕಾವ್ಯ ಒಂದು ಸಂಕೀರ್ಣ ನೆಲೆಯ ಕಥಾ ಸಂವಿಧಾನವಾಗಿ ಪರಿಣಮಿಸುತ್ತದೆ.

ಈ ಮಾತು ಕುವೆಂಪು ಅವರ ರಾವಣನ ಪಾತ್ರದ ನಿರ್ಮಿತಿಗೂ ಅನ್ವಯಿಸುತ್ತದೆ. ಪೂರ್ವ ಕವಿಗಳ ಸ್ಮರಣೆಯ ಪಟ್ಟಿಯಲ್ಲಿ ನಾಗಚಂದ್ರನ ಪ್ರಸ್ತಾಪವಾಗಿರದಿದ್ದರೂ ಕುವೆಂಪು ಅವರ ರಾವಣನ ಪಾತ್ರ ನಿರ್ಮಿತಿಯಲ್ಲಿ ಮತ್ತು ಲಂಕೆ ಮತ್ತು ಕಿಷ್ಕಿಂಧೆಗಳು ವಿಭಿನ್ನ ನಿಲುವಿನ ಸಂಸ್ಕೃತಿಗಳು; ಎನ್ನುವ ನಿಲುವನ್ನು ವ್ಯಕ್ತಪಡಿಸುವಲ್ಲಿ ನಾಗಚಂದ್ರನ ಕಾವ್ಯದ ಪ್ರೇರಣೆಯನ್ನು ಕುವೆಂಪು ಪಡೆದಿದ್ದಾರೆ ಎನ್ನಬಹುದು. ಕುವೆಂಪು ಕಾವ್ಯದಲ್ಲಿ ರಾವಣ ಕ್ರಮ ಕ್ರಮವಾಗಿ ವಿಕಸಿತಗೊಳ್ಳುವ ಉದ್ಧಾರ ಪಥದಲ್ಲಿ ಕ್ರಮಿಸುವ ಮಹಾವ್ಯಕ್ತಿಯಂತೆ ಚಿತ್ರಿತನಾಗಿದ್ದಾನೆ. ಮೊದ ಮೊದಲು ಅವನಿಗೆ ಸೀತೆಯ ಬಗ್ಗೆ ವ್ಯಾಮೋಹವಿದ್ದಿತಾದರೂ ಯುದ್ಧದಲ್ಲಿ ತನ್ನ ಕೈ ಬೀಳಾಗ ತೊಡಗಿದಂತೆ ಅವನು ಛಲದ ಪ್ರತಿಮೂರ್ತಿಯಾಗುತ್ತಾನೆ. ರನ್ನನ ದುರ್ಯೋಧನನಂತೆ 'ಛಲಕಿರಿವೆನು' ಎನ್ನುವ ನಿಲುವಿಗೆ ಬರುತ್ತಾನೆ. ಅವನ ಮನಸ್ಸು ಪರಿವರ್ತಿತವಾಗುತ್ತದೆ. ಸೀತೆಯ ಪಾತಿವ್ರತ್ಯ ಅವನ ಮನಃಪರಿವರ್ತನೆಗೆ ಕಾರಣವಾಗುತ್ತದೆ. ಕೊನೆಗೆ ಯುದ್ಧದಲ್ಲಿ ರಾಮನನ್ನು ಗೆದ್ದು ಸೆರೆ ಹಿಡಿದು ಅವನನ್ನು ಸೀತೆಗೆ ತಂದು ಒಪ್ಪಿಸುತ್ತೇನೆ ಎಂಬ ನಿಲುವಿಗೆ ಬರುತ್ತಾನೆ. ಇದೆಲ್ಲಕ್ಕಿಂತ ಮುಖ್ಯವಾದ ಮತ್ತು ರಾಮಾಯಣದರ್ಶನಂ ಕಾವ್ಯದಲ್ಲಿ ಶಿಖರಪ್ರಾಯವಾದ ಒಂದು ನವೋನವ ಕಲ್ಪನೆಯೆಂದರೆ ರಾವಣನು ಕಾಣುವ ಅದ್ಭುತವಾದ ಕನಸು. ದಶಾನನ ಸ್ವಪ್ನಸಿದ್ಧಿಯೆನ್ನುವ ಸಂಚಿಕೆಯಲ್ಲಿ ರಾವಣನ ಮನಸ್ಸು ಸಂಪೂರ್ಣವಾಗಿ ಪರಿವರ್ತನೆಯಾದುದನ್ನು ಕವಿ ಪ್ರತಿಮಾತ್ಮಕವಾಗಿ ಸೂಚಿಸುತ್ತಾರೆ. ಮಹಾಕಾಳಿಯ ದೇವಾಲಯದಲ್ಲಿ ರಾವಣನಿಗೆ ಒಂದು ಸ್ವಪ್ನ ದರ್ಶನವಾಗುತ್ತದೆ. ಈ ಸ್ವಪ್ನದಲ್ಲಿ ರಾವಣನು ತಾಯಿ ದುರ್ಗೆಯನ್ನು, ರಾಮನ ಪರಾಜಯ ಮತ್ತು ಸೀತೆಯ ಕೈವಶಕ್ಕಾಗಿ ಬೇಡಿಕೊಳ್ಳುತ್ತಾನೆ. ತಾಯಿ ತಥಾಸ್ತು ಎಂದು ಹರಸುತ್ತಾಳೆ. ಸೀತೆ ತನಗೆ ಸೋಲುತ್ತಾಳೆಯೇ, ರಾಮನನ್ನು ಗೆಲ್ಲುತ್ತೇನೆಯೇ ಎಂದು ರಾವಣ ಆಶ್ಚರ್ಯಪಡುತ್ತಾನೆ. ಆಗ ದೇವಿ ಹೇಳುತ್ತಾಳೆ ಸೀತೆ ಆಲಂಗಿಪಳ್ ಚುಂಬಿಸಿ ಎದೆಗೊತ್ತುವಳ್; ರಣದಿ ರಾಮನ ಸೋಲಿಪೈ ಪುನರ್ಜನ್ಮದೊಳ್! ಆಗ ರಾವಣ ಒಂದು ಕಾಣಿಕೆಯನ್ನು ಕಾಣುತ್ತಾನೆ. ಪೀಠಾಗ್ರದಲ್ಲಿ ಒಂದು ದೊಡ್ಡ ಕುದುರೆ ಕಾಣುತ್ತದೆ. ಯಾವುದೋ ಒಂದು ಹಸ್ತ ಆ ಕುದುರೆಯ ರುಂಡವನ್ನು ತುಂಡರಿಸುತ್ತದೆ. ಮುಂಡದಿಂದ ರಕ್ತದ ಪ್ರವಾಹವೇ ಹರಿಯ ತೊಡಗುತ್ತದೆ. ಆ ಪ್ರವಾಹದಲ್ಲಿ ಒಂದು ದೋಣಿ ಕಾಣುತ್ತದೆ. ರಾವಣನು ದೋಣಿಯನ್ನು ಹತ್ತಿದಾಗ ದೋಣಿ

ಮಗುಚಿಕೊಂಡು ರಾವಣ ರಕ್ತದ ಹೊಳೆಯಲ್ಲಿ ಬೀಳುತ್ತಾನೆ. ರಾವಣ ಕುಂಭಕರ್ಣ ಇಬ್ಬರೂ ಈಗ ಚಿಕ್ಕ ಮಕ್ಕಳಾಗಿದ್ದಾರೆ. ಹೊಳೆಯನ್ನು ದಾಟಿ ದಂಡೆಗೆ ಬಂದರೆ ಅಲ್ಲಿ ಒಂದು ಋಷಿಯ ಆಶ್ರಮ, ರಾವಣ, ಕುಂಭಕರ್ಣ ಆಗ ತಾನೆ ಹುಟ್ಟಿದ ಮಕ್ಕಳಂತೆ ಅಳತೊಡಗುತ್ತಾರೆ. ಸೀತೆ ಎಲ್ಲಿಂದಲೋ ಅಲ್ಲಿಗೆ ಬರುತ್ತಾಳೆ. ಮಕ್ಕಳನ್ನು ಎತ್ತಿ ಮುದ್ದಾಡುತ್ತಾಳೆ. ಹಾಡಿ ಮೊಲೆಯೂಡುತ್ತಾಳೆ. ರಾವಣನ ಪುನರ್ಜನ್ಮದ ಕಥೆಯ ಮುನ್ಸೂಚನೆಯ ಪ್ರತಿಮೆಯೆಂದು ಇದನ್ನು ಗಮನಿಸಬಹುದು. ಕುವೆಂಪು ಅವರು ಸೂಚಿಸುವಂತೆ ಕುದುರೆಯು ಅದಮ್ಯವಾದ ಕಾಮದ ಸಂಕೇತವಾಗಿದೆ. ರಾವಣನ ಕಾಮವು ನಾಶವಾಗಿ, ಆತನ ಮನಸ್ಸು ಸೀತೆಯ ಬಗ್ಗೆ ಮಾತೃಭಾವವನ್ನು ಹೊಂದುತ್ತದೆ. ರಾವಣ ಕುಂಭಕರ್ಣರೇ ಲವಕುಶರಾಗಿ ಸೀತೆಯ ಪ್ರೀತಿಯನ್ನು ಪಡೆಯುತ್ತಾರೆ. ಇದೆಲ್ಲ ಪ್ರಜ್ಞೆಯ ಪಾತಳಿಯಲ್ಲಿ ನಡೆಯುವ ಕಥನವಾಗಿದೆ. ಆಧುನಿಕವಾದ ಪ್ರಜ್ಞಾಪ್ರವಾಹ ತಂತ್ರವನ್ನು ಕುವೆಂಪು ಅವರು ಇಲ್ಲಿ ಬಳಸಿಕೊಂಡಿದ್ದಾರೆ. ಹಿಂದೆ ಯಾವುದೇ ರಾಮಾಯಣದಲ್ಲೂ ಈ ಬಗೆಯ ಒಂದು ಕಥಾ ಕಲ್ಪನೆ ಕಂಡುಬಂದಿಲ್ಲ. ಆದರೆ ಈ ಕಥಾಕಲ್ಪನೆಯು ಕೇವಲ ಕಥೆಗಾಗಿ ಬಂದುದಲ್ಲ. ರಾವಣನ ಮನಃಪರಿವರ್ತನೆಯ ಪ್ರತಿಮಾತ್ಮಕ ಅಭಿವ್ಯಕ್ತಿಗಾಗಿ ಬಂದದ್ದು. ಹೀಗೆ ಕುವೆಂಪು ಅವರ ರಾಮಾಯಣದರ್ಶನಂ ಕಾವ್ಯದಲ್ಲಿ ಕವಿಯ ಪ್ರಾತಿಭಾದರ್ಶನವು ನಿತ್ಯ ನವೀನವು ಅರ್ಥಪೂರ್ಣವೂ ಆದ ಅನೇಕ ಅದ್ಭುತ ಕಥಾಂತರಗಳನ್ನು ಕಲ್ಪಿಸಿದೆ. ಕವಿಯ ದಾರ್ಶನಿಕ ಪ್ರಜ್ಞೆಯೇ ಈ ಕಥಾಂತರಗಳ ಮೂಲ ಚೋದಕ ಶಕ್ತಿ ಎನ್ನಬಹುದು.

**೪.೨ ಶ್ರೀರಾಮಪಟ್ಟಾಭಿಷೇಕ:–**

ಶ್ರೀರಾಮಪಟ್ಟಾಭಿಷೇಕವು ಕಾವ್ಯವು, ಮಾಸ್ತಿಯವರು ಹರೆಯದಲ್ಲಿ ಸಂಕಲ್ಪಿಸಿ, ಇಳಿವಯಸ್ಸಿನಲ್ಲಿ ಆರಂಭಿಸಿ, ಮುಪ್ಪಿನಲ್ಲಿ ಮಂಗಳಕ್ಕೆ ತಂದಿರುವ ಕಾವ್ಯ. ಈ ಸುದೀರ್ಘ ಕಾಲಾವಧಿಯಲ್ಲಿ ವಾಲ್ಮೀಕಿ ರಾಮಾಯಣದ ಕಥೆಯು ಮಾಸ್ತಿಯವರ ಮನಸ್ಸಿನಲ್ಲಿ ಮತ್ತೆ ಮತ್ತೆ ಮಥನಗೊಂಡು, ವಾಸ್ತವವಾಗಿ ರಾಮಾಯಣವು ಹೇಗೆ ನಡೆದಿರಬಹುದು ಎನ್ನುವ ವಾಸ್ತವವಾದದ ನೆಲೆಯನ್ನು ಆಧಾರವಾಗಿಟ್ಟುಕೊಂಡು ಪುನರ್‌ರೂಪಿತವಾಗಿದೆ ಎನ್ನಬಹುದು. ಮೂಲಕಥೆಯ ಈ ಪರಿಷ್ಕರಣದಲ್ಲಿ ಮಾಸ್ತಿಯವರ ವೈಚಾರಿಕ ಮನೋಧರ್ಮ, ಅನುಭವಪಕ್ವತೆ, ವಾಸ್ತವವಾದಿ ಧೋರಣೆಗಳು ಪ್ರಧಾನವಾಗಿ ಕೆಲಸ ಮಾಡಿದೆ ಎನ್ನಬಹುದು. ಮಾಸ್ತಿಯವರು ರಚಿಸಿದ ಆದಿಕವಿ ವಾಲ್ಮೀಕಿ ಎನ್ನುವ ವಿಮರ್ಶಾಕೃತಿಯು ಪಟ್ಟಾಭಿಷೇಕ ಕಾವ್ಯದ ರೂಪುರೇಷೆಗಳನ್ನು ಮೊದಲೇ ಗುರುತಿಸಿದೆ. ಆ ರೂಪರೇಷೆಗಳನ್ನೇ ಸ್ಥೂಲವಾದ ನಕ್ಷೆಯನ್ನಾಗಿ ಮಾಡಿಕೊಂಡು ರಾಮಕಥೆಗೆ

ಕಾವ್ಯಸಹಜವಾದ ಭಾವಕೋಶಗಳನ್ನು ಮಾಸ್ತಿಯವರು ನಿರ್ಮಿಸಿದ ಹಾಗೆ ತೋರುವುದು. ಕವಿ ವಾಲ್ಮೀಕಿಯ ರಾಮಾಯಣವು ಮಾಸ್ತಿಯವರಿಗೆ ಪಾರಾಯಣ ಗ್ರಂಥವಾಗಿದ್ದರೂ ಸಂಪ್ರದಾಯ ಜಡತೆಯಾಗಲಿ, ಪ್ರಶ್ನಾತೀತವಾದ ಸಾಂಪ್ರದಾಯಿಕ ಶ್ರದ್ಧೆಯಾಗಲಿ ಅವರಲ್ಲಿ ಕಂಡುಬರುವುದಿಲ್ಲ ಎನ್ನುವುದು ಆಶ್ಚರ್ಯವನ್ನುಂಟು ಮಾಡುತ್ತದೆ.

ವಾಲ್ಮೀಕಿ ಪ್ರಣೀತವಾದ ಶ್ರೀರಾಮಕಥೆಯನ್ನು ಮಾಸ್ತಿಯವರು ಒಂದು ಪೂರ್ವಾಗ್ರಹದ ನೆಲೆಯಲ್ಲೇ ಗ್ರಹಿಸಲು ತೊಡಗುತ್ತಾರೆ. ಆ ಗ್ರಹಿಕೆ ಏನೆಂದರೆ ವಾಲ್ಮೀಕಿಯು ತನ್ನ ಕಾವ್ಯವನ್ನು ರಚಿಸಿದಾಗ ಅದರ ಸ್ವರೂಪ ಇವತ್ತು ಇರುವಂತೆ ಇದ್ದಿರಲಾರದು ಎಂಬುದು. ವಾಲ್ಮೀಕಿಯ ನಂತರ ಅನೇಕರು ಕಾಲ ಕಾಲಕ್ಕೆ ಅನೇಕ ರೀತಿಯ ರಮ್ಯಾದ್ಭುತವಾದ ವಾಸ್ತವಾತೀತವಾದ ಪೌರಾಣಿಕ ನೆಲೆಯ ಪ್ರಕ್ಷೇಪ ಭಾಗವನ್ನು ತಮ್ಮ ತಮ್ಮ ಧಾರ್ಮಿಕನಂಬಿಕೆ, ಶ್ರದ್ಧಾಚಾರ, ಇವುಗಳ ಕಾರಣವಾಗಿ ಸೇರಿಸುತ್ತಾ ಹೋಗುತ್ತಾರೆ. ಹೀಗಾಗಿ ಆದಿಕವಿ ಪ್ರಣೀತ ಮೂಲರಾಮಾಯಣವೇ ವಿರೂಪಗೊಂಡಿದೆ. ಮೂಲ ರಾಮಾಯಣದ ಶುದ್ಧ ಪ್ರತಿಯೊಂದನ್ನು ನಂಬಲು ಸಾಧ್ಯವಾದ ಪವಾಡಗಳು, ಮತಾಚಾರದ ಆಶಯಗಳು, ಧಾರ್ಮಿಕನಿರೀಕ್ಷೆಗಳು ಅದ್ಭುತರಮ್ಯತೆಯ ಅಂಶಗಳು ಇವುಗಳ ಸಿಕ್ಕುಗಳಿಂದ ಬಿಡಿಸಿ ಬೇರ್ಪಡಿಸಬೇಕೆನ್ನುವ, ಆಧುನಿಕ ವಿಚಾರವಾದಿ ನಿಲುವಿನೊಂದಿಗೆ ಮಾಸ್ತಿಯವರು ಹೊರಡುತ್ತಾರೆ. ಈ ಬಗ್ಗೆ ಪಟ್ಟಾಭಿಷೇಕ ಕಾವ್ಯದ ಮುನ್ನುಡಿಯಲ್ಲಿ ಸ್ವತಃ ಮಾಸ್ತಿಯವರೇ ಪ್ರಸ್ತಾಪಿಸಿದ್ದಾರೆ. "ಈಗ ಬಳಕೆಯಲ್ಲಿರುವ "ವಾಲ್ಮೀಕಿ ರಾಮಾಯಣ" ಗ್ರಂಥದ ಅನೇಕ ಭಾಗ ವಾಲ್ಮೀಕಿ ಕೃತಿ ಅಲ್ಲವೆನ್ನುವುದು ಅದ್ಭುತಗಳನ್ನು, ಪವಾಡಗಳನ್ನು ನಂಬದೇ ಇರುವುದು; ಮಾನವ ವ್ಯವಹಾರದಲ್ಲಿ ದೇವತೆಗಳು ಪ್ರತ್ಯಕ್ಷ ಪ್ರವೇಶಿಸಿದರೆಂಬುದನ್ನು ಒಪ್ಪದೇ ಇರುವುದು. ಇದರ ಫಲವಾಗಿ ನಾನು ಕಥೆಯಲ್ಲಿ ಮಾಡಿರುವ ಮಾರ್ಪಾಟುಗಳನ್ನು, ಅವನ್ನು ಏಕೆ ಮಾಡಿದೆ ಎಂಬ ವಿಷಯವನ್ನು ಕಾವ್ಯದ ಕೊನೆಯಲ್ಲಿ ಟಿಪ್ಪಣಿಗಳು ಭಾಗದಲ್ಲಿ ಸೂಚಿಸಿದ್ದೇನೆ"[೧೫]

ಕುವೆಂಪು ಅವರ ಶ್ರೀರಾಮಾಯಣದರ್ಶನಂ ಕಾವ್ಯದಲ್ಲಿ, ವೀರಪ್ಪಮೊಯಿಲಿಯವರ ಶ್ರೀರಾಮಾಯಣ ಮಹಾನ್ವೇಷಣಂ ಕಾವ್ಯದಲ್ಲಿ, ಬೇರೆ ಬೇರೆ ರಾಮಾಯಣ ಸಂಪ್ರದಾಯಗಳಿಂದ ಪ್ರಭಾವಗೊಂಡು ಕಥೆಯಲ್ಲಿ ನಾನಾಬಗೆಯ ಮಾರ್ಪಾಡಾಗಿರುವುದನ್ನು ನಾವು ಗಮನಿಸಿದ್ದೇವೆ. ಆದರೆ ಮಾಸ್ತಿಯವರು ತಮ್ಮ ಕಾವ್ಯದಲ್ಲಿ ರಾಮಾಯಣದ ವೈದಿಕೇತರ ಪರಂಪರೆಗಳಿಂದ ಪ್ರೇರಣೆ

ಪಡೆಯುವುದಕ್ಕಿಂತ ಹೆಚ್ಚಾಗಿ ಮೂಲ ರಾಮಾಯಣದ ಕಥೆಯನ್ನೇ ಶುದ್ಧೀಕರಿಸಲು ಹೊರಟವರಾಗಿ ಕಾಣುತ್ತಾರೆ. ಕೇವಲ ವಾಸ್ತವಿಕ ನೆಲೆಯಲ್ಲೇ ವಾಲ್ಮೀಕಿಯು ರಾಮಾಯಣವನ್ನು ರಚಿಸಿದ್ದಾನೆಂಬುದೇ ಒಂದು ಪೂರ್ವಾಗ್ರಹದ ಗ್ರಹಿಕೆ. ಕವಿಗಳು ಅದ್ಭುತ ರಮ್ಯತೆಯನ್ನು, ಅವಾಸ್ತವ, ಅತಿವಾಸ್ತವ ಸಂಗತಿಗಳನ್ನು, ನೈಜತೆ, ಕಲ್ಪಕತೆಗಳನ್ನು ತಮ್ಮ ಕಾವ್ಯದಲ್ಲಿ ವಿಲಕ್ಷಣವಾದ ರೀತಿಯಲ್ಲಿ ಸಂಯೋಜಿಸುವುದನ್ನು, ಭಾರತೀಯ ಮತ್ತು ಹೊರದೇಶಗಳ ಕಾವ್ಯಪರಂಪರೆಯ ಸಂದರ್ಭಗಳಲ್ಲಿ ನಾವು ಗ್ರಹಿಸಿಯೇ ಇದ್ದೇವೆ. ಕಾವ್ಯದ ಮಾತು ಹಾಗಿರಲಿ, ಈಗ ಕಥೆ ಕಾದಂಬರಿಗಳಲ್ಲೂ ಅತಿವಾಸ್ತವತಾ ಮಾರ್ಗ (sur-realism) ಅತೀಂದ್ರಿಯ ವಾಸ್ತವತಾ ಮಾರ್ಗ (magical-Realism) ಮೊದಲಾದ ಸಿದ್ಧಾಂತಗಳು ರೂಢಿಗೆ ಬಂದಿವೆ. ಹೀಗಿರುವಾಗ ವಾಸ್ತವವಾಗಿ ಹೀಗೆ ನಡೆದಿರಬೇಕು ಎನ್ನುವುದನ್ನೇ ಮಾಸ್ತಿಯವರು ತಮ್ಮ ಕಾವ್ಯಸಿದ್ಧಾಂತದ ಮಾರ್ಗದರ್ಶಿ ಸೂತ್ರವಾಗಿ ಮಾಡಿಕೊಂಡಿದ್ದರಿಂದ, ಕಾವ್ಯದ ಅತೀಂದ್ರಿಯ ಜಿಗಿತಗಳಿಗೆ ಅವಕಾಶವಿಲ್ಲವಾಗಿದೆ. ಅಸಂಭಾವ್ಯತೆಯಿಂದ ಕಾವ್ಯಕ್ಕೆ ಒದಗುವ ಚೆಲುವು, ಲಂಘನಶಕ್ತಿ, ಪ್ರತಿಮಾ ಮತ್ತು ರೂಪಕ ನಿರ್ಮಾಣಗಳಿಗೆ ಮಾಸ್ತಿಯವರ ಬರವಣಿಗೆಯಲ್ಲಿ ಅವಕಾಶವಿಲ್ಲವಾಗಿದೆ. ಹಾಗಾಗಿ ಅವರ ಕಾವ್ಯದಲ್ಲಿ ಮಾರುತಿಯು ಸಮುದ್ರವನ್ನು ಹಾರದೆ ಸಮುದ್ರದಲ್ಲಿ ಈಜಿದಂತೆ ಅವರ ಕಾವ್ಯವು ಲಂಘನಸಾಮರ್ಥ್ಯವಿಲ್ಲದೆ ಮಣ್ಣಿನ ಪಾತಳಿಯಲ್ಲೇ ಸಂಚರಿಸುವಂತಾಗಿದೆ. ಇದರಿಂದ ರಾಮಾಯಣದ ಕಥೆಗೆ ಸ್ವಭಾವೋಕ್ತಿ ನೆಲೆಯ ಒಂದು ಹೊಸ ಚೌಕಟ್ಟು ದೊರಕಿದೆ ಎಂಬುದನ್ನು ನಾವು ಮಾನ್ಯ ಮಾಡಲೇಬೇಕು. ಶ್ರೀರಾಮನು ವಿಷ್ಣುವಿನ ಅವತಾರವೆಂಬುದನ್ನು ಮಾಸ್ತಿಯವರ ಕಾವ್ಯ ಮಾನ್ಯಮಾಡುವುದಿಲ್ಲ. ಆದರೆ ಅದರ ಮುಖ್ಯದರ್ಶನ ಶ್ರೀರಾಮ ಶ್ರೇಷ್ಠನಾದ್ದರಿಂದ ದೇವರಾದನು ಎಂಬುದು. ಈ ನಿಲುವಿನಿಂದಾಗಿ ರಾಮಾಯಣವನ್ನು ವಾಸ್ತವತಾ ನೆಲೆಯ ಐತಿಹ್ಯವಾಗಿ ಮಾಡುವುದಕ್ಕೆ ಮಾಸ್ತಿಯವರು ಹೊರಟಿದ್ದಾರೆ. ಹೀಗೆ ಮಾಡಿರುವುದರಿಂದ ಅವರ ಕಾವ್ಯ, ಕೆಲವು ಅಂಶಗಳನ್ನು ಕಳೆದುಕೊಂಡರೆ ಪರ್ಯಾಯವಾಗಿ, ಕೆಲವು ಅಂಶಗಳನ್ನು ಪಡೆಯುತ್ತವೆ ಎಂಬುದು ಅಷ್ಟೇ ಮುಖ್ಯವಾದ ಮಾತು. ತುಂಬ ಗಮನಾರ್ಹವಾದ ಸಂಗತಿಯೆಂದರೆ ದೈವಮಾನುಷೀ ಕಥೆಯಾಗಿದ್ದ ರಾಮಾಯಣ ಮಾಸ್ತಿಯವರ ಕಾವ್ಯದಲ್ಲಿ ಮನುಷ್ಯ ಮಾತ್ರರ ಕಥೆಯಾಗಿ ತನ್ನನ್ನು ಅರಳಿಸಿಕೊಳ್ಳುತ್ತದೆ. ಘನವಾದ ಮೌಲ್ಯಸಿದ್ಧಾಂತಗಳ ಅಚರಣೆಯಿಂದ ಒಬ್ಬ ಮನುಷ್ಯ ಹೇಗೆ ಪುರುಷೋತ್ತಮನಾಗುವುದು ಸಾಧ್ಯ ಎಂಬುದನ್ನು ಮಾಸ್ತಿಯವರ ಕಥನವು ಓದುಗರಿಗೆ ವೇದ್ಯಗೊಳಿಸುತ್ತದೆ. ಮಾಸ್ತಿಯವರ ಕಾವ್ಯದಲ್ಲಿ ಪ್ರಧಾನವಾಗಿ ಮೂರು ನಾಗರಿಕತೆಗಳು– ಅವುಗಳ ನಂಬಿಕೆ ಶ್ರದ್ಧೆಗಳು, ಆಚಾರ–ವಿಚಾರಗಳು, ನಡತೆ–ನಡಾವಳಿಗಳು ಸಮಾಜಶಾಸ್ತ್ರೀಯ

ದೃಷ್ಟಿಯ ಫಲ ಎನ್ನುವಂತೆ ಬಿಚ್ಚಿಕೊಳ್ಳುತ್ತಾ ಹೋಗುತ್ತವೆ. ಒಂದು ಅಯೋಧ್ಯೆಯ ಆರ್ಯಸಮಾಜ, ಇನ್ನೊಂದು ಕಿಷ್ಕಿಂಧೆಯ ವಾನರಸಮಾಜ, ಮೂರನೆಯದು ಲಂಕೆಯ ರಾಕ್ಷಸಸಮಾಜ. ಆದರೆ ಈ ಸಮಾಜವನ್ನು ಪ್ರತಿನಿಧಿಸುವ ವ್ಯಕ್ತಿಗಳೆಲ್ಲರೂ ಮೂಲತಃ ಮಾನವರೆ. ಮಾರುತಿ ಇಲ್ಲಿ ಕಪಿಯಲ್ಲ; ಜಟಾಯು ಪಕ್ಷಿಯಲ್ಲ; ಜಾಂಬವ ಕರಡಿಯೂ ಅಲ್ಲ. ಹಾಗೆ ಲಂಕೆಯಲ್ಲಿ ಬರುವ ರಾಕ್ಷಸರು ಕೂಡ ತಮ್ಮ ಭಿನ್ನ ನಡಾವಳಿಗಳಿಂದಾಗಿ, ಸಂಪ್ರದಾಯಗಳಿಂದಾಗಿ ಭಿನ್ನವಾಗಿ ಕಾಣುತ್ತಿದ್ದಾರೆ. ಇದು ಮಾಸ್ತಿಯವರ ನಿಲುವಾಗಿದೆ.

ಮಾಸ್ತಿಯವರು ಪಟ್ಟಾಭಿಷೇಕ ಕಾವ್ಯದಲ್ಲಿ ಮಾಡಿಕೊಳ್ಳುವ ಕಥಾಂತರಗಳು ವಿಶಿಷ್ಟವಾದ ಸಾಮಾಜಿಕ ಹಿನ್ನೆಲೆಯಲ್ಲಿ ಭಿನ್ನ ಭಿನ್ನ ಸಾಮಾಜಿಕರನ್ನು ಮನುಷ್ಯ ಮಾತ್ರವನ್ನಾಗಿಸಿ; ಅವರ ದೌರ್ಬಲ್ಯ, ಧಾರ್ಷ್ಟ್ಯ ಮತ್ತು ಉನ್ನತಿಗಳೊಂದಿಗೆ ಚಿತ್ರಿಸುವುದೇ ಆಗಿದೆ. ಹೀಗಾಗಿ ಮೂಲತಃ ಮಾಸ್ತಿಯವರ ಕಾವ್ಯ, ಮನುಷ್ಯರು ಘನತೆಯಿಂದ ದೈವತ್ವಕ್ಕೇರಬಹುದು. ಒಬ್ಬ ಮನುಷ್ಯ ರಾವಣನಂತೆ ಅಧಃಪತನ ಪಡೆಯಬಹುದು. ಅದೇ ಮನುಷ್ಯ ರಾಮನಂತೆ ಪುರುಷೋತ್ತಮನಾಗಿ ದೈವತ್ವವನ್ನೂ ಸಾಧಿಸಬಹುದು. ಮನುಷ್ಯನ ಮನೋಪಾತಳಿಯ ಈ ಬೀಸನ್ನು (Range) ಮಾಸ್ತಿಯವರ ಕಾವ್ಯ ನಮ್ಮ ಕಣ್ಣಮುಂದೆ ನಿಲ್ಲಿಸುತ್ತದೆ. ಮಾಸ್ತಿ ಮೂಲತಃ ಕನ್ನಡ ಸಾಹಿತ್ಯವು ಕಂಡ ಸರ್ವಶ್ರೇಷ್ಠ ಗದ್ಯಕಾರ ಮತ್ತು ಕಥಾಶಿಲ್ಪಿ. ಭಾಷೆಯನ್ನು ಸಹಜವಾಗಿ ಅಕೃತ್ರಿಮವಾಗಿ ಮತ್ತು ಆವೇಶರಹಿತವಾಗಿ ಉಪಯೋಗಿಸುವುದು ಮಾಸ್ತಿಯವರ ಕಾವ್ಯದಲ್ಲಿ ನಾವು ಕಾಣುವ ವಿಶಿಷ್ಟವಾದ ಗುಣ. ಗೋಪಾಲಕೃಷ್ಣ ಅಡಿಗರು ಹೇಳುವಂತೆ "ಸಜ್ಜನನೊಬ್ಬನ ತುಂಬು ಬದುಕಿನ ಕೊಂಬೆ ಕೊಂಬೆಗಳಲ್ಲೂ ತುಂಬಿ ಹಣ್ಣಾಗಿರುವ ರೀತಿಯ ಕೃತಿ ರಾಶಿ. ಇದು ಮಾಸ್ತಿ ಸಾಹಿತ್ಯ. ಮನಸ್ಸು ಮಾಗದೆ, ಸಮಸ್ಥಿತಿಯ ಕಲ್ಪನೆಯೂ ಇಲ್ಲದೆ ಈ ಕೃತಿಗಳನ್ನು ಮೆಚ್ಚುವುದು ಸುಲಭವಲ್ಲ. ಬೇಂದ್ರೆ, ಪುಟ್ಟಪ್ಪನವರ ಕವಿತೆಗಳಲ್ಲಿ ಕಾಣುವ ಆಧ್ಯಾತ್ಮಿಕ ಎನ್ನಬಹುದಾದ ದೃಷ್ಟಿ ಮಾಸ್ತಿಯವರದ್ದಲ್ಲ. ತನಗಿಂತ ಭಿನ್ನವಾದದ್ದರಲ್ಲಿ ತನ್ಮಯನಾಗುವ ಪ್ರವೃತ್ತಿಗಿಂತ ಹೆಚ್ಚಾಗಿ ನಾವು ಇವರ ಕವಿತೆಗಳಲ್ಲಿ ಕಾಣುವುದು ತನ್ನತನವನ್ನು ಚೆನ್ನಾಗಿ ಅರಿತು ಅದು ಉಳಿದವುಗಳ ಜೊತೆ ಹೇಗೆ ಸರಿಯಾಗಿ ಇರಲು ಸಾಧ್ಯ ಎಂದು ಚಿಂತನ ನಡೆಸುವ ಆಸಕ್ತಿ. ಇದರಿಂದ ಇವರ ಕಾವ್ಯ ತಕ್ಕಷ್ಟು ಆಳವಾದದ್ದಲ್ಲ ಎನ್ನಿಸುತ್ತದೆ. ಆದರೆ ಆ ಕಾರಣದಿಂದಲೇ ಇದು ಎಲ್ಲ ಮಿಥ್ಯಾ ಆಧ್ಯಾತ್ಮಿಕತೆಯಿಂದಲೂ ಭಾವಸಮಾಧಿಯ ಆಭಾಸದಿಂದಲೂ ಮುಕ್ತವಾಗಿದೆ. ಕೇವಲ ಮಾತುಗಳಲ್ಲಿ ಮಾತ್ರ ಹರಿದೋಡುವ ಆಧ್ಯಾತ್ಮಿಕತೆಯ ಸೋಗು ಇವರ ಕಾವ್ಯದಲ್ಲಿ ಎಲ್ಲೂ ಇಲ್ಲ. ತನ್ನ ಆಳಕ್ಕೆ ಮೀರಿದ್ದನ್ನು ತನ್ನ ತೆಕ್ಕೆಗೆ

ಸಿಕ್ಕದ್ದನ್ನೂ ಹಿಡಿಯಲು ಇಲ್ಲಿ ಹೋರಾಟವೇ ನಡೆಯುವುದಿಲ್ಲವಾಗಿ ಇವರ ಕವಿತೆ ತೆಳ್ಳಗೆ ಎನ್ನಿಸಿದರೂ ಕೃತಕ ಎನ್ನಿಸುವುದಿಲ್ಲ.

ಮಾಸ್ತಿಯವರ ಕವಿತೆ ತಣಿಸುವ ಕವಿತೆ. ಇದು ಬಹಳ ಆಳಕ್ಕೆ ಇಳಿದು ಮನಸ್ಸಿನ ಮೂಲವನ್ನು ಕೆದಕಿ ಬೆದಕಿ ನೋಡುವುದಿಲ್ಲ; ಪ್ರಜ್ಞೆಯ ಕೆಳಕ್ಕೆ ಇರುವ ದಾನವತ್ವ ಪಶುತ್ವಗಳಿಗೆ ಮುಖಾಮುಖಿ ಆಗುವುದಿಲ್ಲ. ಆದರೆ ಎಷ್ಟನ್ನು ಕೊಡಲು ಉದ್ದೇಶಿಸಿರುತ್ತದೋ ಅಷ್ಟನ್ನು ಮಾತ್ರ ಕೊಟ್ಟೇ ಕೊಡುತ್ತದೆ. ಅದು ಎಷ್ಟನ್ನು ನೀಡುತ್ತದೋ ಅಷ್ಟೂ ಮಹತ್ವದ್ದು, ಮರೆಯಬಾರದ್ದು. ಆದ ಕಾರಣ ಮಾಸ್ತಿಯವರ ಕಾವ್ಯಾಭ್ಯಾಸ ಮನಸ್ಸಿಗೆ ತಂಪನ್ನು ನೀಡುವುದಲ್ಲದೆ ನಮ್ಮ ಅರಕೆಗಳನೆಷ್ಟೊ ತುಂಬಲೂ ಸಮರ್ಥವಾಗಿದೆ."[೧೬]

ಹೆಚ್ಚು ಕಮ್ಮಿ ಇದೇ ರೀತಿಯ ಅಭಿಪ್ರಾಯವನ್ನು ಪ್ರೊ.ಎಲ್.ಎಸ್.ಶೇಷಗಿರಿರಾಯರು ವ್ಯಕ್ತಪಡಿಸಿದ್ದಾರೆ. "ಆಧುನಿಕ ಕನ್ನಡ ಸಾಹಿತ್ಯದ ನವೋದಯ ಯುಗವನ್ನು ರೊಮ್ಯಾಂಟಿಕ್ ಯುಗ ಎಂದು ಕರೆಯುವುದುಂಟು. 'ರೊಮ್ಯಾಂಟಿಸಿಸಂ' ಎನ್ನುವುದು ಬಹು ಎಚ್ಚರಿಕೆಯಿಂದ ಬಳಸಬೇಕಾದ ಶಬ್ದ. ಸಂಯಮ, ಸಮತೋಲನ, ಮನುಷ್ಯ ಜೀವನದಲ್ಲಿ ಒಂದು ವಿನ್ಯಾಸದ ಅರಿವು ಇವೆಲ್ಲ ಮಾಸ್ತಿಯವರನ್ನು ಕ್ಲಾಸಿಕಲ್ ಕವಿಯನ್ನಾಗಿ ಮಾಡುತ್ತವೆ. ರೊಮ್ಯಾಂಟಿಕ್ ಕಾವ್ಯದಲ್ಲಿ ನಾವು ನಿರೀಕ್ಷಿಸುವ ಉದ್ವೇಗ, ಭಾವತೀವ್ರತೆ ಅದರಲಿಲ್ಲ. ಅವರ ಅತ್ಯುತ್ತಮ ರಚನೆಗಳನ್ನು "ಕಾವ್ಯ"ವೆಂದು ಕರೆಯಲಾಗುವುದಿಲ್ಲ ಎನ್ನುವುದು ಅನ್ಯಾಯದ ಮಾತಾದೀತು. ಆದರೆ ಅವರ ಕಾವ್ಯ ಒಂದು ಮಿತವಾದ ಓದುವರ್ಗಕ್ಕೆ ಮೆಚ್ಚಿಗೆಯಾಗುತ್ತದೆ ಎನ್ನುವುದನ್ನು ಗುರುತಿಸಬೇಕು. ಇದು ಸರಳವಾದ ಕಾವ್ಯ. ಒಂದು ವಿಶಿಷ್ಟ ಜಗತ್ತಿಗೆ ನಮ್ಮನ್ನು ಕೊಂಡೊಯ್ದು ಹೊಸದರ್ಶನ ಹೊಳೆಯುವಂತೆ ಮಾಡುವ ಕಾವ್ಯವಲ್ಲ. ಬಹುಸೂಕ್ಷ್ಮವಾದ ಅಥವಾ ಸಂಕೀರ್ಣವಾದ ಅನುಭವವನ್ನು ಭಾಷೆಯಲ್ಲಿ ಹೆಣೆದಿಡಲು ಸೆಣಸುವ, ಈ ಸೆಣಸಾಟದಲ್ಲಿ ಕಲ್ಪನೆಯ ಉದ್ದೀಪನೆಯಿಂದ ಹೊಸತಾದ, ನಮ್ಮನ್ನು ರೋಮಾಂಚನಗೊಳಿಸುವ ಪ್ರತಿಮೆ, ಸಂಕೇತಗಳನ್ನು ಸೃಷ್ಟಿಸುತ್ತಾ ಸಾಗುವ ಕಾವ್ಯವಲ್ಲ"[೧೭]

ಪ್ರೊ॥ಶೇಷಗಿರಿರಾಯರ ಮಾತಿನಲ್ಲಿ ಬಹಳ ಮುಖ್ಯವಾದ ಒಂದು ವಿಚಾರ ಸ್ಥಾಪಿತವಾಗಿದೆ. ಅದೇಂದರೆ ಮಾಸ್ತಿಯವರ ಸಾಹಿತ್ಯ ನಮ್ಮೆದುರಿಗೆ ಒಂದು ವಿಶಿಷ್ಟ ಜಗತ್ತನ್ನು ತೆರೆಯುವುದಿಲ್ಲ

ಎನ್ನುವುದು. ಈ ಮಾತು ಒಪ್ಪತಕ್ಕದ್ದೆ. ಮಾಸ್ತಿಯವರ ಸಾಹಿತ್ಯವು ಸೃಷ್ಟಿಸುವುದು ನಮಗೆ ಪರಿಚಿತವಾಗಿರುವ ಜಗತ್ತನ್ನೇ. ಅದು ಸಾಮಾಜಿಕ ವಸ್ತುವಾಗಲೀ, ಪೌರಾಣಿಕ ವಸ್ತುವಾಗಲಿ, ಐತಿಹಾಸಿಕ ವಸ್ತುವಾಗಲಿ, ನಾವು ಕಂಡ ಜಗತ್ತೇ ಅಲ್ಲಿ ಕಾಣುವುದು. ಆದರೆ ಮಾಸ್ತಿಯವರ ಸಾಹಿತ್ಯದ ಘನತೆಯಿರುವುದು; ಆ ಪರಿಚಿತ ಜಗತ್ತಿನಲ್ಲೇ, ಆಪರಿಚಿತವಾದ ಭಾವಸೂಕ್ಷ್ಮಗಳನ್ನು ತೆರೆಯುವುದರಲ್ಲಿ, ಮಾಸ್ತಿ ತಾವು ತುಂಬಾ ಮೆಚ್ಚುವ ಕ್ಯಾಂಟರ್‌ಬರಿಟೇಲ್ಸ್‌ನ ಛಾಸರನನ್ನು ಜೀವನ ವಿಜ್ಞಾನಿ ಎಂದು ಗುರುತಿಸಿ ಗೌರವಿಸುತ್ತಾರೆ. ಈ ಜೀವನ ವಿಜ್ಞಾನಿ ಎನ್ನುವ ಮಾತನ್ನು ನಾವು ಮಾಸ್ತಿಯವರಿಗೂ ಅನ್ವಯಿಸಿ ಹೇಳಬಹುದು. ಅನುಭವಪಕ್ವತೆ, ಬದುಕಿನ ಆಳವಾದ ತಿಳುವಳಿಕೆ ಮತ್ತು ಪ್ರಸನ್ನಚಿತ್ತಗಳಿಂದ ಮಾಸ್ತಿ ಸೃಷ್ಟಿಸುವ ಸಾಹಿತ್ಯ ಜಗತ್ತು, ಬದುಕಿನ ಬಗ್ಗೆ ನಮಗಿರುವ ಪ್ರೀತಿಯನ್ನು ನಂಬಿಕೆಯನ್ನು ಹೆಚ್ಚಿಸುವಂತದ್ದು. 'Ripeness is all' ಎಂಬ ಷೇಕ್ಸ್‌ಪಿಯರ್‌ನ ಮಾತನ್ನು ನಾವು ಅನ್ವಯಿಸಬಹುದಾದರೆ ಅದಕ್ಕೆ ಎಲ್ಲ ರೀತಿಯಲ್ಲೂ ಅರ್ಹರಾದ ಲೇಖಕರು ಮಾಸ್ತಿಯವರು.

ಮಾಸ್ತಿಯವರ ಪಟ್ಟಾಭಿಷೇಕ ಕಾವ್ಯದಲ್ಲಿ ಪವಾಡ ಸದೃಶವಾದ ಎಲ್ಲ ಘಟನೆಗಳನ್ನು ಬದಿಗಿಡಲಾಗಿದೆ. ದೈವವು ನೇರವಾಗಿ ಈ ಮನುಷ್ಯ ಕಥೆಯಲ್ಲಿ ಪ್ರವೇಶಿಸುವುದನ್ನು ಅವರು ಮಾನ್ಯ ಮಾಡುವುದಿಲ್ಲ. ಆಂಜನೇಯನು ಸಮುದ್ರವನ್ನು ಹಾರಿದನೆಂಬುದಾಗಲಿ, ಶ್ರೀರಾಮನು ಇಂದ್ರನು ಕಳುಹಿಸಿದ ವಿಮಾನದಲ್ಲಿ ಕುಳಿತು ರಾವಣನೊಂದಿಗೆ ಯುದ್ಧ ಮಾಡಿದನೆನ್ನುವುದಾಗಲಿ, ಸೀತಾರಾಮ ಲಕ್ಷ್ಮಣರು ಪುಷ್ಪಕವಿಮಾನದಲ್ಲಿ ಅಯೋಧ್ಯೆಗೆ ಹಿಂತಿರುಗಿದರು ಎಂಬುದನ್ನಾಗಲಿ ಮಾಸ್ತಿಯವರ ವಾಸ್ತವವಾದದ ಬರವಣಿಗೆ ಮಾನ್ಯಮಾಡಲಾರದು. ಆಂಜನೇಯನು ಸಮುದ್ರದಲ್ಲಿ ಈಜಿಕೊಂಡು ಲಂಕೆಯನ್ನು ಸೇರುತ್ತಾನೆ. ರಾಮನು ನೆಲದ ಮೇಲೆ ನಿಂತೇ ರಾವಣನೊಂದಿಗೆ ಯುದ್ಧ ಮಾಡುತ್ತಾನೆ. ಲಂಕೆಯಿಂದ ರಾಮಾದಿಗಳು ರಥಗಳಲ್ಲಿ ಕುಳಿತು ಅಯೋಧ್ಯೆಗೆ ಹಿಂದಿರುಗುತ್ತಾರೆ. ಸೀತೆಯು ಬೆಂಕಿಯ ಕುಂಡದಲ್ಲಿ ಹಾಯುತ್ತಾಳೆ. ಅಗ್ನಿಪ್ರವೇಶ ಮಾಡುವುದಿಲ್ಲ. ಹೀಗೆ ರಮ್ಯಾದ್ಭುತ ಸಂಗತಿಗಳೆಲ್ಲವನ್ನೂ ಬಹಿಷ್ಕರಿಸಿ ರಾಮಕಥೆಯನ್ನು ಮಾನುಷನೆಲೆಯಲ್ಲಿ, ವಾಸ್ತವತಾ ಮಾರ್ಗದಲ್ಲಿ, ಸ್ವಭಾವೋಕ್ತಿಯ ಸಹಜ ನುಡಿಯಲ್ಲಿ ಮಾಸ್ತಿಯವರು ಪಟ್ಟಾಭಿಷೇಕ ಕಾವ್ಯದಲ್ಲಿ ವ್ಯಕ್ತ ಪಡಿಸಿದ್ದಾರೆ. ಪಟ್ಟಾಭಿಷೇಕದ ಕಥೆಯಾದರೂ ಕಾಲಾನುಕ್ರಮಣಿಕೆಯಲ್ಲಿ (chronological) ನಡೆಯುವಂತಹದಲ್ಲ. ಸಿಂಹಾವಲೋಕನ ತಂತ್ರವನ್ನು ಮಾಸ್ತಿ ಅಳವಡಿಸಿಕೊಂಡಿದ್ದಾರೆ. (Retrospective narration) ಅಂದರೆ ಸುಮಂತ್ರ, ಹನುಮಂತ, ಗುಹಾ, ತಾರೆ, ಅನಿಲ ಮೊದಲಾದವರು ಹಿಂದಿನ ಕಥೆಯನ್ನು ಸ್ಮರಣತಂತ್ರದ ಮೂಲಕ

ನಿರೂಪಿಸುತ್ತಾ ಹೋಗುತ್ತಾರೆ. ಈ ತಂತ್ರವು ಕಾವ್ಯಕ್ಕೆ ಒಂದು ಮಿತಿಯನ್ನು ಕಲ್ಪಿಸಿದೆ ಎಂಬುದು ಪ್ರೊ.ಎಲ್.ಎಸ್.ಶೇಷಗಿರಿರಾಯರ ಅಭಿಪ್ರಾಯ. "ಕಾವ್ಯದಲ್ಲಿ ನಮ್ಮ ಕಣ್ಣೆದುರಿಗೆ ನಡೆಯುವುದು ರಾಮನ ಆಗಮನ ಮತ್ತು ಪಟ್ಟಾಭಿಷೇಕ. ಉಳಿದೆಲ್ಲ ಘಟನೆಗಳು ಹಿಂದೆ ನಡೆದುಹೋದವು. ಆದುದರಿಂದ ವೃತ್ತಾಂತ ಸಾಮೀಪ್ಯವನ್ನೂ ಕಾವನ್ನೂ ಕಳೆದುಕೊಳ್ಳುತ್ತದೆ. ಅಲ್ಲದೆ ರಾಮಾಯಣದ Range of Emotions ಅಥವಾ ಭಾವಗಳ ವಿಶಾಲವ್ಯಾಪ್ತಿಯನ್ನು ಕಾವ್ಯಬಳಸಿಕೊಳ್ಳಲು ಸಾಧ್ಯವಾಗಿಲ್ಲ. (ರಾವಣನ ಸಾವಿನ ನಂತರ ಮಂಡೋದರಿಯ ಶೋಕ ಇಂಥಹ ಒಂದು ಸಂದರ್ಭ) ಕೆಲವೆಡೆಗಳಲ್ಲಿ ಕಾವ್ಯದ ಭಾಷಾಸಂಪತ್ತು, ಪ್ರತಿಮೆಗಳ ಸಂಪತ್ತು, ವಸ್ತುವಿನ ಅಗತ್ಯಕ್ಕೆ ಸಮನಾಗಿಲ್ಲ. ರಾಮ ರಾವಣರ ಯುದ್ಧ, ಶ್ರೀರಾಮಪಟ್ಟಾಭಿಷೇಕ ಇಂತಹ ಘಟನೆಗಳು."[೧೮]

ಮಾಸ್ತಿಯವರ ವಾಸ್ತವತಾವಾದದ ಧೋರಣೆಯನ್ನು ಮೆಚ್ಚುವ ವಿಮರ್ಶೆಯು ನಮ್ಮ ಕಣ್ಣಮುಂದೆ ಇದೆ. ಡಾ.ಸಿ.ಪಿ. ಸಿದ್ಧಾಶ್ರಮ ಅವರು ಹೇಳುವಂತೆ "ನಾವು ರಾಮನನ್ನು ದೇವರೆಂದು ಸ್ವೀಕರಿಸಿದಾಗ ಯಾವುದೂ ಅಸಾಧ್ಯ, ಅಸಂಭವವೆಂದು ತೋರದೆಹೋಗುತ್ತದೆ; ಏಕೆಂದರೆ ದೇವರಿಗೆ ಅಸಾಧ್ಯವೆಂಬುದು ಯಾವುದಿದೆ? ಎಂಬ ಪ್ರಶ್ನೆಗೆ ಉತ್ತರ ಹೇಳುವುದು ನಮಗೆ ಅಷ್ಟು ಸುಲಭದ ಕೆಲಸವಲ್ಲ. ನಮ್ಮ ಭಾರತೀಯ ಜನತೆ ಸಾವಿರಾರು ವರ್ಷಗಳಿಂದ ರಾಮಾಯಣವನ್ನು ಈ ಭಾವನೆಯಿಂದಲೇ ಕಂಡು, ರಾಮನನ್ನು ಭಕ್ತಿಗೌರವಗಳಿಂದ ಪೂಜಿಸಿದೆ; ಅವರ ಪ್ರಕಾರ ರಾಮ ಒಬ್ಬ ಅವತಾರಪುರುಷ. ರಾಮಾಯಣದಲ್ಲಿನ ದುಃಖ, ಭಯಗಳ ಸನ್ನಿವೇಶಗಳು ಅದ್ಭುತ ಕುತೂಹಲಕಾರಿ ಸಂದರ್ಭಗಳು, ಪರಮಾತ್ಮನ ಲೀಲೆ ಎಂಬ ನಂಬಿಕೆಗೆ ಈಡಾಗಿವೆ. ಆದರೆ ರಾಮಾಯಣವನ್ನು ಕೇವಲ ಒಂದು ಇತಿಹಾಸವೆಂದು ಬಗೆದಾಗ, ರಾಮನನ್ನು ಒಬ್ಬ ಶ್ರೇಷ್ಠಮಟ್ಟದ ಮಾನವ ಎಂದು ತಿಳಿದಾಗ ರಾಮಾಯಣದ ಅದ್ಭುತ ಪವಾಡಗಳನ್ನು, ರಾಮ ಅವತಾರ ಪುರುಷ ಎಂಬ ನಂಬಿಕೆಯನ್ನು ಒಪ್ಪುವುದಕ್ಕೆ ಸಾಧ್ಯವಿಲ್ಲ".[೧೯] ಮಾಸ್ತಿಯವರು ತಮ್ಮ ಶ್ರೀರಾಮಪಟ್ಟಾಭಿಷೇಕ ಕಾವ್ಯದಲ್ಲಿ ಅದ್ಭುತ ಪವಾಡಗಳನ್ನು ತ್ಯಜಿಸಿ ರಾಮನು ಅವತಾರಪುರುಷ, ದೇವರು ಎನ್ನುವ ಅಂಶವನ್ನು ಬಿಟ್ಟು, ರಾಮನು ತನ್ನ ಉತ್ತಮ ನಡವಳಿಕೆಯಿಂದ ಅಂತಃಸತ್ವದಿಂದ ದೇವಮಾನವನಾದ ಎಂದು ಬದಲಿಸಿ ರಾಮಾಯಣದ ಇಡೀ ಕಥೆಯನ್ನು ವಾಸ್ತವದ ನೆಲೆಗಟ್ಟಿನಲ್ಲಿ ಪುನರ್ ರಚಿಸಿದ್ದಾರೆ.

ಒಂದು ಕಾವ್ಯವು ಅದ್ಭುತ ರಮ್ಯಜಗತ್ತನ್ನು ಒಳಗೊಳ್ಳುವುದರಿಂದ ಮಾತ್ರ ಶ್ರೇಷ್ಠವಾಗುವುದೆಂದು ಹೇಳಲು ಬರುವುದಿಲ್ಲ. ಹಾಗೆಯೇ ವಾಸ್ತವತಾ ಮಾರ್ಗವನ್ನು ಅನುಸರಿಸಿದ ಮಾತ್ರದಿಂದ ಕಾವ್ಯ ತನ್ನ ಘನತೆಯನ್ನು ಕಳೆದುಕೊಳ್ಳಬೇಕಾದ್ದು ಇಲ್ಲ. ಒಂದು ಕಾವ್ಯ ಶ್ರೇಷ್ಠವಾಗುವುದು ಅದು ನಿರ್ಮಿಸುವ ಅನುಭವ ಜಗತ್ತಿನ ವಿಸ್ತಾರ ಮತ್ತು ಸೂಕ್ಷ್ಮತೆಯಿಂದ. ಈ ನೆಲೆಯಿಂದ ನೋಡಿದಾಗ ಮಾಸ್ತಿಯವರ ಶ್ರೀರಾಮಪಟ್ಟಾಭಿಷೇಕ ಕಾವ್ಯ ತನ್ನ ಅನುಭವಪಕ್ವತೆ ಮತ್ತು ವೈಶಾಲ್ಯಗಳಿಂದ, ಮನುಷ್ಯನ ಸಾಧ್ಯತೆಗಳನ್ನು ಕೀರ್ತಿಸುವುದರಿಂದ ಕನ್ನಡ ಸಾಹಿತ್ಯ ಸಂದರ್ಭದ ಒಂದು ಮಹತ್ವದ ಕೃತಿಯೆಂದು ಅದನ್ನು ನಿಸ್ಸಂಶಯವಾಗಿ ಪರಿಗಣಿಸಬಹುದಾಗಿದೆ. ಕುವೆಂಪುರವರ ಶ್ರೀರಾಮಾಯಣದರ್ಶನಂ ಕಾವ್ಯಕ್ಕಿಂತ ತುಂಬ ಭಿನ್ನವಾದ ನೆಲೆಯಲ್ಲಿ ನಿಲ್ಲುವ ಮಾಸ್ತಿಯವರ ಪಟ್ಟಾಭಿಷೇಕ ಕಾವ್ಯ, ಈ ವೈದೃಶ್ಯದಿಂದಲೇ ಒಂದು ಮೌಲಿಕತೆಯನ್ನು ಪಡೆಯುತ್ತದೆ ಎಂಬುದು ಹೇಳಲೇಬೇಕಾದ ಮಾತು.

**೪.೩ ಶ್ರೀರಾಮಾಯಣ ಮಹಾನ್ವೇಷಣಂ:-**

ಶ್ರೀ.ಎಂ.ವೀರಪ್ಪಮೊಯಿಲಿಯವರು ಕರ್ನಾಟಕ ಕಂಡ ಮಹತ್ವದ ಸಮಾಜವಾದಿ ಚಿಂತಕರು. ಮೌಲ್ಯಾಧಾರಿತ ರಾಜಕಾರಣದಲ್ಲಿ ನಿಷ್ಠೆಯುಳ್ಳ ಕ್ರಿಯಾಶೀಲ ರಾಜಕಾರಣಿ. ಜೊತೆಗೆ ಮೊದಲಿನಿಂದಲೂ ಕಾವ್ಯ, ಸಾಹಿತ್ಯಗಳಲ್ಲಿ ತೀವ್ರವಾದ ಆಸಕ್ತಿಯುಳ್ಳ ಸದಭಿರುಚಿಯ ಕಾವ್ಯರಸಿಕರು. ಮೊಯಿಲಿಯವರು ತಮ್ಮ ಬಿಡುವಿಲ್ಲದ ರಾಜಕಾರಣದ ನಡುವೆಯೂ ಕಾವ್ಯರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಬಂದವರು. ಅವರ ಇತ್ತೀಚಿನ ಮಹತ್ವದ ರಚನೆ ಶ್ರೀರಾಮಾಯಣ ಮಹಾನ್ವೇಷಣಂ ಕಾವ್ಯ. ಹೊಸಗನ್ನಡದಲ್ಲಿ ಮೈದಾಳಿದ ರಾಮಾಯಣದ ಕಥಾವಸ್ತುವುಳ್ಳ ಮೂರನೆಯ ಮಹತ್ವದ ಕೃತಿ. "ಮೊಯಿಲಿಯವರು ಪ್ರಾಚೀನ ಮಹಾಕಾವ್ಯಗಳ ಲಾಕ್ಷಣಿಕ ಚೌಕಟ್ಟಿನ ಮಿತಿಗಳನ್ನು ವಿಸ್ತರಿಸುವ ಪ್ರಯತ್ನವನ್ನು ತಮ್ಮ ಮಹಾನ್ವೇಷಣೆಯಲ್ಲಿ ದಿಟ್ಟತನದಿಂದ ಮಾಡಿದವರು. ತಮ್ಮ ಮಹಾಕಾವ್ಯದ ವಸ್ತು ರಾಮಾಯಣದ್ದಾದರೂ ಅದರಲ್ಲಿ ಸಮಕಾಲೀನತೆಯನ್ನು ತರಲು ಅವರಿಗೆ ಪ್ರಾಚೀನ ಕಥಾವಸ್ತು ಅಡ್ಡಿಯಾಗಿಲ್ಲ. ದಶರಥ, ರಾಮ, ಲಕ್ಷ್ಮಣ, ಸೀತೆ, ಊರ್ಮಿಳಾ, ರುಮೆ, ಶರಭಂಗಮುನಿ, ಹನುಮಂತ ಇವೇ ಮೊದಲಾದ ಪಾತ್ರಗಳ ಮೂಲಕ ತಮ್ಮ ಸಮಕಾಲೀನ ಆಶಯಗಳನ್ನು ಅಭಿವ್ಯಕ್ತಿಸುವ ಅವಕಾಶ ಮೊಯಿಲಿಯವರಿಗೆ ಅಪ್ರಯತ್ನವಾಗಿ ದೊರೆತಿದೆ. ವಸ್ತು ಹಳೆಯದಾದರೂ ಅಲ್ಲಿನ ಅನೇಕ ಸಂದರ್ಭ ಸನ್ನಿವೇಶಗಳು ಕಾಲದ ಪಕ್ವವಿವೇಚನೆಯ ಹಿನ್ನೆಲೆಯಲ್ಲಿ ಹೊಸ ಅರ್ಥ ಪರಂಪರೆಗಳನ್ನು ಹೊಮ್ಮಿಸಬಹುದಾಗಿದೆ. ಸಂಪ್ರದಾಯ ನಿಷ್ಠ ಮನಸ್ಸು ಹಾಗೂ ಜ್ಞಾನ ವಿಜ್ಞಾನಗಳಿಂದ ಉದ್ದೀಪ್ತವಾದ

ಮನಸ್ಸು ಚಿಂತಿಸುವ ಭಿನ್ನ ನೆಲೆಗಳನ್ನು ಮೊಯಿಲಿಯವರು ತಮ್ಮ ಅನ್ವೇಷಣೆಯಲ್ಲಿ ನಿಖರವಾಗಿ ಗುರುತಿಸುತ್ತಾ ಸಾಗಿರುವರು. ಹೀಗಾಗಿ ಆಧುನಿಕ ಯುಗದ ಅಗತ್ಯಗಳಿಗೆ ಮಹಾಕಾವ್ಯ ತನ್ನನ್ನು ತೆರೆದುಕೊಂಡಿತು"[೨೦] ಸ್ವತಃ ಮೊಯಿಲಿಯವರು ತಮ್ಮ ಕಾವ್ಯದಲ್ಲಿ "ಶ್ರೀರಾಮಾಯಣದ ಲೋಕಧ್ವನಿ ನನ್ನ ಒಳಧ್ವನಿಯಿಂದ ಹೊರಹೊಮ್ಮಿದೆ. ನನ್ನ ಕಾವ್ಯ ಇದರ ಒಡಲ ಸತ್ಯದ ಅನ್ವೇಷಣೆಗೆ ಮಾಡಿದ ಪ್ರಯೋಗ ಎನ್ನುತ್ತಾರೆ"[೨೧]ಎಂದರೆ ಶ್ರೀರಾಮಾಯಣದ ಲೋಕಧ್ವನಿಯನ್ನು ಅನ್ವೇಷಿಸುವುದೇ ಮೊಯಿಲಿಯವರ ಕಾವ್ಯೋದ್ದೇಶವಾಗಿದೆ. ಹಾಗಾಗಿ ಮೊಯಿಲಿಯವರ ಕಾವ್ಯ ಸಮಾಜಮುಖಿ ನೆಲೆಯ ಕಾವ್ಯವಾಗಿದೆ. ಒಂದು ಸಮಾಜದ ಸ್ಥಿತಿಗತಿ ಮತ್ತು ಒಳಮಿಡಿತಗಳನ್ನು ರಾಮಾಯಣದ ಕಥಾವಸ್ತುವಿನ ಮೂಲಕ ಪುನಾರಚಿಸುವ ಯತ್ನವನ್ನು ಮೊಯಿಲಿಯವರು ಕೈಗೊಂಡಿದ್ದಾರೆ. ಅನ್ವೇಷಣಾ ಕಾವ್ಯಕ್ಕೆ ವಾಲ್ಮೀಕಿಯ ರಾಮಾಯಣವೇ ಮೂಲಕಥಾ ಭಿತ್ತಿಯನ್ನು ಒದಗಿಸಿದೆ. ಆದರೆ ಮೂಲಕಥಾಭಿತ್ತಿಯನ್ನು ಲೋಕಧ್ವನಿಯ ಶೋಧನೆಗಾಗಿ ಪುನರ್ಯೋಜಿಸುವುದು ಕವಿಯ ಉದ್ದೇಶವಾಗಿದೆ. ಶ್ರೀರಾಮಾಯಣದ ಲೋಕಧ್ವನಿಯನ್ನು ನನ್ನ ಒಳಧ್ವನಿಯಿಂದ ಹೊರಹೊಮ್ಮಿಸಿದ್ದೇನೆ ಎನ್ನುವಾಗ ಸಮಷ್ಟಿ ಮತ್ತು ವ್ಯಷ್ಟಿಯ ಆಂತರಂಗಿಕ ಸಂಬಂಧವನ್ನು ಮೊಯಿಲಿಯವರ ಮಾತು ಧ್ವನಿಸುತ್ತಿದೆ. ಒಂದು ಪರಂಪರೆಯ ಪ್ರತಿನಿಧಿಯಾದರೆ ಇನ್ನೊಂದು ಆಧುನಿಕತೆಯ ಪ್ರತಿನಿಧಿ. ಉದ್ದಕ್ಕೂ ಇವೆರಡರ ನಡುವೆ ನಡೆಯುವ ಸಂಘರ್ಷವೇ ಅನ್ವೇಷಣೆಯ ಕಾವ್ಯಶಿಲ್ಪವನ್ನು ನಿರ್ಮಿಸಿದೆ ಎನ್ನಬಹುದು.

ವಾಲ್ಮೀಕಿಯ ರಾಮಾಯಣವೇ ಮಾತೃಕೆ ಎಂಬುದನ್ನು ಸ್ವತಃ ಕವಿಯೇ ಹೀಗೆ ಸ್ಪಷ್ಟಪಡಿಸಿದ್ದಾರೆ.

**"ವಾಲ್ಮೀಕಿ ಗಿರಿಯೆಂಬ ರಮ್ಯ ಗಂಗೋತ್ರಿಯಲಿ**
**ಉದಿಸಿತೀ ರಸಭರಿತ ಕಾವ್ಯ ಸಂಪದ ಗಂಗೆ**
**ಸಲೀಲ ಸರಣಿಯಲಿ ಓತಪ್ರೋತವಾಗಿ ಸಾಗಿ"[೨೨]**

ಗಂಗೋತ್ರಿಯ ಈ ಪ್ರತಿಮೆ ಕವಿಯ ಕಾವ್ಯೋದ್ದೇಶಕ್ಕೆ ತಕ್ಕುದ್ದಾಗಿದೆ. ಕವಿ ವಾಲ್ಮೀಕಿಯ ರಸಭರಿತ ಕಾವ್ಯಗಂಗೆಯನ್ನು ಪ್ರಜಾಸಮುದಾಯದ ಉಪಯೋಗಕ್ಕೆ ಎಂಬಂತೆ ಬಯಲಿಗೆ ಹಾಯಿಸಿದ್ದಾರೆ. ಮೂಲ ಕಾವ್ಯದ ನಾಯಕ ಪ್ರಜಾಭಿರಾಮನಾದ ರಾಮಚಂದ್ರ. ಆದರೆ ಮೊಯಿಲಿಯವರ ಕಥಾನಾಯಕ ಲಕ್ಷ್ಮಣ. ಕವಿಯ ಪಾಲಿಗೆ ಲಕ್ಷ್ಮಣನು ನವಮನ್ವಂತರದ ಹೊಸ ವೈಚಾರಿಕತೆಯ ಧ್ವನಿಯಾಗಿದ್ದಾನೆ. ಶೋಷಣೆಯ ವಿರುದ್ಧ ತೀವ್ರವಾಗಿ ಮತ್ತು ಕ್ರಿಯಾಶೀಲವಾಗಿ ಪ್ರತಿಕ್ರಿಯಿಸುತ್ತಾ ಹೋಗುತ್ತಾನೆ. ಡಾ.

ವಿದ್ಯಾಶಂಕರರು ಗುರುತಿಸಿರುವಂತೆ "ಲಕ್ಷ್ಮಣನು ಮೊಯಿಲಿಯವರ ಪ್ರಜ್ಞಾವಲಯದ ಮಾನಸಪುತ್ರನಾಗಿದ್ದಾನೆ. ಶ್ರೀರಾಮನ ಸೌಮ್ಯ ವ್ಯಕ್ತಿತ್ವಕ್ಕೆ ಭಂಗ ಬರದಂತೆ ಲಕ್ಷ್ಮಣನ ಧೀರೋದಾತ್ತ ಪಾತ್ರವನ್ನು ಮೂಲ ನಾಯಕನ ಪಾತ್ರಕ್ಕೆ ಪೂರಕವಾಗುವಂತೆ ಮೊಯಿಲಿಯವರು ಬೆಳೆಸಿದ್ದಾರೆ. ರಾಮಾಯಣವನ್ನು ಲಕ್ಷ್ಮಣಾಯಣವಾಗಿಸುವುದು ಕವಿಯ ಹಂಬಲ.

ತಪಶ್ಚರ್ಯೆ ಧ್ಯಾನ ಯಾಗ ತ್ಯಾಗ ಆತ್ಮಾ
ರ್ಪಣೆಯ ದಿವ್ಯ ಪಂಚತತ್ವಗಳು ಭಾರತದ
ಜೀವನದ ಪಂಚಸಂಭಗಳು ಶಿಲಾಲಿಪಿಯ
ತೆರದಿ ಅಚ್ಚಳಿಯದೆ ಸ್ಥಿರವಾಗಿ ಮೂಡಿರಲು
ರಾಮತ್ವ ಒದಗಿರಲು ರಾವಣತೆ ತೊಲಗಿರಲು
ಆತ್ಮ ನಿವೇದನವಾಗಿಹದು ಅನುಜ ಲಕ್ಷ್ಮಣನ
ಜೀವನ ಕಥಾಮೃತವು
ರಾಮಚಂದ್ರನ ಪಾದಸೇವೆಗೆ ವಚನ ಪಾಲನೆ
ಶೇಷಭಾವಕೆ ಅಂತೆ ವೃತ್ತಿ ಕೈಂಕರ್ಯಕ್ಕೆ
ವಿಶ್ವಗಂಭೀರತೆಗೆ ಅವಿಚಲಿತ ಧೀರತೆಗೆ
ನಿನಗಾದ ಸುಖ ನಿನಗಾದ ದುಃಖ ನನಗದೇ
ಹಸಾದವೆಂದು ವಿನಯದಲಿ ಸ್ವೀಕರಿಪ ಭಾ
ವಕ್ಕೆ ಆದರ್ಶವಾಗಿಹನು ಅನುಜ ಲಕ್ಷ್ಮಣನು
ಶ್ರೀರಾಮನ ಅಣುಗ ಪ್ರೀತಿಯೈಸಿರಿ ಸಂಪನ್ನ
ಅತೀಂದ್ರಯನೀ ಧರ್ಮಸಾಧಕ ನರೋತ್ತಮನು

ಈ ಕಾವ್ಯದ ಮೂಲಕ ನಾನೇನೂ ಹೊಸತನ್ನು ಹೇಳುತ್ತಿಲ್ಲ ಎಂಬ ವಿನಯವನ್ನು ಮೊಯಿಲಿಯವರು ಪ್ರಕಟಿಸಿದ್ದಾರೆ. ಜೊತೆಯಲ್ಲೇ ತಮ್ಮ ಮಹಾನ್ವೇಷಣಂನ ಮೂಲ ಸ್ರೋತ ಸತ್ಯದ ಅನ್ವೇಷಣೆ ಎಂಬುದನ್ನು ಜರ್ಮನ್ ತತ್ವಜ್ಞಾನಿ ಲೆಸ್ಸಿಂಗ್‌ನ ಹೇಳಿಕೆಯೊಂದರ ಮೂಲಕ ಸ್ಪಷ್ಟಪಡಿಸಿರುವರು. "ಈಗಿನ ನಾಗರೀಕತೆ ಅನೇಕ ಶತಮಾನಗಳಿಂದ ನಡೆದು ಬಂದು ಪೂರ್ಣತೆಯೆಡೆಗೆ ಸಾಗುವ ಅನ್ವೇಷಣೆಯಾಗಿದ್ದು ಈ ಆದರ್ಶಪಥದ ಅನ್ವೇಷಣೆ ಮೊಯಿಲಿಯವರ ಮಹಾನ್ವೇಷಣಂಗೆ ಪ್ರಬಲ ಪ್ರೇರಣೆ"[೨೩]

ಕವಿ ವೀರಪ್ಪಮೊಯಿಲಿಯವರು ತಮ್ಮ ಕಾವ್ಯದ ಉದ್ದೇಶವನ್ನು ತಮ್ಮ ಕೆಲವು ಮಾತುಗಳಲ್ಲಿ ಸ್ಪಷ್ಟಪಡಿಸುತ್ತಾರೆ.

೧. ಬದುಕು ತೆರೆಯುವುದು ಬದುಕಿಗೆ ಮಾತ್ರ. ಆಗ ಅನಂತ ಪ್ರವಾಹದುಬ್ಬರದಲ್ಲಿ ಬದುಕಿನ ಹಳ್ಳಕೊಳ್ಳಗಳು ಮುಚ್ಚಿಕೊಳ್ಳುತ್ತವೆ. ಈ ಬದುಕಿನ ಮಹಾನ್ವೇಷಣೆಯೇ ನನ್ನ ಕಾವ್ಯದ ಅಂತಿಮ ಗುರಿ"[೨೪]

೨. ಯುದ್ಧ ಸತತ ನಡೆಯುತ್ತದೆ. ಧರ್ಮ,ಅಧರ್ಮಗಳಾಚೆ ನಮ್ಮನ್ನು ಒಯ್ಯುವ ಪರಮಾರ್ಥದ ಮಜಲಿನಲ್ಲಿ, ಇದು ಬರೀ ಅಯೋಧ್ಯೆ, ಲಂಕೆ ಕುರುಕ್ಷೇತ್ರಕ್ಕೆ ಮಾತ್ರವಲ್ಲ ಮಾನವ ಚೇತನದ ಉತ್ತಮಾಂಶಕ್ಕೂ ಅಧಮಾಂಶಕ್ಕೂ ಈ ದೇಹದ ಮೇಲೆ ಪ್ರಭುತ್ವ ಸ್ಥಾಪಿಸುವ ಯುದ್ಧವನ್ನು ಮನೋಭೂಮಿಕೆಯಲ್ಲಿ ನಿರಂತರ ಗಮನಿಸಬಹುದು"[೨೫]

೩. ಸಂಘರ್ಷದ ಉತ್ಪನ್ನವೇ ನನ್ನ ಮಹಾನ್ವೇಷಣಂ ಸತ್ಯದರ್ಶನದ ಮುಕ್ತಾ ಫಲ"[೨೬]

ಕವಿ ಮೊಯಿಲಿಯವರ ಕಾವ್ಯದ ಬಗೆಗಿನ ಈ ನಿಲುವುಗಳು ಅವರ ಸಮಾಜ ನಿಷ್ಠೆ, ಸಮಾಜಮುಖತೆಗೆ ಹಿಡಿದ ಕೈಗನ್ನಡಿಯಂತಿವೆ. ರಾಮಾಯಣದ ಕಥಾಭಿತ್ತಿಯಲ್ಲಿ ಅಗತ್ಯಬಿದ್ದಾಗಲೆಲ್ಲ ಬಂಡಾಯದ ಧ್ವನಿಯನ್ನು ಹೊಮ್ಮಿಸಲು ಅವರ ಕಾವ್ಯ ಹಿಂದೆ ಬೀಳುವುದಿಲ್ಲ. ಜನಪರತೆ, ಶೋಷಿತಪರ ನಿಲುವು, ಸ್ತ್ರೀಪರನಿಲುವು, ಯುದ್ಧವಿರೋಧಿ ನಿಲುವು, ಭಯೋತ್ಪಾದಕತೆಯ ವಿರುದ್ಧ ನಿಲುವು, ಜಾತಿ ವರ್ಗ ಲಿಂಗಭೇದಗಳ ವಿರುದ್ಧ ಸಾತ್ವಿಕ ಆಕ್ರೋಶ ಇವು ಕಾವ್ಯದ ಉದ್ದಕ್ಕೂ ವ್ಯಕ್ತವಾಗುತ್ತಾ ಹೋಗುತ್ತದೆ. ಹೀಗೆ ಸಂಘರ್ಷವನ್ನು ಉತ್ಪಾದಿಸುವಲ್ಲಿ ಲಕ್ಷ್ಮಣನ ಪಾತ್ರವು ಪ್ರಧಾನ ಭೂಮಿಕೆಯನ್ನು ನಿರ್ವಹಿಸುತ್ತದೆ.

ಲಕ್ಷ್ಮಣನ ಮೂಲಕ ಮಹಾನ್ವೇಷಣೆಯ ಒಳತುಡಿಗಳು ವ್ಯಕ್ತವಾಗಿರುವ ಪರಿಯನ್ನು ಸ್ವತಃ ಕವಿ ಹೀಗೆ ವರ್ಣಿಸಿದ್ದಾರೆ.

**"ಸೌಮಿತ್ರಿಯಾಗಿಹನು ಸ್ವತಂತ್ರ ಸ್ಫಟಿಕ ಚಿಂತನೆ**
**ಮೌಲಿಕ ಒರೆಗಲ್ಲು ಭೀಕರಾಗ್ನಿಯಲಿ ಕಾದಕಬ್ಬಿಣದ**
**ಶಲಾಕೆಗೆ ಪ್ರತೀಕನು ಪಿಡಿದಿಹನು ದಗದಗಿಸತಿಹ**
**ಉರಿಯುತಿಹ ಪಂಜುಗಳ ಕೈಗಳಲ್ಲಿ ಕೆಂಡದುಂಡೆ**
**ಗಳಂತೆ ಕ್ರಾಂತಿ ಕಿಡಿ ಕಂಗಳಲ್ಲಿ**

ದಗದಗಿಸಿ ಸೂಸುತಿದೆ ಅನ್ಯಾಯ ಅಕ್ರಮಕೆ ಬಾಗದ
ಎಚ್ಚರವಿಹುದು ಮನವು ಜಾಗೃತವಿಹುದು”[೨೭]

ಶ್ರೀರಾಮ ಮತ್ತು ಲಕ್ಷ್ಮಣರನ್ನು ಮಹಾನ್ವೇಷಣೆಯತ್ತ ಸಾಗಿಸುವ ಗುರು ವಿಶ್ವಾಮಿತ್ರ ತಮ್ಮ ಶಿಷ್ಯನ ಮೂಲಕ ಹೊಸದೊಂದು ಅಯೋಧ್ಯೆಯನ್ನು ನಿರ್ಮಿಸ ಬಯಸುತ್ತಾರೆ. (ಇದು ಹಳೆಯ ಅಯೋಧ್ಯೆಯನ್ನು ಮತ್ತೆ ಕಟ್ಟುವ ಸದ್ಯಕಾಲೀನ ರಾಜಕೀಯ ಧೋರಣೆಗೆ ವಿರುದ್ಧವಾದ ಶ್ಲಾಘ್ಯವಾದ ನಿಲುವಾಗಿದೆ) ವಿಶ್ವಾಮಿತ್ರನು ರಾಮಲಕ್ಷ್ಮಣರಿಗೆ ಕೆಳಕಂಡಂತೆ ಅವರ ಮಹಾನ್ವೇಷಣೆಯ ದಾರಿಯನ್ನು ತೆರೆಯುತ್ತಾನೆ.

“ಲೋಕಕಲ್ಯಾಣ ದೀಕ್ಷೆ ನಮಗಿಹುದು, ಸರ್ವಸುಖ
ಶಾಂತಿಕ್ರಾಂತಿಯದು ಸಾಧಿಸಲುಬೇಕು ಉಳಿಸಲು
ಬೇಕು ಮಾನವತೆಯ ದುಃಖಜ್ವಾಲೆಯಲಿ ಬೆಂದಿರುವ
ದೀನದುರ್ಬಲರಿಗೆ ಸುಖವ ನೀಡಲುಬೇಕು
ಮೂಕರಾಗಿಹ ಜನಕೆ ದನಿಯ ನೀಡಲುಬೇಕು
ಪಾತಾಳದಿ ವರಹಾಮೂರ್ತಿ ಧರಣಿಯನೆತ್ತಿದೊಲು
ಮಾನವತೆಯ ಮರ್ಯಾದೆಯನು ಮೇಲೆತ್ತಬೇಕು”[೨೮]

ಆಧುನಿಕ ಜಗತ್ತಿನ ಮತ್ತೊಂದು ದುಃಸ್ವಪ್ನ ಜಗನ್ನಾಶಕವಾದ ಯುದ್ಧಭೀತಿ. ಈಗಾಗಲೇ ವಿಶ್ವವು ಮಾರಕವಾದ ಎರಡು ಮಹಾಯುದ್ಧಗಳನ್ನು ಕಂಡಿದೆ. ಮಹಾನಾಶದತ್ತ ಜಗತ್ತನ್ನು ನೂಕುವ ಈ ಜಾಗತಿಕಯುದ್ಧಗಳು ಮನುಷ್ಯನ ಪ್ರಜ್ಞೆಯಲ್ಲಿ ಆಳವಾದ ಗಾಯವನ್ನು ಉಂಟು ಮಾಡಿದೆ. ಯುದ್ಧ ಮತ್ತು ಶಾಂತಿ ಇಂದಿನ ಜಗತ್ತಿನ ಎದುರಿಗಿರುವ ಎರಡು ಮಹಾದೊಡ್ಡ ಆಯ್ಕೆಗಳು. ವಿಶ್ವಪ್ರಜ್ಞೆಯು ಯಾವುದನ್ನು ಆಯ್ಕೆ ಮಾಡುತ್ತದೆ, ಎನ್ನುವುದರ ಮೇಲೆ ಸಕಲ ಜೀವರಾಶಿಯ ಭವಿಷ್ಯ ನಿಂತಿದೆ. ಶಕ್ತರಾಷ್ಟ್ರಗಳು ವಿಶ್ವವನ್ನೇ ಭಸ್ಮೀಭೂತಗೊಳಿಸಬಲ್ಲ ಅಣ್ವಸ್ತ್ರಗಳನ್ನು ಸಿದ್ಧಗೊಳಿಸಿ ಇಟ್ಟುಕೊಂಡಿವೆ. ಜೊತೆಗೆ ಭಾರತದಂತಹ ಶಾಂತಿಪ್ರಿಯ ರಾಷ್ಟ್ರಗಳು ವಿಶ್ವಶಾಂತಿಗಾಗಿ ಹೋರಾಟ ನಡೆಸುತ್ತಿವೆ. ಮಹಾತ್ಮಗಾಂಧಿಯವರು ಅಹಿಂಸೆಯ ಮೂಲಕ ಭಾರತದ ನವ ಅಸ್ತಿತ್ವಕ್ಕೆ ಕಾರಣರಾದದ್ದು ಸದ್ಯದ ಸಂದರ್ಭದಲ್ಲಿ ಅತ್ಯಂತ ಸಾಂಕೇತಿಕವೆನಿಸುತ್ತದೆ. ಕವಿ ವೀರಪ್ಪಮೊಯಿಲಿಯವರು ತಮ್ಮ ಕಾವ್ಯದಲ್ಲಿ ಬಹಳ ಖಚಿತವಾಗಿ ತಮ್ಮ ಯುದ್ಧವಿರೋಧಿ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಅಣ್ವಸ್ತ್ರ ವಿನಾಶಕ್ಕೆ

ಪರೋಕ್ಷವಾಗಿ ಕರೆಕೊಟ್ಟಿದ್ದಾರೆ. ವಿಶ್ವಶಾಂತಿಯು ಭಾರತದಿಂದ ಮಾತ್ರ ಸಾಧ್ಯ ಎಂಬುದು ಮೊಯಿಲಿಯವರ ಖಚಿತ ನಿಲುವಾಗಿದೆ. (ಭಾರತವನ್ನು ಧರ್ಮರಾಜನಿಗೆ ಹೋಲಿಸುವ ಮಾಸ್ತಿಯವರು ಇಂತಹದ್ದೇ ನಂಬಿಕೆಯನ್ನು ಹೊಂದಿರುವುದು ಕಾಕತಾಳೀಯ)

**"ಪರಮಾಣು ಪಂಕದಲ್ಲಿ ಹೊರಳುತಿಹ ಪಶು ಸದೃಶ**
**ರಾಷ್ಟ್ರಗಳ ಕೋಡುಗಳ ಹಿಡಿದು ನಿಲಿಸುತೀಗ**
**ಭಾರತವೆ ಪಶುಪತಿಯು ಶಾಂತಿ ಚರಿತ್ರೆಯಲಿ"**[೨೯]

ಇದು ಕವಿಯ ನಿಲುವು. ವಿಶ್ವಶಾಂತಿಯ ಸಾಧನೆಯು ಭಾರತದಿಂದ ಸಾಧ್ಯ ಎನ್ನುವುದನ್ನು ಅವರು ದೃಢವಾಗಿ ನಂಬಿದ್ದಾರೆ. ಸೀತೆಯ ಸ್ವಯಂವರ ಸಂದರ್ಭದಲ್ಲಿ ವಿಶ್ವಾಮಿತ್ರನು ಶಿವಧನಸ್ಸಿನ ಬಗ್ಗೆ ರಾಮನಿಗೆ ಹೀಗೆ ಹೇಳುತ್ತಾರೆ.

**"ವಿಸ್ಫೋಟ ಶಕ್ತಿಯಿದೆ ಶಿವಧನುವಿನಲಿ, ಸ್ಪರ್ಶಿಸಿ ಸಾಯುಯುಕ್ತಿಯಲಿ**
**ಅದನೆಲ್ಲ ಅರುಹುವೆನು ತಂತ್ರಕೌಶಲ್ಯವನು**
**ಶಿವಧನುಸ್ಸಿನ ಅಂತಿಮ ನಿಷ್ಕ್ರಿಯತೆಯನೆ ಬಯಸುವೆನು**
**ರಕ್ಕಸವರ್ಗಕದು ವಶವಾಗೆ ನಾಶವಪ್ಪುದು ಜಗವು**
**ಅದ ತಪ್ಪಿಸುವುದನಿವಾರ್ಯ, ಅದುವೆ ಈ ಜಗದ**
**ಅನ್ವೇಷಣೆಯ ಅಂತಿಮ ಸೋಪಾನವಹುದು"**[೩೦]

ಮಾರಕವಾದ ಶಿವಧನಸ್ಸು, ಆಧುನಿಕ ಅಣ್ವಸ್ತ್ರದ ಪ್ರತೀಕವಾಗಿದೆ. ಅದು ರಕ್ಕಸರ ವಶವಾದರೆ ಜಗತ್ತೇ ನಾಶವಾಗಬಹುದು. ವಿಶ್ವವು ಹೀಗೆ ನಾಶವಾಗದೆ ಉಳಿಯಬೇಕೆಂದರೆ ಶಿವಧನಸ್ಸಿನ ವಿಸರ್ಜನೆ ಆಗಬೇಕಾಗುತ್ತದೆ. ಹಾಗೆ ಶಿವಧನಸ್ಸನ್ನು ನಿಷ್ಕ್ರಿಯಗೊಳಿಸುವ ತಂತ್ರಕೌಶಲ್ಯವನ್ನು ವಿಶ್ವಾಮಿತ್ರರು ಶ್ರೀರಾಮನಿಗೆ ಭೋಧಿಸಿ ಆ ಮಾರಕ ಯುದ್ಧಾಸ್ತ್ರವನ್ನು ನಾಶಗೊಳಿಸುತ್ತಾರೆ. ಮೂಲದಲ್ಲಿ ವರನ ಶಕ್ತಿ ಪ್ರದರ್ಶನಕ್ಕೆ ಸವಾಲೊಡ್ಡುವ ಪೌರುಷದ ಪ್ರತೀಕವಾಗಿದ್ದ ಶಿವಧನಸ್ಸು, ಮೊಯಿಲಿ ಕಾವ್ಯದಲ್ಲಿ ವಿಶ್ವಮಾರಕವಾದ ಅಣ್ವಸ್ತ್ರದ ಪ್ರತೀಕವಾಗುವುದು, ಅವರ ಆಧುನಿಕ ಪ್ರಜ್ಞೆಯ ಫಲವಾಗಿದೆ. ಹೀಗೆ ಮೊಯಿಲಿಯವರ ಕಾವ್ಯವು ಮತ್ತೆ ಮತ್ತೆ ಆಧುನಿಕ ಜಗತ್ತಿನ ಇಕ್ಕಟ್ಟುಗಳನ್ನು, ಸಮಸ್ಯೆಗಳನ್ನು, ರಾಜಕೀಯ ಉತ್ಪಾತಗಳನ್ನು, ಪ್ರಜ್ಞಾಪಲ್ಲಟಗಳನ್ನು ಧ್ವನಿಸುವ ಪಕ್ವಮನಸ್ಸಿನ ರಾಜಕೀಯ ಓದಿನ

(Political reading) ಫಲವಾಗಿದೆ ಎನ್ನಬಹುದು. ಈ ಬಗೆಯ ರಾಜಕೀಯ ಓದಿನ ಫಲಶ್ರುತಿಯನ್ನು ರಾಮ ಪರಶುರಾಮರ ಮುಖಾಮುಖಿಯ ಸಂದರ್ಭದಲ್ಲೂ ನೋಡಬಹುದು. ರಾಮನೊಂದಿಗೆ ಸಂವಾದ ಮಾಡಿದ ನಂತರ ಪರಶುರಾಮನ ವಿಚಾರಧಾರೆ ಬದಲಾಗುವುದನ್ನು ಡಾ.ಶಾಂತಿನಾಥ ದಿಬ್ಬದ ಅವರು ತಮ್ಮ ಪ್ರಬಂಧದಲ್ಲಿ ಅರ್ಥಪೂರ್ಣವಾಗಿ ಗುರುತಿಸಿದ್ದಾರೆ.

**"ದಿಟವ ಪೇಳಿದೆ ರಾಮ ಹಳೆಯದಾಯ್ತೆನ್ನ ಕ್ರಾಂತದೃಷ್ಟಿ**
**ಕ್ರಾಂತಿಯೆಂಬುದು ಎಡೆಬಿಡದ ಚಲನ ಪ್ರಕ್ರಿಯೆಂಬುದನು**
**ಗುರುತಿಸದಾದೆ ಹೊಸತನಕೆ ಹೊಂದದೆಯೆ ಗತವೈಭವದ**
**ಗರ್ವದಲೆ ಕುಳಿತಿದ್ದೆ, ಪಳೆಯುಳಿಕೆಯಾಗಿ ಉಳಿದಿದ್ದೆ**
**ಯುಗದೊಡನೆ ಬದಲಾಗಬೇಕು ಯುಗದೃಷ್ಟಿ ಅನಿವಾರ್ಯ"**[೩೧]

ಕ್ರಾಂತದೃಷ್ಟಿಯು ಕಾಲಕಾಲಕ್ಕೆ ಬದಲಾಗುವ ಪ್ರಕ್ರಿಯೆ ಎಂಬುದನ್ನು ಶ್ರೀರಾಮ ಪರಶುರಾಮರ ಮುಖಾಮುಖಿಯಲ್ಲಿ ಗುರುತಿಸುವ ರೀತಿ ಅನನ್ಯವಾಗಿದೆ. ಯುಗದೊಡನೆ ಬದಲಾಗಬೇಕು ಯುಗದೃಷ್ಟಿಯೆಂಬುದು ಮೊಯಿಲಿಯವರ ಮಾಗಿದ ರಾಜಕೀಯ ಪ್ರಜ್ಞೆಯ ಅಭಿವ್ಯಕ್ತಿ ಎನ್ನಬಹುದು.

ವೀರಪ್ಪ ಮೊಯಿಲಿಯವರು ತಮ್ಮ ಕಾವ್ಯದ ಉದ್ದಕ್ಕೂ ಸ್ತ್ರೀಪರವಾದ ಕಾಳಜಿನ್ನು ವ್ಯಕ್ತಪಡಿಸುತ್ತಾ ಹೋಗಿದ್ದಾರೆ. ಈ ಕಾಳಜಿಗೆ ಮೂಲ ಪ್ರೇರಣೆ ಸಮಕಾಲೀನ ಭಾರತೀಯ ಸಂದರ್ಭದಲ್ಲಿ ನಡೆಯುತ್ತಿರುವ ಸ್ತ್ರೀಶೋಷಣೆ ಎಂಬುದು ಗಮನಿಸಬೇಕಾದ ಅಂಶವಾಗಿದೆ. ವಿಶ್ವಾಮಿತ್ರರು ರಾಮ ಲಕ್ಷ್ಮಣರಿಗೆ ಸ್ತ್ರೀ ಸಂಕುಲಕ್ಕಿರುವ ಸಮಸ್ಯೆಗಳನ್ನು ಕುರಿತು ಕೆಳಕಂಡಂತೆ ವಿವರಿಸುತ್ತಾನೆ.

**"ರಕ್ಕಸರ ಶಿಬಿರದಿಂ ಹೊರಬಂದ ಅಬಲೆಯರ**
**ನೀಚಭಾವದಿ ಕಂಡು ಅಪಮಾನಗೊಳಿಸುವರು**
**ಅತ್ಯಾಚಾರಕೊಳಗಾಗಿ ಗರ್ಭಧರಿಸಿಹರವರು**

ನೊಂದು ಬವಣೆಯ ಪಡೆದು ಒದ್ದಾಡಿ ಹಲುಬುವರು
ಅವರ ಮಕ್ಕಳ ಬದುಕು ಡೋಲಾಯಮಾಗಿಹುದು
ಗೃಹಿಣಿಯೆಂಬಧಿಕಾರಿ ನೆಮ್ಮದಿಯ ಸ್ವೀಕಾರ
ನೀಡುವರೆ ಮಾನಿಸರು, ನೀಡುವರೆ ಸಂತಸವ
ಸಮಾಜ ಸಾಕ್ಷಿಕವು ಔದಾರ್ಯವೆಲ್ಲಿಹುದು
ಗೌರವಾದರವೆಲ್ಲ ಬಲ್ಲಿದಗೆ ಉಳ್ಳವಗೆ
ಶೋಷಣೆಗೆ ತುಳಿತಕ್ಕೆ ತುಚ್ಛೀಕಾರ ಒತ್ತಡಕೆ
ಸಿಲುಕಿರುವ ಅಬಲೆಯರು ಪಾಪರಹಿತರು ಅವರು
ಕಣ್ಣೀರಲೆ ಕೈತೊಳೆದು ಬಿದ್ದಿಹರು ಮೂಲೆಯಲಿ
ಅವರ ವೇದನೆಯೆಲ್ಲ ಸಂಗೀತವಾಗುವೊಲು
ಸಂಕಟಕೆ ಸ್ಪಂದಿಸುತ ಆರು ಮಾಳ್ಪರು ವತ್ಸ"[೨೨]

ಅಹಲ್ಯೆ ಮತ್ತು ಇಂದ್ರರ ಪ್ರಸಂಗದಲ್ಲಿ ಮೊಯಿಲಿಯವರ ಸ್ತ್ರೀಪರ ಕಾಳಜಿ ತುಂಬ ಪ್ರಭಾವಶಾಲಿಯಾಗಿ ವ್ಯಕ್ತವಾಗಿದೆ. ಇಂದ್ರನಿಂದ ಭಂಗಿತಳಾದ ಅಹಲ್ಯೆಯ ಕಥೆಯನ್ನು ವಿಶ್ವಾಮಿತ್ರನು ರಾಮಲಕ್ಷ್ಮಣರಿಗೆ ತಿಳಿಸುತ್ತಾನೆ. ತಪ್ಪಿತಸ್ಥನಾದ ಇಂದ್ರನಿಗೆ ಏನು ಶಿಕ್ಷೆಯಾಗಬೇಕು ಎಂಬ ಪ್ರಶ್ನೆಯನ್ನು ಅಹಲ್ಯೆಯ ಪತಿ ಗೌತಮ, ಋಷಿಮುನಿಗಳ ಸಭೆಯಲ್ಲಿಡುತ್ತಾನೆ. ಆ ಸಭೆಯಲ್ಲಿ ಸ್ವತಃ ವಿಶ್ವಾಮಿತ್ರನೂ ಇರುತ್ತಾನೆ. ಆದರೆ ವಿಶ್ವಾಮಿತ್ರನು ಇಂದ್ರನನ್ನು ದಂಡಿಸುವ ನಿಲುವನ್ನು ವ್ಯಕ್ತಪಡಿಸಲಾರದೆ ಹೋಗುತ್ತಾನೆ. ಹಾಗೆ ಮಾಡಿದ್ದು ಸರಿಯೆ ಎಂದು ಲಕ್ಷ್ಮಣ ಈಗ ಆಕ್ರೋಶದ ಧ್ವನಿಯೆತ್ತುತ್ತಾನೆ. ಒಂದು ಕ್ಷಣ ವಿಚಲಿತನಾದ ವಿಶ್ವಾಮಿತ್ರನಿಗೆ ಸತ್ಯವನ್ನು ಹೇಳದೆ ನಿರ್ವಾಹವಿರುವುದಿಲ್ಲ. ಆಗ ಆತ "ಬ್ರಹ್ಮರ್ಷಿಯ ಪದವಿಯ ವ್ಯಾಮೋಹದಲ್ಲಿ ತಾನು ವ್ಯವಸ್ಥೆಯನ್ನು ಪ್ರತಿಭಟಿಸಲಾರದೆ ಹೋದೆನು"[೨೩] ಎಂಬ ಕಟುಸತ್ಯವನ್ನು ಪ್ರಕಟಿಸುತ್ತಾನೆ. ಮುಂದೆ ಶಿವಧನಸ್ಸಿನ ಹೆದೆ ಏರಿಸಿದ ವೀರನಿಗೆ ಸೀತೆಯನ್ನು ವೀರಶುಲ್ಕವಾಗಿ ಮದುವೆ ಮಾಡಿಕೊಡುವ ಕ್ಷಾತ್ರಧರ್ಮದ ಆಚರಣೆಯನ್ನು ರಾಮ ಆಕ್ಷೇಪಿಸುತ್ತಾನೆ. ಹೆಣ್ಣಿನ ಒಳಮನಸ್ಸನ್ನು ಅರಿಯದೆ ಅವಳನ್ನು ಹೀಗೆ ಪಣಕ್ಕೆ ಒಡ್ಡುವುದು ಸರಿಯೇ ಎಂದು ಪ್ರಶ್ನಿಸುತ್ತಾನೆ.

ವೀರಪ್ಪ ಮೊಯಿಲಿಯವರು ಭಾರತದ ಸಮಕಾಲೀನ ಜಾತಿ, ವೈಷಮ್ಯ ಮತ್ತು ವಿಶ್ವಬಂಧುತ್ವದ ಆಶಯಗಳನ್ನು ತಮ್ಮ ಕಾವ್ಯದಲ್ಲಿ ವ್ಯಕ್ತಪಡಿಸಿದ್ದಾರೆ. ಅವರೇ ಹೇಳುವಂತೆ

**"ಮತಾಂಧತೆಯು ಪ್ರಜಾಶಕ್ತಿಯನು ಬೆಂಕಿಯಲಿ**
**ಸುಡುತಿರಲು, ಜಾತ್ಯಾತೀತತೆಯ ಜ್ಯೋತಿ**
**ಧೂಮದಲಿ ಬಿದ್ದಿರಲು ಹೆಮ್ಮರವೆ ಉರುಳಿದಂತೆ**
**ಮಾನವತೆ ಧರೆಗುರುಳೆ ಅದನೆಲ್ಲ ತಪ್ಪಿಸಲು**
**ಮನದುಂಬಿ ನಾನೀಗ ಹಾಡುವೆನು ಶ್ರೀ ಲಕ್ಷ್ಮಣ**
**ಮಹಾನ್ವೇಷಣೆಯ ಮಹಾಕಾವ್ಯವನು"**[೩೪]

ವಿಶ್ವಾಮಿತ್ರರನ್ನು ಕುರಿತು ರಾಮಲಕ್ಷ್ಮಣರು ಹೇಳುವ ಮಾತುಗಳಿವು–

**"ನಿಸರ್ಗದಲಿ ಅನುರಣಿಸುತಿಹ**
**ವಿಶ್ವಬಂಧುತ್ವ ಸರ್ವರ ಕರ್ಣಗಳಲಿ ಮೊಳಗಿಸಿದೆ**
**ಮಾನವನ ಏಕತೆಯ, ಏಕತೆಯು ತಾನಿತ್ಯ**
**ಅನೇಕತೆಯು ತಾ ಮಿಥ್ಯ ಎಂಬ ಸತ್ಯವನು**
**ವಸುದೈವ ಕುಟುಂಬಕಂ ಎಂದೆನುತ ನಿತ್ಯಸತ್ಯವೆ**
**ನಿಸರ್ಗ ಗರ್ಭದಲಡಗಿರಲು ಬೀಟೆ ಶ್ರೀಗಂಧ**
**ಮೃಗಖಗಕುಲಕಿರುವ ವಿಶ್ವಬಂಧುತ್ವ ಸುಪ್ರಭೆ**
**ಯದೇಕಿಲ್ಲ ಮಾನವಗೆ?"**[೩೫]

ಜಾತಿಯ ವಿಷಮತೆಯು ನಾಶವಾಗದಿದ್ದರೆ ಮುಂದೆ ಬರುವ ದಿನಗಳಲ್ಲಿ ಜಾತಿಯೇ ಭದ್ರಕೋಟೆಯಾಗಿ ಪರಿಣಮಿಸುತ್ತದೆ. ಅದು ಮನುಷ್ಯ ಮನುಷ್ಯರನ್ನು ವಿಂಗಡಿಸಿ ವೈಷಮ್ಯವನ್ನು ಬಿತ್ತುತ್ತದೆ. ಆಗ ಶೋಷಿತರನ್ನೂ, ದಲಿತರನ್ನೂ ಯಾರು ರಕ್ಷಿಸುತ್ತಾರೆ? ಎಂದು ನೇರವಾಗಿಯೇ ತಮ್ಮ ಜಾತಿ ವಿರೋಧಿಯಾದ ನಿಲುವುಗಳನ್ನು ಮೊಯಿಲಿಯವರು ಕಾವ್ಯದಲ್ಲಿ ವ್ಯಕ್ತಪಡಿಸಿದ್ದಾರೆ.

ಕಾಡಿನಲ್ಲಿ ಬೇರೆ ಬೇರೆ ಜಾತಿಯ ಮರಗಳು ಅನ್ಯೋನ್ಯವಾಗಿ ಬಾಳುತ್ತಾ ಇವೆ. ಬೇರೆ ಬೇರೆ ಪಕ್ಷಿಪ್ರಾಣಿಗಳು ಸಹಬಾಳ್ವೆ ನಡೆಸುತ್ತಿವೆ. ಇದು ನಮ್ಮ ಆದರ್ಶವಾಗಬೇಕೆಂದು ರಾಮಲಕ್ಷ್ಮಣರು ಹೇಳುವಲ್ಲಿ ಮೊಯಿಲಿಯವರ ಧನಾತ್ಮಕ ಆಶಯ ಸುಂದರವಾಗಿ ಅಭಿವ್ಯಕ್ತವಾಗಿದೆ. ಅದೇ ರೀತಿ

ಭಾರತದಲ್ಲಿ ಗುಡ್ಡಬೆಟ್ಟ ಕಾಡು ನದಿಗಳು ನಾಶವಾಗುತ್ತ ಪರಿಸರವು ಹಾಳಾಗುತ್ತಿರುವ ಸಂದರ್ಭದಲ್ಲಿ ಮೊಯಿಲಿಯವರು ತಮ್ಮ ಕಾವ್ಯದಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಪರಿಸರ ರಕ್ಷಣೆಯ ಆಶಯವನ್ನು ವ್ಯಕ್ತಪಡಿಸುತ್ತಾ ಹೋಗಿದ್ದಾರೆ. ಪರಿಸರ ಪ್ರೇಮವನ್ನು ಎತ್ತಿ ಹಿಡಿಯುವ ಗ್ರಾಮೀಣರ ಆಚರಣೆಗಳು ಪ್ರಸ್ತಾಪಿತವಾಗಿವೆ. ಪರಿಸರ ಪ್ರೇಮವನ್ನು ಸೂಚಿಸುವ ಸುಗ್ಗಿಯ ಹಬ್ಬ, ನಾಗಮಂಡಲ, ಕೆಡ್ಡಸೊ ಮೊದಲಾದ ಆಚರಣೆಗಳು ಕಾವ್ಯದಲ್ಲಿ ಪ್ರಸ್ತಾಪಿತವಾಗಿವೆ. ದಶರಥನು ಪುತ್ರಕಾಮೇಷ್ಟಿಯಾಗವನ್ನು ನಡೆಸುವಾಗ ಪರಿಸರಕ್ಕೆ ಹಾನಿವುಂಟುಮಾಡಬಾರದೆಂದು ಪ್ರಜೆಗಳಿಗೆ ಎಚ್ಚರಿಕೆ ನೀಡುತ್ತಾನೆ. ಕಾಡಿನಲ್ಲಿ ಪರ್ಣಕುಟಿಯನ್ನು ರಚಿಸುವಾಗ ಕಾಡಿಗೆ ಹಾನಿಯಾಗದಂತೆ ಎಚ್ಚರವಹಿಸಬೇಕೆಂದು ರಾಮನು ಲಕ್ಷ್ಮಣನಿಗೆ ತಿಳಿಸುತ್ತಾನೆ. ಜೀವಂತಮರಗಳನ್ನು ಕಡಿಯಬಾರದೆಂದು, ಒಣಮರದ ದಿಮ್ಮಿಗಳನ್ನು ತಂದು ಪರ್ಣಕುಟಿಯನ್ನು ಕಟ್ಟಬೇಕೆಂದು ರಾಮನು ಲಕ್ಷ್ಮಣನಿಗೆ ಸೂಚಿಸುತ್ತಾನೆ. ಕಾಡಿನಲ್ಲಿ ವಾಸಿಸುತ್ತಿರುವಾಗ ಕೊಲ್ಲ-ಭಿಲ್ಲ ತರಳೆಯರೇ ಸೀತೆಯ ಗೆಳತಿಯರು, ಹಂಸ, ನವಿಲು, ಜಿಂಕೆಗಳೇ ಅವಳ ಸಂಗಾತಿಗಳು. ವನದಲ್ಲಿ ಕಾಣುವ ಸುಂದರ ಪರಿಸರದ ಜೊತೆಗೆ ಸೀತೆ ನಾಗರೀಕ ಸಮಾಜದ ಸಂದರ್ಭವನ್ನು ಹೋಲಿಸಿ ಈ ಕೆಳಕಂಡಂತೆ ಹೇಳುತ್ತಾಳೆ.

> **"ಇಲ್ಲಿ ಕಾನನದೊಳಗೆ ಸಸ್ಯಸಂಕುಲ ಸ್ವೇಚ್ಛೆಯಲಿ**
> **ಸೊಂಪಾಗಿ ಬೆಳೆಯುತಲಿವೆ, ನಾಡಿನಲಿ ಕಡಿಯುವರು**
> **ಇಲ್ಲಿ ನದಿಗಳು ಅಡ್ಡಿಯಿಲ್ಲದೆ ಹರಿಯುತಿವೆ**
> **ಅಲ್ಲಿ ಗಟ್ಟಿಗಳ ಕಟ್ಟುವರು, ಪರಿಸರವ**
> **ಕೆಡಿಸುವರು, ವಾಯು ಜಲ ಮಲಿನಗೈಯುವರು"**[೨೬]

ಸೀತೆಯ ಈ ಚಿಂತನೆಗಳು ಮಹಾನ್ವೇಷಣಂ ಕಾವ್ಯಕ್ಕೆ ತುಂಬ ಸಹಜವಾಗಿಯೇ ಆಧುನಿಕತೆಯ ಸ್ಪರ್ಶವನ್ನು ಕೊಟ್ಟಿವೆ. ಡಾ.ಶಾಂತಿನಾಥದಿಬ್ಬದ ಅವರು ಹೇಳುವಂತೆ "ಇವೆಲ್ಲ ಮೊಯಿಲಿಯವರ ಕಾವ್ಯದ ಮಹಾನ್ವೇಷಣೆಯ ಪರಿಣಾಮಗಳೇ ಆಗಿವೆ"[೨೭]

ವೀರಪ್ಪಮೊಯಿಲಿಯವರು ಮೂಲತಃ ಒಬ್ಬ ರಾಜನೀತಿಜ್ಞ, ಕ್ರಿಯಾಶೀಲ ರಾಜಕಾರಣಿ. ಒಂದು ರಾಜ್ಯದ ಮುಖ್ಯಮಂತ್ರಿಯ ಸ್ಥಾನದಲ್ಲಿದ್ದು, ಅಧಿಕಾರವನ್ನು ಮೌಲ್ಯಾಧಾರಿತ ನೆಲೆಯಲ್ಲಿ ನಡೆಸಲು ಯತ್ನಿಸಿದವರು. ತಮ್ಮ ಅಧಿಕಾರದ ಕಾಲಾವಧಿಯಲ್ಲಿ ಬಡವರ, ಶೋಷಿತರ ಮತ್ತು

ಬುಡಕಟ್ಟು ಜನಾಂಗದ ಪರವಾಗಿ ನಿಂತು, ನಿರಂತರ ಹೋರಾಟ ನಡೆಸಿದವರು. ಕರ್ನಾಟಕ ಕಂಡ ಮೌಲ್ಯನಿಷ್ಠ ರಾಜಕಾರಣಿಗಳಲ್ಲಿ ಒಬ್ಬರು. ಹಾಗಾಗಿಯೇ ಅವರ ಮಹಾನ್ವೇಷಣಂ ಕಾವ್ಯದಲ್ಲಿ ಅತ್ಯಂತ ಗಾಢವಾಗಿ ಕಂಡುಬರುವುದು ಅವರ ರಾಜಕೀಯಪ್ರಜ್ಞೆ, ಪ್ರಜಾಪ್ರಭುತ್ವದಲ್ಲಿ ಪ್ರಜೆಗಳಿಗೆ ನ್ಯಾಯ ಒದಗಬೇಕಾದರೆ ನ್ಯಾಯಾಂಗವು ಅತ್ಯಂತ ಬಲಿಷ್ಠವಾಗಿರಬೇಕು ಎನ್ನುವುದು ಮೊಯಿಲಿಯವರ ನಿಲುವು. ಅವರ ಕಾವ್ಯದಲ್ಲೂ ಈ ನಿಲುವಿನ ಅಭಿವ್ಯಕ್ತಿಯನ್ನು ನಾವು ಅಲ್ಲಲ್ಲಿ ನೋಡಬಹುದು. ನಿಷಾಧ ಯೋಧರು ಪ್ರಭುತ್ವದ ದೆಸೆಯಿಂದ ತಮ್ಮ ಮೇಲಾಗುತ್ತಿರುವ ದೌರ್ಜನ್ಯಗಳನ್ನು ಹೀಗೆ ನಿವೇದಿಸಿಕೊಳ್ಳುತ್ತಾರೆ–

**"ಹೊಲವ ಮೇದೊಡೆ ಬೇಲಿ, ಶಾಸಕರು ಶಾಸನವ**
**ಮುರಿವೊಡೆ, ಎಲ್ಲಿ ಕೇಳಲಿ ನ್ಯಾಯ ಗುರುವರ್ಯ"**[೩೮]

ಆಡಳಿತ ವ್ಯವಸ್ಥೆಯಲ್ಲಿ ನ್ಯಾಯಾಂಗವು ಹೇಗಿರಬೇಕು ಎಂಬ ಬಗ್ಗೆ ಕವಿ ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸುತ್ತಾರೆ.

**"ಅನೀತಿ ಅನ್ಯಾಯಗಳ ನರ್ತನಕೆ ಮನ ಮರುಗದಿರೆ**
**ಅರಸೊತ್ತಿಗೆಯು ವಿವೇಚಿಸದಿರೆ ನ್ಯಾಯಾಂಗ**
**ಮಂದಿರದ ಪ್ರಾಜ್ಞರು ದೌರ್ಷ್ಟ್ಯವನು ಪ್ರತಿಪಡಿಸದಿರೆ**
**ಜಗವೊಪ್ಪದು ಕ್ರೂರ ನರ್ತನ ಮಸಣ ಶಾಲೆ"**[೩೯]

ಒಬ್ಬ ಆದರ್ಶ ಪ್ರಭು ಹೇಗಿರಬೇಕು ಎಂಬುದನ್ನು ರಾಮನನ್ನು ವನವಾಸದಿಂದ ಹಿಂದಕ್ಕೆ ಕರೆತರಲು ಹೋದ ಭರತನಿಗೆ ಆತನು ನೀಡುವ ಹಿತವಚನಗಳಿಂದ ನಾವು ಗ್ರಹಿಸಬಹುದು.

**"ಪಾರದರ್ಶಕ ಆಡಳಿತ ನಿರ್ವಹಣೆ ರಾಜಧರ್ಮ**
**ಧನಾರ್ಜನೆಯಲ್ಲಿ ಧರ್ಮಗ್ಲಾನಿಯಾಗುವುದು ಸಲ್ಲ**
**ಕಾಲದ ಬೆಲೆಯನರಿತು ಜತನದಲಿ ನಡೆಯಬೇಕು**
**ನಾಸ್ತಿಕತೆ, ಸುಳ್ಳು, ಸಿಟ್ಟು, ಅನವಧಾನತೆ**
**ಕಾರ್ಯವಿಳಂಬ ತತ್ಸಂಗರಾಹಿತ್ಯ, ಸೋಮಾರಿತನ**
**ಇಂದ್ರಿಯಚಾಪಲ್ಯ, ಮಂತ್ರಾಲೋಚನರಹಿತ ನಿರ್ಣಯ**
**ನಿರ್ಧರಿಸಿದ ಕಾರ್ಯಗಳ ಆರಂಭಿಸದೆ ನೂಕುವುದು"**[೪೦]

ಈ ಮೊದಲಾದವು ರಾಜಧರ್ಮದ ಅಧಃಪತನವನ್ನು ಸೂಚಿಸುತ್ತವೆ ಎಂದು ಅವರು ನಂಬಿದ್ದಾರೆ.

ಒಟ್ಟಾರೆ ಹೇಳಬೇಕಾದ್ದು ವೀರಪ್ಪಮೊಯಿಲಿಯವರು ತಮ್ಮ ಕಾವ್ಯದಲ್ಲಿ ವಾಲ್ಮೀಕಿ ರಾಮಾಯಣದ ಕಥೆಯನ್ನು ಮೂಲ ಕಥಾಭಿತ್ತಿಯಾಗಿಸಿಕೊಂಡಿದ್ದರೂ ಸಮಕಾಲೀನವೆನಿಸುವ ರಾಷ್ಟ್ರ ಮತ್ತು ಅಂತಾರಾಷ್ಟ್ರನೆಲೆಯ ಬಿಕ್ಕಟ್ಟು, ಸಮಸ್ಯೆಗಳು, ಯುದ್ಧಭೀತಿ, ಭಯೋತ್ಪಾದಕ ಚಟುವಟಿಕೆ, ಮೌಲ್ಯರಹಿತರಾಜಕಾರಣ, ಸ್ತ್ರೀಶೋಷಣೆ, ರಾಜಕೀಯ ಭ್ರಷ್ಟಾಚಾರ, ಸ್ವಾರ್ಥಲಾಲಸೆ ಮೊದಲಾದ ಅನೇಕ ಸಂಗತಿಗಳನ್ನು ಕುರಿತು ತಮ್ಮ ವಿಚಾರಗಳನ್ನು, ಪ್ರತಿಕ್ರಿಯೆಗಳನ್ನು ಮಂಡಿಸಲು ಅಗತ್ಯವಾದಂತಹ ಕಥಾಂತರ ಸಂದರ್ಭಗಳನ್ನು ಕಲ್ಪಿಸಿಕೊಳ್ಳುತ್ತಾರೆ. ಸಿದ್ಧ ಸಂದರ್ಭಗಳನ್ನು ಹೊಸ ನೆಲೆಯಲ್ಲಿ ಸಮಕಾಲೀನ ಸಂದರ್ಭಕ್ಕೆ ಯುಕ್ತವಾಗುವಂತೆ ಮರು ಓದಿಗೆ ಒಳಪಡಿಸುತ್ತಾರೆ. ಕೆಲವೊಮ್ಮೆ ಮೂಲ ಕಥಾಲಹರಿಗೆ ಹೊಂದುವಂತೆ ಹೊಸ ಸಂದರ್ಭಗಳನ್ನು ಕಲ್ಪಿಸುತ್ತಾರೆ. ಅವರ ಈ ಎಲ್ಲಾ ಉಪಕ್ರಮಗಳ ಹಿಂದೆ ಇರುವುದು ರಾಮಾಯಣವನ್ನು ಹೊಸನೆಲೆಗೆ, ಹೊಸಅರ್ಥಕ್ಕೆ, ಹೊಸ ವೈಚಾರಿಕ ವಿನ್ಯಾಸಗಳಿಗೆ ಒಪ್ಪುವ ರೀತಿಯಲ್ಲಿ ಪುನಾರಚಿಸುವುದು. ಮೊಯಿಲಿಯವರ ಕಾವ್ಯದ, ಕಾವ್ಯಾತ್ಮಕ ಘನತೆಯ ನೆಲೆ ಏನೇ ಇರಲಿ; ಅದು ನಿರ್ಮಿಸಿಕೊಳ್ಳುವ ವೈಚಾರಿಕ ಭಿತ್ತಿ ಬೆರಗು ಹುಟ್ಟಿಸುವಷ್ಟು ಸೋದ್ದಿಶ್ಯವಾಗಿದೆ. ಅದು ಕಾಣುವ ಕನಸು ಆದರ್ಶನೆಲೆಯದಾಗಿದ್ದು, ಆ ಕನಸಿನ ಹಿಂದಿರುವ ಪ್ರಾಮಾಣಿಕ ತುಡಿತ ಮೊಯಿಲಿಯವರ ಶ್ರೀರಾಮಾಯಣ ಮಹಾನ್ವೇಷಣಂ ಕಾವ್ಯಕ್ಕೆ ವಿಶಿಷ್ಟವಾದ ಸ್ಥಾನವನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಲ್ಪಿಸುತ್ತದೆ.

## ಟಿಪ್ಪಣಿ

೧. ಕುವೆಂಪು ಸಮಗ್ರ ಗದ್ಯ : ಸಂಪುಟ-೩, ಪುಟ-೧೦೩೧

೨. ಕುವೆಂಪು : ಶ್ರೀರಾಮಾಯಣದರ್ಶನಂ, ಅರ್ಪಣೆ ಪುಟ-೭

೩. ಡಾ.ಜಿ.ಎಸ್.ಶಿವರುದ್ರಪ್ಪ : ಕುವೆಂಪು ಪುನರಾಲೋಕನ, ಪುಟ-೫೮

೪. ಕುವೆಂಪು ಸಮಗ್ರ ಗದ್ಯ : ಸಂಪುಟ-೨, ಪುಟ-೩೮೩, ೩೮೪

೫. ಕುವೆಂಪು : ಶ್ರೀರಾಮಾಯಣದರ್ಶನಂ, ಅರ್ಪಣೆ ಪುಟ-೮

೬. ಡಾ.ಜಿ.ಎಸ್.ಶಿವರುದ್ರಪ್ಪ : ಕುವೆಂಪು ಪುನರಾಲೋಕನ, ಪುಟ-೮೬, ೮೭

೭. ಕುವೆಂಪು : ಶ್ರೀರಾಮಾಯಣ ದರ್ಶನಂ, ಅಯೋಧ್ಯಾ ಸಂಪುಟಂ, ಸಂಚಿಕೆ-೩, ಪುಟ-೬೦, ೬೧

೮. ಕುವೆಂಪು : ಸಮಗ್ರಗದ್ಯ, ಸಂಪುಟ-೧, ಪುಟ-೨೨

೯. ಕುವೆಂಪು : ಶ್ರೀರಾಮಾಯಣದರ್ಶನಂ, ಅಯೋಧ್ಯಾ ಸಂಪುಟ, ಸಂಚಿಕೆ-೭, ಪುಟ-೧೩೨

೧೦. ಅದೇ : ಸಂಚಿಕೆ – ೩, ಪುಟ-೪೨

೧೧. ಅದೇ : ಸಂಚಿಕೆ – ೮, ಪುಟ-೧೬೧

೧೨. ಅದೇ : ಲಂಕಾಸಂಪುಟ ಸಂಚಿಕೆ – ೧೧, ಪುಟ-೬೨೦

೧೩. ಅದೇ : ಲಂಕಾಸಂಪುಟ ಸಂಚಿಕೆ – ೭, ಪುಟ-೫೭೧

೧೪. ನರಹಳ್ಳಿ ಬಾಲಸುಬ್ರಹ್ಮಣ್ಯ : ಕುವೆಂಪು ಕಾವ್ಯ ಸಂಸ್ಕೃತಿ ಚರಿತ್ರೆಯ ರೂಪಕ, ಪುಟ-೧೮೨

೧೫. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಶ್ರೀರಾಮಪಟ್ಟಾಭಿಷೇಕ, ಮುನ್ನುಡಿ-೩

೧೬. ಪ್ರೊ.ಗೋಪಾಲಕೃಷ್ಣ ಅಡಿಗ : ರಾಮನವಮಿ-ಶ್ರೀನಿವಾಸ ಮಾಸ್ತಿ ಸಂಭಾವನಾ ಗ್ರಂಥ, ಪುಟ-೧೯೫, ೨೦೧

೧೭. ಎಲ್.ಎಸ್.ಶೇಷಗಿರಿರಾವ್ : ಮಾಸ್ತಿ ಜೀವನ ಮತ್ತು ಸಾಹಿತ್ಯ, ಪುಟ-೨೦೨, ೨೦೩

೧೮. ಅದೇ : ಪುಟ-೨೦೨

೧೯. ಡಾ.ಸಿ.ಪಿ.ಸಿದ್ಧಾಶ್ರಮ : ಮಾಸ್ತಿಯವರ ಕಾವ್ಯ ಒಂದು ಅಧ್ಯಯನ, ಪುಟ-೨೩೭

೨೦. ಡಾ.ಎಸ್.ವಿದ್ಯಾಶಂಕರ್ : ಮೊಯಿಲಿಯವರ ಮಹಾನ್ವೇಷಣೆ; ಸ್ವರೂಪ, ಸಾಧ್ಯತೆ; ಅನ್ವೇಷಣೆ (ಸಂ) ಡಾ.ಎಚ್.ಟಿ.ಪೋತೆ, ಪುಟ-೭

೨೧. ಎಂ.ವೀರಪ್ಪಮೊಯಿಲಿ : ಮಹಾನ್ವೇಷಣೆಯ ಮುಂಬೆಳಗು

೨೨. ಎಂ.ವೀರಪ್ಪಮಯಿಲಿ : ಶ್ರೀರಾಮಾಯಣ ಮಹಾನ್ವೇಷಣಂ, ಪ್ರಸ್ತಾನ-೧, ಪುಟ-೯

೨೩. ಡಾ.ಎಸ್.ವಿದ್ಯಾಶಂಕರ್ : ಮೊಯಿಲಿಯವರ ಮಹಾನ್ವೇಷಣೆ: ಸ್ವರೂಪ, ಸಾಧ್ಯತೆ; ಅನ್ವೇಷಣೆ (ಸಂ)ಡಾ.ಎಚ್.ಟಿ.ಪೋತೆ, ಪುಟ-೯, ೧೦

೨೪. ೨೫. ೨೬. ಎಂ.ವೀರಪ್ಪಮೊಯಿಲಿ : ಮಹಾನ್ವೇಷಣೆಯ ಮುಂಬೆಳಗು, ಪುಟ-xiii, xvi

೨೭. ಅದೇ : ಪ್ರಸ್ಥಾನ-೧೮, ಪುಟ-೧೫೯

೨೮. ಅದೇ ಪ್ರಸ್ಥಾನ-೪೨, ಪುಟ-೪೩೪

೨೯. ಅದೇ ಪ್ರಸ್ಥಾನ-೧, ಪುಟ-೨೧

೩೦. ಶ್ರೀ ರಾಮಾಯಣ ಮಹಾನ್ವೇಷಣಂ ಪ್ರಥಮ ಸೋಪಾನ ಪ್ರಸ್ಥಾನ-೨೪, ಪುಟ-೨೨೧

೩೧. ಡಾ.ಶಾಂತಿನಾಥ ದಿಬ್ಬದ : ಮೊಯಿಲಿಯವರ ಮಹಾನ್ವೇಷಣೆಯ ಪರಿಕಲ್ಪನೆ 'ಅನ್ವೇಷಣೆ' ಸಂ.ಡಾ.ಎಚ್.ಟಿ.ಪೋತೆ, ಪುಟ-೧೮

೩೨. ಅದೇ : ಪ್ರಸ್ಥಾನ-೧೬, ಪುಟ-೧೪೫, ೧೪೬

೩೩. ಅದೇ : ಪ್ರಸ್ಥಾನ-೧, ಪುಟ-೧೭

೩೪. ಅದೇ : ಪ್ರಸ್ಥಾನ-೯, ಪುಟ-೮೭

೩೫. ಅದೇ : ಪ್ರಸ್ಥಾನ-೪೩, ಪುಟ-೪೩೩

೩೬. ಅದೇ : ಪ್ರಸ್ಥಾನ-೧೪, ಪುಟ-೧೧೯

೩೭. ಅದೇ : ಪ್ರಸ್ಥಾನ-೨೦, ಪುಟ-೧೮೧, ೧೮೨

೩೮. ಅದೇ : ಪ್ರಸ್ಥಾನ-೪೫, ಪುಟ-೪೬೭

# ಅಧ್ಯಾಯ – ೫

## ಆಧುನಿಕ ರಾಮಾಯಣ ಕಥಾಪರಂಪರೆಯ ಕಾವ್ಯಕೃತಿಗಳ ದರ್ಶನಮೀಮಾಂಸೆ

ರಾಮಾಯಣ ಮತ್ತು ಮಹಾಭಾರತಗಳು ಕೇವಲ ಕಾವ್ಯಕೃತಿಗಳೆಂದು ತಿಳಿಯುವಂತಿಲ್ಲ. ಭಾರತವು ತನ್ನ ಸಮಷ್ಟಿಪ್ರಜ್ಞೆಯ ಅಭಿವ್ಯಕ್ತಿಗಾಗಿ ಕಂಡುಕೊಂಡ ವಿಶಿಷ್ಟ ಭಾಷೆಗಳು ಅವು. ಈ ಭಾಷೆಗಳ ಮೂಲಕ ಕಾಲಕಾಲಕ್ಕೆ, ಭಾರತೀಯ ಯುಗಪ್ರಜ್ಞೆಯು ತನ್ನ ಆಂತರ್ಯದ ತುಡಿತಗಳನ್ನು ಪ್ರಕಟಿಸುತ್ತಾ ಬಂದಿದೆ. ಈ ದೃಷ್ಟಿಯಲ್ಲಿ ರಾಮಾಯಣ ಮಹಾಭಾರತಗಳು ನಮ್ಮ ದೇಶವು ಸೃಷ್ಟಿಸಿದ ಎರಡು ಭಾಷಾ ವ್ಯವಸ್ಥೆಗಳೆಂದೇ ಹೇಳಬಹುದು.

ಪ್ರಾಚೀನ ಕಾಲದಿಂದಲೂ ರಾಮಾಯಣ, ಮಹಾಭಾರತಗಳು ಸಂಸ್ಕೃತ ಮತ್ತು ಪ್ರಾಂತೀಯ ಭಾಷೆಗಳಲ್ಲಿ ಯುಗದ ಅಗತ್ಯಕ್ಕೆ ತಕ್ಕಂತೆ ಮತ್ತೆ ಮತ್ತೆ ಅವತರಿಸುತ್ತಾ ಬಂದಿವೆ. ಈ ಅವತರಣದ ಸರಪಳಿಯು ಆಧುನಿಕ ಸಂದರ್ಭದಲ್ಲಿಯೂ ತ್ರುಟಿತವಾಗಿಲ್ಲವೆಂಬುದು ವಿಶೇಷ ಮಾತಾಗಿದೆ. ನಾವು ಈ ಹಿಂದಿನ ಪ್ರಕರಣಗಳಲ್ಲಿ ಸಂಸ್ಕೃತ ಮತ್ತು ಇತರ ಪ್ರಾಂತೀಯ ಭಾಷೆಗಳಲ್ಲಿ ಬೇರೆ ಬೇರೆ ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಪ್ರಭಾವಗಳಿಂದ ರಾಮಾಯಣ, ಮಹಾಭಾರತಗಳು ಕಾವ್ಯಗಳಾಗಿ ನಾಟಕಗಳಾಗಿ ಗೀತೆಗಳಾಗಿ ಮತ್ತೆ ಮತ್ತೆ ಕಾಣಿಸಿಕೊಂಡಿದ್ದನ್ನು ಗಮನಿಸಿದ್ದೇವೆ. ಈ ಎಲ್ಲ ವಿಭಿನ್ನ ರಾಮಾಯಣ ಪರಂಪರೆಗಳ ಪ್ರಭಾವ ಒಂದು ಕಡೆಯಾದರೆ, ವಾಲ್ಮೀಕಿ ವಿರಚಿತ ಮೂಲ ರಾಮಾಯಣ ಕಾವ್ಯವನ್ನು ಪ್ರಕ್ಷೇಪಗಳ ಕಸದಿಂದ ಬೇರ್ಪಡಿಸಿ ಮೂಲದ ಶುದ್ಧ ರೂಪವನ್ನು ಶೋಧಿಸಬೇಕೆಂಬ ತುಡಿತ ಇನ್ನೊಂದು ಕಡೆ. ಆಧುನಿಕ ರಾಮಾಯಣಗಳನ್ನೇ ದೃಷ್ಟಿಯಲ್ಲಿಟ್ಟುಕೊಂಡು ಹೇಳುವುದಾದರೆ, ಕುವೆಂಪು ಅವರ ಶ್ರೀರಾಮಾಯಣದರ್ಶನಂ ಮತ್ತು ವೀರಪ್ಪಮೊಯಿಲಿಯವರ ಶ್ರೀರಾಮಾಯಣ ಮಹಾನ್ವೇಷಣಂ ಕಾವ್ಯಗಳು, ಭಾರತೀಯವಾದ ವಿಭಿನ್ನ ರಾಮಾಯಣ ಪರಂಪರೆಗಳನ್ನು ಹಿನ್ನೆಲೆಯಲ್ಲಿಟ್ಟುಕೊಂಡು ಸಮಕಾಲೀನ ಸಂದರ್ಭಕ್ಕೆ ಯುಕ್ತವಾಗುವಂತೆ ಆಧುನಿಕ ಯುಗಧ್ವನಿಗೆ ಅಭಿವ್ಯಕ್ತಿಕೊಡುವ ಆಶಯದಿಂದ ಹೊಸ ರಾಮಾಯಣ ಕೃತಿಗಳ ಅವತರಣವನ್ನು ಅವಾಹಿಸುವ ಧೀಮಂತ ಯತ್ನಗಳಾಗಿವೆ. ಕುವೆಂಪು ಅವರು ಭಾರತೀಯ ರಾಮಾಯಣ ಪರಂಪರೆಯಿಂದ ಮಾತ್ರವಲ್ಲ, ಜಾಗತಿಕ ನೆಲೆಯ ಮಹಾಕಾವ್ಯ ಪರಂಪರೆಯಿಂದಲೂ ಪ್ರಭಾವ,

ಪ್ರೇರಣೆಗಳನ್ನು ಪಡೆದಿದ್ದಾರೆ. ಇನ್ನೊಂದು ಕಡೆ ವೀರಪ್ಪಮೊಯಿಲಿಯವರು ಜಾಗತಿಕ ಕಾವ್ಯ ಪರಂಪರೆಗಳಿಗಿಂತ ಹೆಚ್ಚಾಗಿ ಭಾರತೀಯ ರಾಮಾಯಣ ಪರಂಪರೆಗಳನ್ನು ಆಧಾರವಾಗಿಟ್ಟುಕೊಂಡು ಅದರಲ್ಲೂ ವಿಶೇಷವಾಗಿ ವಾಲ್ಮೀಕಿ ಪ್ರಣೀತ ಆದಿಕಾವ್ಯವನ್ನು ತಮ್ಮ ಧ್ಯಾನದ ಕೇಂದ್ರವಾಗಿರಿಸಿಕೊಂಡು ಸದ್ಯಕಾಲೀನ ರಾಜಕೀಯ ಮತ್ತು ಸಾಮಾಜಿಕ ಒತ್ತಡಗಳಿಗೆ ಧ್ವನಿ ಕೊಡಲೇಬೇಕೆಂಬ ವೀರನಿಷ್ಠೆಯಿಂದ ರಾಮಾಯಣವನ್ನು ಮತ್ತೆ ಸೃಷ್ಟಿಸಿದ್ದಾರೆ. ಮೊಯಿಲಿಯವರ ಕಾವ್ಯದಲ್ಲಿ, ಕುವೆಂಪು ಅವರ ಕಾವ್ಯದಲ್ಲಿ ಕಾಣುವಂತಹ ಕಾವ್ಯಾತ್ಮಕ ಘನತೆ ಮತ್ತು ಆಧ್ಯಾತ್ಮಿಕ ತುಡಿತಗಳು ಕಾಣಿಸದಾಗಿದೆ. ಕನ್ನಡ ವಿಮರ್ಶೆ ಕಾಲ ಕಾಲಕ್ಕೆ ಈ ಬಗ್ಗೆ ಸ್ಪಂದಿಸುತ್ತಾ ಬಂದಿದೆ. ಆಧುನಿಕ ಸಂದರ್ಭದಲ್ಲಿ ನಾವು ಕಂಡ ಮತ್ತೊಂದು ಮಹತ್ವದ ಕೃತಿ ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಅವರ ಶ್ರೀರಾಮಪಟ್ಟಾಭಿಷೇಕ. ಈ ಕಾವ್ಯವು ವೈದಿಕೇತರವಾದ ರಾಮಾಯಣ ಪರಂಪರೆಗಳನ್ನು ತನ್ನ ಚಿಂತನೆಯ ಕೇಂದ್ರವನ್ನಾಗಿ ಮಾಡಿಕೊಳ್ಳುವುದಿಲ್ಲ. ಬೇರೆ ಬೇರೆ ಪರಂಪರೆಗಳನ್ನು ಅದು ಗಮನಿಸಿದೆ ನಿಜ. ಆದರೆ ಆ ಕಾವ್ಯದ ಪ್ರಧಾನ ಆಸಕ್ತಿ ಕೇಂದ್ರ, ಆದಿಕವಿ ವಾಲ್ಮೀಕಿ ವಿರಚಿತ ರಾಮಾಯಣಕೃತಿಯೇ ಆಗಿದೆ. ಮೂಲ ರಾಮಾಯಣ ಮೊದಲಿದ್ದಂತೆ ಈಗ ಉಳಿದಿಲ್ಲ. ಬಾಲಿಶವೆನ್ನಬಹುದಾದ (ಅದು ಮಾಸ್ತಿಯವರದ್ದೇ ಮಾತು) ಪವಾಡ ಪ್ರಸಂಗಗಳಿಂದ ನಂಬಿಕೆಗೆ ಅರ್ಹವಾಗದ ಅದ್ಭುತರಮ್ಯ ಕಥಾನಕಗಳಿಂದ ಮೂಲಕೃತಿಯು ವಿರೂಪಗೊಂಡಿದೆ. ಆಧುನಿಕ ವೈಚಾರಿಕತೆ, ವೈಜ್ಞಾನಿಕತೆ ಈ ದೃಷ್ಟಿಗಳಿಂದ ರಾಮಾಯಣವನ್ನು ಮತ್ತೆ ಶೋಧಿಸಿ ಮೂಲದಲ್ಲಿ ರಾಮಾಯಣವು ಹೇಗೆ ರಚಿತವಾಗಿರಬಹುದು ಎನ್ನುವುದನ್ನು ಕಂಡುಕೊಳ್ಳುವ ಯತ್ನವನ್ನು ಮಾಸ್ತಿಯವರು ತಮ್ಮ ಕಾವ್ಯದಲ್ಲಿ ಮಾಡುತ್ತಾರೆ. ಹೀಗೆ ಮೂವರು ವಿಭಿನ್ನ ಮನೋಧರ್ಮದ ಕವಿಗಳ ದರ್ಶನ ಮೀಮಾಂಸೆಯು ಮೂರು ವಿಭಿನ್ನ ಕಾವ್ಯಕೃತಿಗಳ ನಿರ್ಮಾಣಕ್ಕೆ ದಾರಿಮಾಡಿದೆ. ಕುವೆಂಪು ಮತ್ತು ಮಾಸ್ತಿಯವರ ರಾಮಾಯಣ ಕೃತಿಗಳಲ್ಲಿ, ಕಲೆ ಮತ್ತು ದರ್ಶನಗಳು ಹೆಗಲೆಣೆಯಾಗಿ ನಿಂತು ತಮ್ಮ ತಮ್ಮ ಸ್ವಧರ್ಮಕ್ಕೆ ತಕ್ಕಂತೆ ಮತ್ತು ತಕ್ಕಷ್ಟು ಕಾವ್ಯಾನುಭೂತಿಯನ್ನು ನಿರ್ಮಿಸಿವೆ. ಮೊಯಿಲಿಯವರ ಕಾವ್ಯವಾದರೋ ದರ್ಶನ ಮಿಮಾಂಸೆಯ ದೃಷ್ಟಿಯಿಂದ ಉಳಿದ ಕೃತಿಗಳೊಂದಿಗೆ ಹೋಲಿಕೆಗೆ ನಿಲ್ಲುವಂತಹ ಶಕ್ತಿಯನ್ನು ಪಡೆದಿದೆಯಾದರೂ ಭಾಷಾಪ್ರಯೋಗ, ಲಯದನಡೆ, ರೂಪಕ ನಿರ್ಮಾಣದ ಶಕ್ತಿ, ಕಥೆಯನ್ನು ಕಾವ್ಯದ ನೆಲೆಗೆ ಎತ್ತಬಲ್ಲ ಕಾವ್ಯಮೋಡಿ ಈ ಮೊದಲಾದ ಕಲಾದೃಷ್ಟಿಯಿಂದ ಸ್ವಲ್ಪ ಹಿಂದಕ್ಕೆ ನಿಲ್ಲುವ ಕಾವ್ಯವಾಗಿದೆ. ರಾಮಾಯಣವನ್ನು ಆಧ್ಯಾತ್ಮಿಕತೆ, ಧಾರ್ಮಿಕಶ್ರದ್ಧೆ ಮತ್ತು ಆರಾಧನೆಯ ನೆಲೆಯಿಂದ ಬಿಡುಗಡೆಗೊಳಿಸಿ

ಅದನ್ನು ನೂರಕ್ಕೆ ನೂರು ಸಾಮಾಜಿಕ ಮತ್ತು ರಾಜಕೀಯ ಕೃತಿಯಾಗಿ ನಿರ್ಮಿಸುವಲ್ಲಿ ಮೊಯಿಲಿಯವರ ಕಾವ್ಯದ ಘನತೆಯಿದೆ ಎನ್ನಬಹುದು.

ಕುವೆಂಪು, ಮಾಸ್ತಿ ಮತ್ತು ಮೊಯಿಲಿ ಈ ಮೂವರು ಕವಿಗಳು ರಚಿಸಿರುವ ಆಧುನಿಕ ರಾಮಾಯಣ ಕೃತಿಗಳು ರಾಷ್ಟ್ರದ ಮತ್ತು ಜಗತ್ತಿನ ಉತ್ಪಾತ ಮತ್ತು ಆಗುಹೋಗುಗಳಿಗೆ ಕಿವುಡಾಗಿಲ್ಲವೆಂಬುದು ವಿಶೇಷವಾದ ಸಂಗತಿಯಾಗಿದೆ. ಈ ಮೂರು ಕಾವ್ಯಗಳು ಯುದ್ಧವಿರೋಧಿ ಧೋರಣೆಯನ್ನು ಸ್ಪಷ್ಟವಾಗಿ ವ್ಯಕ್ತಪಡಿಸಿವೆ. ವಿಶ್ವದ ಎರಡು ಮಹಾಮಾರಕ ಯುದ್ಧಗಳ ಪರಿಣಾಮಗಳನ್ನು ಲಕ್ಷಿಸಿದ ಮೇಲೆ, ಚಿಂತನಶೀಲವಾದ ಯಾವ ಮನಸ್ಸೂ ಯುದ್ಧ ವೀರಗಳಲ್ಲಿ ರಮಿಸಲಾರದು. ಕುವೆಂಪು ಅವರ ಕಾವ್ಯದಲ್ಲಿ, ಯುದ್ಧ ಅನಿವಾರ್ಯವಾಗಿದ್ದು ಅದು ಎಷ್ಟರಮಟ್ಟಿಗೆ ಸಮರ್ಥನೀಯ ಎಂಬ ಗೊಂದಲದಲ್ಲಿ ಕಥಾನಾಯಕನಾದ ಶ್ರೀರಾಮನು ಪರಿತಪಿಸುವ ಸಂದರ್ಭವಿದೆ. ತನ್ನ ಮತ್ತು ಸೀತೆಯ ಭವಿಷ್ಯದ ಅನಿಶ್ಚಿತ ಸಂತೋಷಕ್ಕಾಗಿ ಲಕ್ಷಾಂತರ ಮಂದಿವೀರರನ್ನು ಯುದ್ಧದ ಅಗ್ನಿಗೆ ಆಜ್ಯವಾಗಿಸುವುದು ಯುಕ್ತವಾದೀತೆ ಎಂದು ಶ್ರೀರಾಮ ಸಂದೇಹವನ್ನು ವ್ಯಕ್ತಪಡಿಸುತ್ತಾನೆ. ಯಾರ ವಿಮುಕ್ತಿಗಾಗಿ ರಾಮ-ರಾವಣ ತನ್ಮೂಲಕ ವಾನರ, ರಾಕ್ಷಸ ಯೋಧರ ಮಹಾಕದನವು ಉಂಟಾಯಿತೋ ಅಂತಹ ಸೀತೆಯು ಸಹ ಅಶೋಕ ವನದಲ್ಲಿ ಈ ಯುದ್ಧದಿಂದ ಅದೆಷ್ಟು ಜನ ವಾನರ ಮತ್ತು ರಾಕ್ಷಸ ಮುತ್ತೈದೆಯರು ತಮ್ಮ ಮಾಂಗಲ್ಯವನ್ನು ಕಳೆದುಕೊಳ್ಳುತ್ತಾರೋ ಎಂದು ಆತಂಕ ವ್ಯಕ್ತಪಡಿಸುತ್ತಾಳೆ.

ಆಧುನಿಕ ಜಾಗತಿಕ ಸಂದರ್ಭದಲ್ಲಿ ದೊಡ್ಡ ಪಿಡುಗಾಗಿ ಪರಿಣಮಿಸಿರುವ ಭಯೋತ್ಪಾದಕ ಚಟುವಟಿಕೆಗಳನ್ನು ಮೊಯಿಲಿಯವರ ಕಾವ್ಯ ಪ್ರಸ್ತಾಪಿಸುವುದು ಮಾತ್ರವಲ್ಲ, ಆ ಬಗ್ಗೆ ತನ್ನ ವಿರೋಧಿ ಆಶಯವನ್ನು ಖಚಿತವಾದ ನೆಲೆಯಲ್ಲಿ ವ್ಯಕ್ತಪಡಿಸುತ್ತದೆ. ದಂಡಕಾರಣ್ಯದ ರಾಕ್ಷಸರ ಚಟುವಟಿಕೆಗಳು, ಆತಂಕಕಾರಿ ಭಯೋತ್ಪಾದಕ ಚಟುವಟಿಕೆಗಳಾಗಿ ಮೊಯಿಲಿಯವರ ಕಾವ್ಯದಲ್ಲಿ ಅರ್ಥಾಂತರವನ್ನು ಪಡೆಯುತ್ತದೆ. ರಾಜಕೀಯಭ್ರಷ್ಟಾಚಾರ, ಸ್ವಾರ್ಥ ಕೆಳವರ್ಗದ ಶೋಷಣೆ ಬುಡಕಟ್ಟಿನ ಜನಾಂಗದ ಒಕ್ಕಲೆಬ್ಬಿಸುವಿಕೆ ಈ ಮೊದಲಾದ ಸಮಾಕಾಲೀನ ಪಿಡುಗುಗಳನ್ನು ರಾಮಾಯಣದ ಮೂಲಕ ಮೊಯಿಲಿಯವರು ಪ್ರಜ್ಞೆಯ ಕೇಂದ್ರಕ್ಕೆ ತರುತ್ತಾರೆ. ಸ್ತ್ರೀಪರವಾದ ಧೋರಣೆಯಂತೂ ಮೂರು ಕಾವ್ಯಗಳಲ್ಲಿ ಸಮಾನವಾಗಿ ಕಂಡುಬರುತ್ತದೆ. ಸೀತೆ, ಊರ್ಮಿಳ, ಮಂಡೋದರಿ ಮೊದಲಾದ

ಪಾತ್ರಗಳನ್ನು ಸಹಜವಾದ ಮಾನವೀಯ ಅನುಕಂಪ ಮತ್ತು ವ್ಯಕ್ತಿಗೌರವದ ನೆಲೆಯಲ್ಲಿ ಈ ಕಾವ್ಯಗಳು ಮೂಡಿಸುತ್ತವೆ. ಸೀತೆಯ ಅಗ್ನಿಪ್ರವೇಶ ಸಂದರ್ಭವನ್ನು ಶ್ರೀರಾಮಾಯಣದರ್ಶನಂ, ಶ್ರೀರಾಮಪಟ್ಟಾಭಿಷೇಕ ಮತ್ತು ಶ್ರೀರಾಮಾಯಣ ಮಹಾನ್ವೇಷಣಂ ಕಾವ್ಯಗಳು ಹೇಗೆ ಚಿತ್ರಿಸಿದೆ ಎಂಬುದನ್ನು ತುಲನಾತ್ಮಕವಾಗಿ ನೋಡುವುದು ಕಣ್ಣು ತೆರೆಸುವ ಅನುಭವವಾಗಬಲ್ಲದು.

ಶ್ರೀರಾಮ ಪಟ್ಟಾಭಿಷೇಕ ಕಾವ್ಯದಲ್ಲಿ ಸೀತೆಯ ಅಗ್ನಿಪ್ರವೇಶದ ಸಂದರ್ಭವನ್ನು ಮಾಸ್ತಿಯವರು ಚಿತ್ರಿಸಿರುವ ಕ್ರಮ ಹೀಗಿದೆ. ವಿಭೀಷಣನು ಶ್ರೀರಾಮನಿಗೆ ಸೀತಾದೇವಿಯನ್ನು ಪ್ರಭುಗಳು ಇರುವ ಕಡೆ ಕರೆತರಲು ಅಪ್ಪಣೆ ಬೇಡುತ್ತಾನೆ. ಶ್ರೀರಾಮನು ಅದಕ್ಕೆ ಸಮ್ಮತಿಸಿ ದೇವಿಯು ಮಜ್ಜನಮಾಡಿ ದಿವ್ಯವಾದ ಒಡವೆ ವಸ್ತ್ರಗಳನ್ನು ಧರಿಸಿ ಇಲ್ಲಿಗೆ ಬರಲಿ ಎನ್ನುತ್ತಾನೆ. ಅದರಂತೆ ಸೀತಾದೇವಿ ಅರಮನೆಯ ಶಿಬಿಕೆಯಲ್ಲಿ ಕುಳಿತು ಪರಿವಾರಸಹಿತ ರಾಮನಲ್ಲಿಗೆ ಬರುತ್ತಾಳೆ. ರಾಮನ ಸುತ್ತ ಸಾವಿರಾರು ಜನ ಯೋಧರು ನೆರೆದಿರುತ್ತಾರೆ. ಅವರೆದುರಿಗೆ ರಾಮನನ್ನು ನೋಡಲು ಸೀತೆ ಸಂಕೋಚ ಪಡುತ್ತಾಳೆ. ವಿಭೀಷಣ ಚಾರರಿಗೆ ಹೇಳಿ ಗುಂಪನ್ನು ಅತ್ತಿತ್ತ ಸರಿಸುತ್ತಾ ಇರುವಾಗ ರಾಮನು ಅದು ಕೂಡದು ಎಂದು ಹೇಳುತ್ತಾನೆ. ಹೆಣ್ಣಿನ ಗೌರವವನ್ನು ಕಾಪಾಡುವುದು ಆಕೆಯ ಶೀಲ. ತೆರೆ, ಮುಸುಕು, ಮರೆ, ಕಾಪು, ಏಕಾಂತಗಳು ಅಲ್ಲ. ಇವರೆಲ್ಲ ಸಹೃದಜನ. ಇವರೆದುರಿಗೆ ಕಾಣುವುದು ಗೌರವಕ್ಕೆ ಕೊರೆಯಲ್ಲ ಎಂದು ಆಜ್ಞೆ ಮಾಡುತ್ತಾನೆ. ರಾಮನ ಮನಸ್ಸಿನಲ್ಲಿರುವ ಬೇಸರ ಈ ಮಾತುಗಳಲ್ಲಿ ವ್ಯಕ್ತವಾಗುತ್ತದೆ. ಅವನ ಮುಖದಲ್ಲಿ ಕ್ರೂರ ಲಕ್ಷಣವೊಂದು ಕಂಡಿತು ಎನ್ನುತ್ತಾರೆ ಮಾಸ್ತಿ. ಸೀತೆ ಜನರ ಗುಂಪಿನಲ್ಲಿ ಹೇಗೋ ಮುಂದುವರಿದು, ಕ್ಷೀಣ ಸ್ವರದಲ್ಲಿ ಒಮ್ಮೆ 'ಆರ್ಯಪುತ್ರ' ಎನ್ನುತ್ತಾಳೆ. ಮುಂದೆ ಯಾವ ಮಾತೂ ಅವಳ ಬಾಯಿಂದ ಬರುವುದಿಲ್ಲ. ಆಗ ರಾಮ ಹೇಳುತ್ತಾನೆ.

**'ಒಂದು ವರುಷದ ದಿನವ ಹಗೆಯ ಅಂತಃಪುರದಿ**
**ಕಳೆದ ಹೆಂಡಿರ ರಾಮ ಒಪ್ಪಿಕೊಂಡನು' ಎಂದು**
**ಜನ ನುಡಿದ ಹಳಿವ ಮಾತಿಗೆ ನಾನು ತಲೆ ಕೊಟ್ಟು**
**ಬಾಳಲೊಲ್ಲೆನು. ಕದ್ದು ತಂದವನ ದೌಷ್ಟ್ಯವನು**
**ದಂಡಿಸುವ ಸಲುವಾಗಿ, ಈ ಯುದ್ಧವನು ನಡೆಸಿ**
**ಹಗೆಯ ಕೊಂದುದು ಆಯ್ತು. ಇದರಿಂದ ನನ್ನ ಈ**
**ವ್ಯವಹಾರದೆಲ್ಲ ಉದ್ದೇಶವೂ ಫಲಿಸುಹುದು.**

**ದೇವಿ ತಮ್ಮಿಚ್ಛೆಯೆಂತಂತೆ ತಮಗೊಪ್ಪಾದ**

**ಎಲ್ಲಿಯೆ ಇರಬಹುದು, ಎಂದು ಒರೆದನು."[7]**

ಇದು ರಾಮನ ನಿಷ್ಠುರವಾದ ನಿಲುವು, ಈ ಮಾತುಗಳಿಂದ ಸೀತೆ ದುಃಖಿತಳಾಗುತ್ತಾಳೆ. ತನ್ನ ಸತ್ಯವ ಕುರಿತು ತನ್ನ ಪತಿ ನುಡಿದ ನುಡಿ ಅಸಂಸ್ಕೃತನಾದ ಗಂಡನೊಬ್ಬ ತನ್ನ ಹೆಂಡತಿಯನ್ನು ಕುರಿತು ಆಡಬಹುದಾದ ಮಾತುಗಳಿಂತಿದೆ ಎಂದುಕೊಳ್ಳುತ್ತಾಳೆ. 'ನಾನು ಅಗ್ನಿಯಹೊಕ್ಕು ಜೀವವನು ನೀಗುವೆನು"[8] ಇದು ಶಪಥ ಎನ್ನತ್ತಾಳೆ. ಲಕ್ಷ್ಮಣನಿಗೆ ಚಿತೆಯನ್ನು ನಿರ್ಮಿಸುವಂತೆ ಹೇಳುತ್ತಾಳೆ. ಇದನ್ನು ಅತ್ತಿಗೆಗೆ ಮಾಡುವ ಅಂತಿಮ ಸೇವೆ ಎಂದು ತಿಳಿ, ಇನ್ನು ಜೀವಿಸುವುದು ನನಗೆ ತರವಲ್ಲ ಎನ್ನುತ್ತಾಳೆ. ಬಹುಕಾಲ ಅಗಲಿದ್ದ ಈ ಪತಿ ಈ ಸತಿ ಮರಳಿ ಕಂಡಾಗ ಸಂತೋಷಪಡುವರು ಎಂದು ಜನ ಭಾವಿಸಿದ್ದರು. ಆದರೆ ಅವರ ನಡುವೆ ನಡೆದ ಈ ರೀತಿಯ ಮಾತುಕಥೆ; ಬಂಧು ಜನ, ಪರಿವಾರ ಜನಕ್ಕೆ ವಿಚಿತ್ರ ಎನಿಸುತ್ತದೆ. ಈ ಕಥೆಯನ್ನು ಭರತನೆದುರಿಗೆ ನಿರೂಪಿಸುತ್ತಿರುವ ಮಾರುತಿ ಆಗ ಹೇಳುವ ಮಾತು "ಇಂಥ ಹದನನೆ ಪೂರ್ವಿಕರು ವಿಧಿವಿಲಾಸ ಎಂದು ಕರೆದಿಹುದು"[9] ಎಂದುಕೊಂಡೆನು ನಾನು. ಇದು ಕೇವಲ ಮಾರುತಿಯ ಪ್ರತಿಕ್ರಿಯೆಯಲ್ಲ ಮಾಸ್ತಿಯವರ ಕಾವ್ಯದ ಪ್ರತಿಕ್ರಿಯೆ ಕೂಡಾ ಹೌದು.

ಲಕ್ಷ್ಮಣನು ಚಿತೆಯನ್ನು ಮಾಡುವುದು ಬೇಡವೆಂದು, ಅಣ್ಣ ಹೇಳಬಹುದೇನೋ ಎಂಬ ಆಸೆಯಿಂದ ದೈನ್ಯಪೂರಿತ ದೃಷ್ಟಿಯಿಂದ ರಾಮನನ್ನು ನೋಡುತ್ತಾನೆ. ಆದರೆ ರಾಮನು ಅವನನ್ನು ತಡೆಯದಿರಲು ಲಕ್ಷ್ಮಣನು ಚಿತೆಯನ್ನು ಸಿದ್ಧಪಡಿಸುತ್ತಾನೆ. ಆಗ ನೀಲನ ಸೂಚನೆಯಂತೆ ಸುಗ್ರೀವನು ರಾಮನೆದುರಿಗೆ ತನ್ನ ಬಿನ್ನಹವನ್ನು ಹೀಗೆ ಮಂಡಿಸುತ್ತಾನೆ.

**"ಪ್ರಭು,**

**ಇಂಥ ವೇಳೆಯಲ್ಲಿ ನಮ್ಮಲ್ಲಿ ದೂರ ಹೊತ್ತ ಜನ**

**ಅಗ್ನಿಯನು ಹೊಕ್ಕು ತಮ್ಮ ಚರಿತ್ರೆ ನಿರ್ದುಷ್ಟ**

**ಎಂದು ತೋರುವ ಒಂದು ಕ್ರಮವಿಹುದು; ಉತ್ತರದ**

**ತಮ್ಮ ಜನರಲ್ಲಿ ಕೂಡ ಇಂಥ ವಾಡಿಕೆ ಒಂದು**

**ಇಹುದೆಂದು ನಾನು ಕೇಳಿದುದುಂಟು. ಇದರೆಲ್ಲ**

ಕ್ರಮವನೂ ನಮ್ಮ ದಳಪತಿ ನೀಲ ಬಲ್ಲರು.
ದೇವಿಯರು ಅಗ್ನಿದೇವರಲಿ ಪ್ರಾಣತ್ಯಾಗ
ಮಾಡ ನಿಶ್ಚಯಿಸಿಹರು. ತ್ಯಾಗವೆಂಬುದು ಬೇಡ'
ನನ್ನ ಸತ್ಯಕ್ಕೆ ಸಾಕ್ಷಿಯಾಗಲಿ ಎಂದು
ಕಿಚ್ಚು ಹೊಕ್ಕರೆ ಸಾಕು, ಹೊಕ್ಕವರು ಅದರಿಂದ
ಸುಕ್ಷೇಮವಾಗಿ ಹೊರಗೈತರಲು ದೇವಿಯರ
ಪಾವಿತ್ರ್ಯ ಸಿದ್ಧವಾಯಿತು, ಇಂತುಗೆಯ್ಯುವರೆ
ಅವರು ನಿಶ್ಚಯ ಮಾಡಬೇಕು; ಎಂದರು."[9]

ಸುಗ್ರೀವನ ಸಲಹೆಯನ್ನು ರಾಮನು ಒಪ್ಪಿಕೊಳ್ಳುತ್ತಾನೆ. ಇದು ಆಗಬಹುದು ಎನ್ನುತ್ತಾನೆ. ಸೀತೆ ಅಗ್ನಿದೇವರಿಗೆ ಕೈಮುಗಿದು 'ನಾನು ಶ್ರೀರಾಮನ ಹೊರತು ಬೇರೆ ಗಂಡಸನ್ನು ಮನದಲ್ಲಿ ನೆನೆದವಳಲ್ಲ. ನನ್ನ ಚರಿತ್ರ ವಿಶುದ್ಧವಾದದ್ದು. ನನ್ನ ಜೀವನ ಕಳಂಕರಹಿತವಾದದ್ದು. ಈ ಸತ್ಯವನ್ನು ಬಲ್ಲ ಅಗ್ನಿದೇವರು ನನ್ನ ಸಂರಕ್ಷಿಸಲಿ ಎಂದು ಹೇಳುತ್ತಾ ಚಿತೆಯನ್ನು ಮೂರು ಸಲ ಬಲವಂದು ಅಗ್ನಿಪ್ರವೇಶ ಮಾಡುತ್ತಾಳೆ. ಸೀತೆಯು ಅಗ್ನಿಯಲ್ಲಿಯೇ ನಿಂತು ಬೆಂದುಹೋಗುತ್ತಾಳೋ ಅಥವಾ ಕೆಂಡವನ್ನು ಹಾಯ್ದು ಹೊರಗೆ ಬರುತ್ತಾಳೋ ಎಂದು ಶ್ರೀರಾಮ ಮೊದಲಾಗಿ ಎಲ್ಲರೂ ಆತಂಕಕ್ಕೆ ಒಳಗಾಗುತ್ತಾರೆ. ಆರೆಂಟು ಕ್ಷಣಗಳಲ್ಲಿ ಸೀತೆ ಅಗ್ನಿಯಿಂದ ಹೊರಗೆ ಬರುತ್ತಾಳೆ. ಎಲ್ಲರೂ ಹರ್ಷಘೋಷ ಮಾಡುತ್ತಾರೆ. ಶ್ರೀರಾಮನು ಸಂತಸದ ನಗುಮುಖದೊಂದಿಗೆ ಕೈಚಾಚಿ ದೇವಿಯನ್ನು ಬರಮಾಡಿಕೊಳ್ಳುತ್ತಾನೆ. ಮರ್ಯಾದೆಗೆ ತೊಂದರೆಯಾದಾಗ ಈ ಮಹಿಳೆ ಸಾಯಲು ಸಿದ್ಧಳಾಗುತ್ತಾಳೆ ಎನ್ನುವುದನ್ನು ಲೋಕಕಾಣಬೇಕು ಎಂದು ನಾನು ನಿಷ್ಠುರವಾದ ಮಾತುಗಳನ್ನು ಆಡಿದೆ. ಸೀತೆ ಅಗ್ನಿದಿವ್ಯವ ಮಾಡಿ, ತನ್ನ ಪಾವಿತ್ರ್ಯವನ್ನು ಸಿದ್ಧಮಾಡಿ ತೋರಿಸಿದಳು ಎನ್ನುತ್ತಾನೆ. ಮಾಸ್ತಿಯವರ ಪಟ್ಟಾಭಿಷೇಕ ಕಾವ್ಯದ ಈ ಅಗ್ನಿಪ್ರವೇಶ ಪ್ರಸಂಗವು ವಾಲ್ಮೀಕಿ ರಾಮಾಯಣವನ್ನು ಅನುಸರಿಸಿದೆ. ಒಂದು ವ್ಯತ್ಯಾಸವೆಂದರೆ ವಾಲ್ಮೀಕಿ ರಾಮಾಯಣದಲ್ಲಿ ಸೀತೆಯು ಅಗ್ನಿಪ್ರವೇಶವನ್ನು ಮಾಡಿದಾಗ ಸಾಕ್ಷಾತ್ ಅಗ್ನಿಯೇ ಆಕೆಯನ್ನು ಹೊರಕ್ಕೆ ಕರೆತಂದು ಅವಳ ಪರಿಶುದ್ಧತೆಯ ಬಗ್ಗೆ ರಾಮನಿಗೆ ತಿಳಿಸುತ್ತಾನೆ. ಅಪ್ರಾಕೃತ ಮತ್ತು ಪವಾಡ ಸದೃಶ ಸಂಗತಿಗಳನ್ನು ಕಾವ್ಯದಲ್ಲಿ ತರಲು ಒಪ್ಪದ ಮಾಸ್ತಿಯವರು ಸೀತೆ ಮಾಡಿದ್ದು 'ಅಗ್ನಿಪ್ರವೇಶ'ವಲ್ಲ 'ಅಗ್ನಿದಿವ್ಯ' ಎಂದು ಬದಲಾಯಿಸಿಕೊಳ್ಳುತ್ತಾರೆ. ಹಾಗೆ ಮಾಡಿ ಅಗ್ನಿಯ ಪ್ರತ್ಯಕ್ಷ ಪ್ರವೇಶವನ್ನು ನಿವಾರಿಸುತ್ತಾರೆ. 'ಅಗ್ನಿದಿವ್ಯ' ಎಂದು ಹೇಳುವುದರಿಂದ ಇಂದು ಸಹ ಕರ್ನಾಟಕದಲ್ಲಿ

ರೂಢಿಯಲ್ಲಿರುವ ಕೆಂಡ ಹಾಯುವ ಧಾರ್ಮಿಕ ಆಚರಣೆಯ ನೆಲೆಗೆ ಸೀತೆಯ ಅಗ್ನಿಪ್ರವೇಶ ಪ್ರಸಂಗವನ್ನು ಬದಲಾಯಿಸಿಕೊಳ್ಳುತ್ತಾರೆ. ಮೂಲದಲ್ಲಿ ಬರುವಂತೆ ಮಾಸ್ತಿ ಕಾವ್ಯದಲ್ಲೂ ಸೀತೆಯನ್ನು ಕುರಿತು ರಾಮ ನಿಷ್ಠುರವಾದ ಮಾತುಗಳನ್ನು ಆಡುತ್ತಾನೆ. ಆದರೆ ಹಾಗೆ ಆಡಿದ್ದಕ್ಕೆ ಕಾರಣ, ಹೊರಜಗತ್ತಿಗೆ ಪಾತಿವ್ರತ್ಯದ ವಿಷಯದಲ್ಲಿ ಸೀತೆ ಎಂತಹ ದೃಢ ಮನಸ್ಕಳಾಗಿದ್ದಳು ಎಂಬುದನ್ನು ತೋರಿಸುವುದೇ ಆಗಿತ್ತು ಎಂದು ತನ್ನ ನಡತೆಯನ್ನು ಸಮರ್ಥಿಸಿಕೊಳ್ಳುತ್ತಾನೆ.

ಶ್ರೀರಾಮಾಯಣ ದರ್ಶನಂ ಕಾವ್ಯದಲ್ಲಿ ಇದೇ ಪ್ರಸಂಗವನ್ನು ಕುವೆಂಪುರವರು ನಿರ್ವಹಿಸುವ ರೀತಿ ತೀರ ಭಿನ್ನವಾಗಿದೆ. ರಾಮನನ್ನು ಕಾಣಲು ಸೀತಾದೇವಿಯು ಶಿಬಿಕೆಯನ್ನೇರಿ ಬರುತ್ತಾಳೆ. ಆಕೆಯನ್ನು ನೋಡುವ ಗಡಿಬಿಡಿಯಲ್ಲಿ ವಾನರಸೇನೆಯಲ್ಲಿ ದೊಡ್ಡ ಕೋಲಾಹಲವೇ ಉಂಟಾಗುತ್ತದೆ. ಆಗ ವಿಭೀಷಣನು ಅವರನ್ನು ಹಿಂದೆ ತಳ್ಳಲು ಕಾವಲುಭಟರಿಗೆ ಆಜ್ಞಾಪಿಸುತ್ತಾನೆ. ಆಗ ರಾಮನ ಮುಖ ರೋಷದಿಂದ ಕರ್ಕಶಮಯವಾಗುತ್ತದೆ. ತನ್ನ ಜನರನ್ನು ನೋಯಿಸಬಾರದೆಂದು ಭೀಷಣಧ್ವನಿಯಲ್ಲಿ ವಿಭೀಷಣನನ್ನು ಗದರಿಸುತ್ತಾನೆ. ಸೀತೆಗಾಗಿ ಇವರೆಲ್ಲ ಎಷ್ಟು ಕಷ್ಟ ಪಟ್ಟಿದ್ದಾರೆ. ಪುತ್ರಸಮಾನರಾದ ಅವರು ಆಕೆಯನ್ನು ನೋಡಿದರೆ ಏನು ತಪ್ಪು? ಗೃಹ ಪ್ರಕಾರ ವಸ್ತ್ರಾದಿಗಳು ಮಾನಿನಿಯ ಮಾನವನ್ನು ಕಾಪಾಡುತ್ತವೆಯೇ? ಹೆಣ್ಣಿನ ಮಾನವನ್ನು ಕಾಪಾಡುವುದು ಶೀಲ ಎನ್ನುವ ಶುಭ್ರಾಂಬರವೇ ಹೊರತು ಬರಿಯ ಅರುವೆಯ ಮರೆಯಲ್ಲ, ಎಂದು ನುಡಿಯುತ್ತಾನೆ. ವಿಭೀಷಣ ಸೀತೆಯನ್ನು ರಾಮನ ಸನ್ನಿಧಿಗೆ ಕರೆತರುತ್ತಾನೆ. ಆಕೆಯನ್ನು ದಾಶರಥಿ ಕಡೆಗಣ್ಣ ಉಪೇಕ್ಷೆಯಿಂದ ನೋಡುತ್ತಾನೆ. ಸೀತೆಯ ಬಾಯಿಂದ 'ಆರ್ಯಪುತ್ರ' ಎಂಬ ಒಂದು ಮಾತು ಮಾತ್ರ ಹೊರಡುತ್ತದೆ. ಆನಂದದಿಂದ ಪತಿಯ ಮುಖವನ್ನು ನೋಡುತ್ತಾಳೆ. ನೋಡಿ ವಿಸ್ಮಯದಿಂದ ಸ್ತಂಭಿತಳಾಗುತ್ತಾಳೆ. ರಾಮನ ಮುಖದಲ್ಲಿ ಎಂದಿನ ಸೌಮ್ಯತೆ ಅವಳಿಗೆ ಕಾಣಿಸುವುದಿಲ್ಲ. ನಿಷ್ಠುರವಾದ ಧ್ವನಿಯಲ್ಲಿ ರಾಮನು ಯುದ್ಧಭೂಮಿಯಲ್ಲಿ ರಾವಣನನ್ನು ಜಯಿಸಿದ್ದೇನೆ. ನನ್ನ ಪೌರುಷ, ತೇಜನನ್ನು ಸಾಧಿಸಿದ್ದೇನೆ. ಅಲ್ಲಿಗೆ ನನ್ನ ಶ್ರಮ ಸಫಲವಾಯಿತು ಎಂದು ಹೇಳಿದವನು ತನ್ನ ಮಾತಿನ ಕೊನೆಯಲ್ಲಿ ಅತ್ಯಂತ ಕಟುವಾಗಿ ಹೀಗೆ ಹೇಳುತ್ತಾನೆ.

**ಸಂದುದು ಪೂಣ್ಕೆ ನನಗೆ. ಕುಲತೇಜಮಂ**
**ಮತ್ತೆನ್ನ ಪುರುಷಾಕಾರನುಳಿಸೆ ಜಯಿಸಿದೆನ್,**
**ಕೊಂದೆನ್ ದಶಗ್ರೀವನಂ ನಿನ್ನಂ ಪಡೆಯಲಲ್ತು..**

ನೀಂ ಸ್ಫುರದ್ರೂಪಿಣಿಯೆ ದಲ್ ! ದಶಾನನಂ ಅವಶಿ;
ದಶರಥಾತ್ಮಜನಲ್ತು ! ತಿಳಿಯುವೊಡೆ ತಿಳಿ ಸುಜ್ಞೆ,
ಪೇಳ್ದ ವಾಕ್ಯಾರ್ಥಮಂ. ಇಲ್ಲದಿರೆ ತೊಲಗು ನಡೆ,
ಮೂರ್ಖೆ, ನೀನೆಲ್ಲಿಗಾದೊಡಮೆನ್ನ ಕಣ್ಮುಂದೆ
ನಿಲ್ಲದಿರ್ ಕಣ್ಬೇನೆಯಿರ್ಪವನಿದಿರ್ ಸೊಡರ್
ಕುಡಿ ವಿಡಿಯದಿರ್!"[೫]

ರಾಮನ ಈ ಕ್ರೂರ ಮಾತುಗಳಿಂದ ನೊಂದ ಸೀತೆ ಹೀಗೆ ನುಡಿಯುತ್ತಾಳೆ.

"ತರವಲ್ಲದೀ
ಕಿವಿಯಿರಿವ ಸೊಲ್ಗಳಂ ಬರಿದೆ ಏತರ್ಕಾಡಿದೈ
ಪ್ರಾಕೃತರ್, ಪ್ರಾಕೃತೆಯರಂ ಬಯ್ವ ಪಾಂಗಿಂದೆ, ನೀಂ
ಇಕ್ಷ್ವಾಕು ರಘುದಿಲೀಪಾದಿ ರಾಜೇಂದ್ರರಂ
ಮಕ್ಕಳೆಂಬುವ ಮಹಾ ರವಿಕುಲದೊಳುತ್ತಮಂ
ತಾನಾಗಿಯುಂ?... ರಾಕ್ಷಸಂ ಮುಟ್ಟಿದನೆ? ನಾನಲ್ತು
ದೈವಮಪರಾಧಿ. ಮೆಯ್ಯನಲ್ಲದೆ ಮನವನೇಂ
ಮುಟ್ಟಿದನೆ? ಮುಟ್ಟಲಾರದೆ ಸುಟ್ಟು ಸೀದನಯ್,"[೬]

ಎಂದು ನುಡಿದು, ಅಗ್ನಿಪ್ರವೇಶಕ್ಕೆ ನಿಶ್ಚಯಿಸಿ ಚಿತೆಯನ್ನು ರಚಿಸುವಂತೆ ಲಕ್ಷ್ಮಣನಿಗೆ ಸೂಚಿಸುತ್ತಾಳೆ. 'ಮಿಥ್ಯಾಪವಾದಕ್ಕೆ ಸಿಕ್ಕಿದ ನನಗೆ, ಸಭಾ ಮಧ್ಯದಲ್ಲಿ ಪ್ರಭುವಿನಿಂದ ತಿರಸ್ಕೃತಳಾದವಳಿಗೆ ಅಗ್ನಿಯೇ ಶರಣು' ಎನ್ನುತ್ತಾಳೆ. ಲಕ್ಷ್ಮಣ ರಾಮನನ್ನು ನೋಡುತ್ತಾನೆ. ರಾಮನಿಂದ ಯಾವುದೇ ಪ್ರತಿಕ್ರಿಯೆ ಬರುವುದಿಲ್ಲ. 'ಏನುಗ್ರನಗ್ರಜನೋ' ಎಂದುಕೊಂಡು ವಾನರರ ಸಹಾಯದಿಂದ ಬೃಹತ್ ಚಿತೆಯನ್ನು ಸಿದ್ಧಗೊಳಿಸುತ್ತಾನೆ. ಸೀತೆಯು ರಾಮನ ಪಾದಗಳನ್ನು ತನ್ನ ಕಣ್ಣೀರಿನಿಂದ ತೊಳೆದು ಕಂಡವರೆಲ್ಲ ಬೆರಗಾಗುವಂತೆ ನಸುನಗುತ್ತಾ ಚಿತೆಯ ಕಡೆ ನಡೆಯುತ್ತಾಳೆ. 'ನಾನು ಪತಿವ್ರತೆಯೇ ಆಗಿದ್ದರೆ, ಪತಿ ಸೇವೆಗಾಗಿ ನನ್ನ ರಕ್ಷಿಸು ಎನ್ನುತ್ತಾ ಚಿತಾಗ್ನಿಯನ್ನು ಮಂಗಳವಾದ ಆಜ್ಯಾಹುತಿಯಂತೆ ಪ್ರವೇಶಿಸುತ್ತಾಳೆ. ಅಲ್ಲಿಯವರೆಗೂ ನಿಷ್ಠುರನೂ, ಶಿಲಾಮೂರ್ತಿಯಂತೆ ನಿಷ್ಪಂದನೂ ಆಗಿ ನಿಂತಿದ್ದ ರಾಮನು ತನ್ನ ಮುಖವು ದೀಪ್ಯಮಾನವಾಗುತ್ತಿರಲು ತಾನೂ ಚಿತೆಯನ್ನು ಪ್ರವೇಶ ಮಾಡುತ್ತಾನೆ. ಅಗ್ನಿಸಾಕ್ಷಿಯಾಗಿ

ಮತ್ತೊಮ್ಮೆ ಸೀತೆಯನ್ನು ಪಾಣಿಗ್ರಹಣ ಮಾಡಿದಂತೆ, ದಿವ್ಯದೇಹದಿಂದ ಶೋಭಿಸುತ್ತಿದ್ದ ಸೀತೆಯ ಸಮೇತ ದಿವ್ಯದೇಹಿಯಾದ ಶ್ರೀರಾಮನು ಚಿತೆಯಿಂದ ಹೊರಗೆ ಬರುತ್ತಾನೆ.

ಇದು ಕುವೆಂಪುರವರ ದರ್ಶನ ಕಾವ್ಯದ ಮಹೋನ್ನತ ಕಾಣಿಕೆ. ಸೀತೆಯ ಅಗ್ನಿಪ್ರವೇಶದ ತನಕ ಮೂಲರಾಮಾಯಣವನ್ನು ಯಥಾವತ್ತಾಗಿ ಅನುಸರಿಸುವ ಶ್ರೀರಾಮಾಯಣದರ್ಶನಂ, ರಾಮನು ಚಿತೆಯನ್ನು ಪ್ರವೇಶಿಸುವ ಅನಿರೀಕ್ಷಿತ ಘಟನೆಯಿಂದ ಒಮ್ಮೆಗೆ ಹೊಸ ಎತ್ತರ ಮತ್ತು ಘನತೆಯನ್ನು ಸಾಧಿಸಿಬಿಡುತ್ತದೆ. ಈ ದೃಶ್ಯವನ್ನು ಡಾ.ಜಿ.ಎಸ್.ಶಿವರುದ್ರಪ್ಪನವರು ಹೀಗೆ ವ್ಯಾಖ್ಯಾನಿಸುತ್ತಾರೆ. ಶ್ರೀರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಕುವೆಂಪು ಚಿತ್ರಿಸಿರುವ ಸೀತೆಯ ಅಗ್ನಿಪ್ರವೇಶದ ಸಂದರ್ಭ, ಈ ಶತಮಾನದ ವೈಚಾರಿಕತೆಗೆ ಒಡ್ಡಿದ ಸಮರ್ಥವಾದ ಪ್ರತೀಕವಾಗಿದೆ. ಇಡೀ ರಾಮಾಯಣದ ಕತೆಯಲ್ಲಿ ಸೀತೆಯ ಅಗ್ನಿಪ್ರವೇಶದ ಸಂದರ್ಭ ಅತ್ಯಂತ ಸೂಕ್ಷ್ಮವೂ ವಿವಾದಗ್ರಸ್ಥವೂ ಆಗಿದೆ. ರಾವಣನಿಂದ ಅಪಹೃತಳಾಗಿ ಅಶೋಕವನದಲ್ಲಿದ್ದ ಸೀತೆಯ ಶೀಲವನ್ನು, ರಾವಣ ವಧೆಯ ನಂತರ ಶಂಕಿಸಿದ ಶ್ರೀರಾಮನ ನಡವಳಿಕೆ ಪ್ರಶ್ನಾರ್ಹವಾಗಿರುವುದು ಮಾತ್ರವಲ್ಲ, ಪುರುಷ ಪ್ರಧಾನ ಸಮಾಜದ ಈ ದೇಶದ ಗಂಡು, ಹೆಣ್ಣನ್ನು ಶತಶತಮಾನಗಳ ಕಾಲದಿಂದ ನಡೆಯಿಸಿಕೊಂಡು ಬಂದ ಅಮಾನೀಯವಾದ ನಿಲುವಿಗೆ ಸಾಕ್ಷಿಯೂ ಆಗಿದೆ. ಕುವೆಂಪು ಈ ಸಂದರ್ಭವನ್ನು ನಿರ್ವಹಿಸುವಲ್ಲಿ ಮೂಲ ರಾಮಾಯಣದ ಎಲ್ಲ ವಿವರಗಳನ್ನೂ ಯಥಾವತ್ತಾಗಿರಿಸಿಕೊಂಡೂ, ಅತ್ಯಂತ ಮಹತ್ವದ ಬದಲಾವಣೆಯೊಂದನ್ನು ಮಾಡಿಕೊಳ್ಳುವುದರ ಮೂಲಕ, ಇಡೀ ಸನ್ನಿವೇಶದ ಚಹರೆಯನ್ನೇ ಮಾರ್ಪಾಡಿಸಿದ್ದಾರೆ. ಅದೇನೆಂದರೆ, ಸೀತೆ ಅಗ್ನಿಪ್ರವೇಶ ಮಾಡುತ್ತಿದ್ದ ಹಾಗೆಯೇ ಶ್ರೀರಾಮನು ತಾನು ಅವಳ ಜತೆಗೆ ಪ್ರವೇಶಿಸಿ, ಸೀತೆಯೊಂದಿಗೆ ತನ್ನನ್ನೂ ಅಗ್ನಿಪರೀಕ್ಷೆಗೆ ಒಳಗುಪಡಿಸಿಕೊಂಡು, ಅವಳ ಕೈ ಹಿಡಿದುಕೊಂಡು ಆ ಅಗ್ನಿಯಿಂದ ಹೊರಕ್ಕೆ ಬರುತ್ತಾನೆ. ಇದರರ್ಥವೇನೆಂದರೆ ದಾರುಣವಾದ ಪರೀಕ್ಷೆಗೆ ಒಳಗಾಗಬೇಕಾದ ಸಂದರ್ಭ ಬಂದಾಗ, ಹೆಣ್ಣಿನ ಹಾಗೆಯೇ ಗಂಡೂ ಆ ಪರೀಕ್ಷೆಗೆ ಒಳಗಾಗ ತಕ್ಕದ್ದು ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಅಗತ್ಯವಾದದ್ದು. ಗಂಡಾದವನು ಹೆಣ್ಣಿನ ಶೀಲವನ್ನು ಶಂಕಿಸಲು ಅಧಿಕಾರವಿರುವುದಾದರೆ, ಹೆಣ್ಣಿಗೂ ಗಂಡಿನ ಶೀಲವನ್ನು ಶಂಕಿಸುವ ಅಧಿಕಾರವಿರಬೇಕು. ಹಾಗಿದ್ದರೆ ಅದು ದಾಂಪತ್ಯ, ಅದು ಸಮಾನತೆ, ಅದು ನಿಜವಾದ ಪ್ರೇಮ. ಇಷ್ಟೂ ಸಂಗತಿಗಳನ್ನು ಸೀತೆಯ ಅಗ್ನಿಪ್ರವೇಶ ಸಂದರ್ಭವನ್ನು ಕುವೆಂಪು ಅವರು ಚಿತ್ರಿಸಿರುವ ಕ್ರಮ ಒಳಗೊಳ್ಳುತ್ತದೆ".[೭]

ಇದೇ ಅಗ್ನಿಪ್ರವೇಶ ಸನ್ನಿವೇಶವನ್ನು ಮೊಯಿಲಿಯವರು ತಮ್ಮ ಕಾವ್ಯದಲ್ಲಿ ಚಿತ್ರಿಸಿರುವ ಬಗೆಯನ್ನು ಗಮನಿಸೋಣ, ರಾವಣನ ವಧೆಯ ನಂತರ ಶ್ರೀರಾಮನು ವಿಭೀಷಣನಿಗೆ ಲಂಕೆಯ ಪಟ್ಟಗಟ್ಟಲು ನಿರ್ಧರಿಸುತ್ತಾನೆ. ಆದರೆ ವಿಭೀಷಣ ಒಪ್ಪುವುದಿಲ್ಲ. ತಾನು ಪಟ್ಟವೇರಿದರೆ ಸಿಂಹಾಸನದ ಆಸೆಗಾಗಿ ವಿಭೀಷಣನು ರಾಮನ ಪಕ್ಷ ಸೇರಿದನು ಎಂದು ಜನ ಆಡಿಕೊಳ್ಳಬಹುದು. ನನಗೆ ರಾಜ್ಯದ ಮೋಹವಿಲ್ಲ. ರಾಮನೊಂದಿಗೆ ಅಯೋಧ್ಯೆಗೆ ತೆರಳಿ ನಂದಿಗ್ರಾಮದಲ್ಲಿ ತಪಸ್ಸಿಗೆ ತೊಡಗಿ ಅಣ್ಣನ ಕೊಲೆಗೆ ಕಾರಣನಾದ ದೋಷವನ್ನು ದಗ್ಧಗೊಳಿಸಿಕೊಳ್ಳುತ್ತೇನೆ. ಭ್ರಾತೃದ್ರೋಹಕ್ಕೆ ತಕ್ಕ ಪ್ರಾಯಶ್ಚಿತ್ತವಾಗಬೇಕಾದರೆ ವಜ್ರಾರಿ ಲಂಕೆಯ ದೊರೆಯಾಗಬೇಕು ಮಂಡೋದರಿಯೇ ರಾಜಮಾತೆಯಾಗಬೇಕು. ಇದು ವಿಭೀಷಣನ ಸಂಕಲ್ಪ. ಹೀಗೆ ವಿಭೀಷಣನು ಸಿಂಹಾಸನ ತ್ಯಾಗ ಮಾಡಿದ ಮೇಲೆ ರಾಮನು, ವಜ್ರಾರಿಯ ಪಟ್ಟಾಭಿಷೇಕಕ್ಕೆ ಏರ್ಪಾಟುಮಾಡುತ್ತಾನೆ. ಈ ಪಟ್ಟಾಭಿಷೇಕವು ತುರ್ತಾಗಿ ಆಗಬೇಕಾಗಿದೆ. ಗಡುವು ಮೀರುವುದರೊಳಗಾಗಿ ಸೀತೆ ಮತ್ತು ಭರತರನ್ನು ರಾಮ ನೋಡಲೇಬೇಕು. ಇಲ್ಲವಾದರೆ ಅವರಿಬ್ಬರೂ ಅಗ್ನಿಪ್ರವೇಶ ಮಾಡಬಹುದು. ಈ ಆತಂಕದಿಂದ ವಜ್ರಾರಿಯ ಪಟ್ಟವಾದ ಕೂಡಲೇ ಸೀತಯೇನಾದಳೋ ಎಂದು ಕಳವಳಿಸುತ್ತ, ಮಂಡೋದರಿ ಮತ್ತು ಆಂಜನೇಯರು ಅಶೋಕವನಕ್ಕೆ ಬರುತ್ತಾರೆ. ಅಷ್ಟರೊಳಗಾಗಿ ಗಡುವು ಮೀರಿರುವುದರಿಂದ ಸೀತೆಯು ಅಗ್ನಿಗೆ ಪ್ರದಕ್ಷಿಣೆ ಮಾಡಿ ಬೆಂಕಿಯಲ್ಲಿ ಧುಮುಕುತ್ತಾಳೆ. ಆಗ ಮಂಡೋದರಿಯು 'ಏನಿದೇನಿದು ಕೃತ್ಯ' ಎನ್ನುತ್ತಾ ತಾನೂ ಅಗ್ನಿಯನ್ನು ಪ್ರವೇಶಿಸಿ, ಸೀತೆಯನ್ನು ಪಿಡಿದೆತ್ತಿ ಅಗ್ನಿಯಿಂದ ಹೊರತರುತ್ತಾಳೆ. ಮಂಡೋದರಿಯು ಸೀತೆಯನ್ನು ಸಂತೈಸಿ, ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಗಲ್ಲವನ್ನು ನೇವರಿಸುತ್ತಾ ಪ್ರೇಮದಿಂದ ಹೀಗೆ ಹೇಳುತ್ತಾಳೆ.

**"ಏನಿದೇನಿದು ಮಗಳೆ**
**ಅಗ್ನಿಯನು ಪೊಕ್ಕಿರುವೆ ಎನ್ನನೂ ಸೆಳೆದಿರುವೆ**
**ನಾರಿಯರು ನಾವೆಲ್ಲ ಇಂದುವರೆ ಸಹಿಸಿರುವ**
**ಅಗ್ನಿದಿವ್ಯದ ಬಾಳು ಸಾಲದೆಂದೆಣಿಸಿದೆಯಾ?**
**ಯುಗಪುರುಷ ಬರಬೇಕು ನಾರಿಯರ ದಿವ್ಯವನು**
**ಬಿಡುಗಡೆಗೆ ತರಬೇಕು!"**[5]

ಆಂಜನೇಯನು ಸೀತೆಯನ್ನು ಸಮಾಧಾನಗೊಳಿಸುತ್ತಾನೆ. ಶ್ರೀರಾಮನು ತನ್ನ ಧ್ಯೇಯದಲ್ಲಿ ಸಫಲನಾಗಿದ್ದಾನೆ. ಮತ್ತು ಹೀಗೆ ಸೀತೆಗೆ ಸಂದೇಶವನ್ನು ಕಳುಹಿಸಿದ್ದಾನೆ. 'ನಿನ್ನ ಭಾಗ್ಯದಿಂದ ನಮಗೆ

ಜಯದೊರೆತಿದೆ. ಲಕ್ಷ್ಮಣ, ವಾನರರು, ಸುಗ್ರೀವ, ಆಂಜನೇಯ, ಜಾಂಬವ ಮೊದಲಾದವರು ಯುದ್ಧದಲ್ಲಿ ಹಗಲಿರುಳು ಶ್ರಮಪಟ್ಟಿದ್ದಾರೆ. ನಾನಿನ್ನೂ ವನವಾಸ ವ್ರತದಲ್ಲಿರುವುದರಿಂದ ಲಂಕಾನಗರವನ್ನು ಪ್ರವೇಶ ಮಾಡಲಾರೆನು. ಸುವೇಲಾದ್ರಿ ತಟದಲ್ಲಿ ನಿನಗಾಗಿ ಕಾಯುತ್ತೇನೆ' ಆಗ ಜಾನಕಿಯು ಹೀಗೆ ಹೇಳುತ್ತಾಳೆ. ಶ್ರೀರಾಮನು ವಿಜಯವನ್ನು ಸಾಧಿಸಿದ ವಾರ್ತೆಯನ್ನು ಕೇಳಿದ್ದೇನೆ. ಆದರೆ ಗಡುವು ದಾಟಿರುವುದರಿಂದ ನಾನು ಬದುಕಿರಲಾರೆ. ರಾವಣ ವಧೆಯಿಂದ ರಾಮನ ಸಂಕಲ್ಪ ಸಿದ್ಧಿಯಾಗಿದ್ದರೆ. ಮಹಾನ್ವೇಷಣೆ ಕಾರ್ಯಕ್ಕೆ ನಾನೊಂದು ನೆಪ ಅಷ್ಟೇ. ರಾಜಕಾರ್ಯದಲ್ಲಿ ಮುಳುಗಿರುವ ಶ್ರೀರಾಮನು ನನ್ನನ್ನು ಮರೆತಿದ್ದಾನೆ. ನನಗೆ ಬದುಕುವ ಆಸೆಯಿಲ್ಲ, ಅಗ್ನಿಪ್ರವೇಶ ಮಾಡಿ ಸ್ತ್ರೀಕುಲದ ವೇದನೆಯನ್ನು ಹೋಮ ಮಾಡುತ್ತೇನೆ. ಅಪಹರಣದ ಕಲಂಕವನ್ನು ತೊಡೆದು ಹಾಕುತ್ತೇನೆ. ನನ್ನ ಹಾಗೆ ಯಾರನ್ನೂ ನೋವಿಗೆ ನೂಕಬೇಡಿರಿ. ಲೋಕಲೀಲೆಗೆ ನಾನು ಬರೀ ದಾಳವಾಗಿದ್ದೇನೆ. ಮಾತೆ ಮಂಡೋದರಿಯ ಪಾತಿವ್ರತ್ಯ ಪುಣ್ಯ ನನ್ನನ್ನು ಹಿಡಿದಿಟ್ಟಿದೆ ಎನ್ನುತ್ತಾಳೆ ಸೀತೆ. ಆಗ ಮಂಡೋದರಿಯು ಸೀತೆಗೆ ಹೇಳುತ್ತಾಳೆ. 'ನಿನ್ನನ್ನು ಮಗಳಂತೆ ತೊಡೆಯ ಮೇಲಿಟ್ಟುಕೊಂಡು, ರಾಮನಿಗೊಪ್ಪಿಸುವ ಆಶಯವನ್ನು ಲಂಕೇಶನು ಇಟ್ಟುಕೊಂಡಿದ್ದನು. ಮೊದಲು ನಿನ್ನನ್ನು ಮೋಹಿಸಿದನಾದರೂ ಕೊನೆಗೆ ಅವನ ಮನಸ್ಸು ಪರಿವರ್ತನೆ ಗೊಂಡಿತು. ಪಶ್ಚಾತ್ತಾಪದ ಅಗ್ನಿಯಲ್ಲಿ ಅವನು ಬೆಂದುಹೋದನು. ಆಮೇಲೆ ನಿನ್ನ ಉರಿಗಣ್ಣಿನ ಬೆಂಕಿಯಲ್ಲಿ ಬೆಂದನು. ಕೊನೆಗೆ ಶ್ರೀರಾಮನ ಬಾಣಗಳ ಬೆಂಕಿಯಲ್ಲಿ ಬೆಂದನು. ಅವನು ನಿನಗೆ ತಂದೆ ಜನಕನ ಸಮಾನ. ಕೋಪತಾಪವನ್ನೆಲ್ಲ ಕಂಬನಿಯನ್ನಾಗಿ ಮಾಡಿಬಿಡು' ಮಂಡೋದರಿಯ ಮಾತುಗಳನ್ನು ಕೇಳಿ ಸೀತೆಗೂ ಸಮಾಧಾನವಾಗುತ್ತದೆ. ಲಂಕೇಶನ ಎದೆಯೊಳಗೆ ಅವಿತಿದ್ದ ಪಿತೃಭಾವವನ್ನರಿಯದೇ ಮೂಢಳಾದೆ. ತಾಯಿಯ ಮಾಂಗಲ್ಯವನ್ನೇ ಕಡಿದ ಪಾಪಿಯಾದೆ ಎಂದು ದುಃಖಿಸುತ್ತಾಳೆ. ಸೀತೆಯ ದೃಷ್ಟಿಯಲ್ಲಿ ಅಗ್ನಿಯಿಂದ ಹೊರಕ್ಕೆ ತಂದ ಮಂಡೋದರಿಯು ಅವಳಿಗೆ ಮತ್ತೆ ಜನ್ಮಕೊಟ್ಟಿದ್ದರಿಂದ ತಾಯಿಯೇ ಆಗುತ್ತಾಳೆ. ನಾರುಮುಡಿ ಉಟ್ಟ ಸೀತೆ ರಾಮನ ದರ್ಶನಕ್ಕಾಗಿ ಮಂಡೋದರಿ ಆಂಜನೇಯರೊಡನೆ ಸುವೇಲಾದ್ರಿಗೆ ಬರುತ್ತಾಳೆ. ಜಾನಕಿಯು ಕಂಡಕೂಡಲೇ ಶ್ರೀರಾಮನು ಆನಂದಸಾಗರದಲ್ಲಿ ತೇಲುತ್ತಾನೆ. ಮಂಡೋದರಿ ರಾಮನಿಗೆ ಹೇಳುತ್ತಾಳೆ.

**"ಮೈಥಿಲೆಗೆ ದರ್ಶನವ ನೀಡಯ್ಯ ಶ್ರೀರಾಮ**
**ಬಳಲಿ ಬೆಂಡಾಗಿಹಳು ಅಗ್ನಿಸುಡಲೊಲ್ಲದಿರೆ**
**ಎತ್ತಿ ತಂದಿಹನಯ್ಯ ವಿಮಲಚರಿತಳು ನೋಡು**

ಪರಮ ಪವಿತ್ರಳು ನೋಡು ಅಗ್ನಿದಿವ್ಯವಗೆದ್ದು

ಬಂದಿಹಳು ಸ್ವೀಕರಿಸು"

ಮೊಯಿಲಿಯವರ ರಾಮಾಯಣದಲ್ಲಿ ಕಾಣುವ ಸೀತೆಯ ಅಗ್ನಿಪ್ರವೇಶ ಪ್ರಸಂಗ ರಾಮನನ್ನು ಕ್ರಿಯೆಯ ಕೇಂದ್ರಕ್ಕೆ ತರುವುದೇ ಇಲ್ಲ. ಗಡುವು ಮೀರಿತೆಂದು ಸೀತೆ ತಾನಾಗಿಯೇ ಅಗ್ನಿಪ್ರವೇಶ ಮಾಡುತ್ತಾಳೆ. ಅವಳನ್ನು ಬೆಂಕಿಯಿಂದ ಹೊರತರುವವಳು ಮಂಡೋದರಿ. ಇದರಿಂದ ಮಂಡೋದರಿಯ ಪಾತ್ರ ಮತ್ತಷ್ಟು ಘನತೆಗೇರಿದೆ. ರಾಮಾಯಣದರ್ಶನಂ ಕಾವ್ಯದಲ್ಲಿ ಸೀತೆ ತಾಯಿಯಾಗಿ ರಾವಣ–ಕುಂಭಕರ್ಣರು ಲವ–ಕುಶರಾಗಿ ಜನಿಸಿ ಸೀತೆಯ ಸಾನಿಧ್ಯ ಸುಖವನ್ನು ಪಡೆಯುವರೆಂಬ ದಾರ್ಶನಿಕ ಸೂಚನೆಯಿದ್ದರೆ ಮೊಯಿಲಿಯವರ ಕೃತಿಯಲ್ಲಿ ಸೀತೆ ಮಗಳಾಗಿ ರಾವಣ ಮಂಡೋದರಿಯರು ಅವಳ ತಂದೆ ತಾಯಿಯಂತೆ ಸೂಚಿತವಾಗುವ ಹೊಸ ಅನ್ವೇಷಣೆಯ ನೆಲೆಯೊಂದಿದೆ. ರಾಮಾಯಣದ ಜಾನಪದ ಪರಂಪರೆಯಿಂದ ಮತ್ತು ಜೈನಕಾವ್ಯ ಪರಂಪರೆಯಿಂದ ಕವಿ ಇಂತಹ ಸೂಚನೆಯೊಂದನ್ನು ಪಡೆದಿರಲಕ್ಕೂ ಸಾಕು. ಎಲ್ಲಕ್ಕಿಂತ ಮುಖ್ಯವಾಗಿ ಗಮನಿಸಬೇಕಾದ್ದು ಮೊಯಿಲಿಯವರ ಸ್ತ್ರೀಪರ ದೃಷ್ಟಿಕೋನ. ಹೆಣ್ಣಿನ ಕಷ್ಟದಲ್ಲಿ ಮರಗುವವಳು ಇನ್ನೊಬ್ಬಳು ಹೆಣ್ಣು ಎನ್ನುವ ನಿಲುವು.

ಪ್ರಸಂಗ ಒಂದೇ ಇದ್ದರೂ, ವಿಭಿನ್ನ ಕಾವ್ಯ ಪ್ರತಿಭೆಯ ಮೂವರು ಕವಿಗಳು ತಮ್ಮ ತಮ್ಮ ದರ್ಶನಮೀಮಾಂಸೆಗೆ ಅನುಗುಣವಾಗಿ, ಹೇಗೆ ವಿಭಿನ್ನರೀತಿಯಲ್ಲಿ ಮೂಲ ಪ್ರಸಂಗವನ್ನು ಪುನಾರಚಿಸಿದ್ದಾರೆ ಎಂಬುದು ಇಲ್ಲಿ ಗಮನಿಸಬೇಕಾದ ಅಂಶ. ಮಾಸ್ತಿಯವರಲ್ಲಿ ನಿತ್ಯದ ನಡಾವಳಿ ನೆಲೆಗೆ ಈ ಪ್ರಸಂಗವನ್ನು ತರಲಾಗಿದ್ದರೆ, ಮೊಯಿಲಿಯವರ ಕಾವ್ಯದಲ್ಲಿ ಸ್ತ್ರೀಪರ ದೃಷ್ಟಿಕೋನವು ಮಂಡೋದರಿ ಮತ್ತು ಸೀತೆಯರನ್ನು ಪ್ರಸಂಗದ ಮುನ್ನೆಲೆಗೆ ತರುತ್ತದೆ. ಆದರೆ ವಾಲ್ಮೀಕಿಯ ಮೂಲ ಪ್ರಸಂಗವನ್ನು ಒಂದು ಅನಿರೀಕ್ಷಿತ ತಿರುವಿನಿಂದ ಸಂಪೂರ್ಣವಾಗಿ ಭಿನ್ನಸ್ತರಕ್ಕೆ ಮತ್ತು ಮುನ್ನೆಲೆಗೆ ಎತ್ತಿರುವುದು ಶ್ರೀರಾಮಾಯಣದರ್ಶನಂ ಕಾವ್ಯದಲ್ಲಿ. ಕಡೆಗೆ ಹೇಳಬೇಕಾದ್ದು ಇಷ್ಟೇ. ದೃಷ್ಟಿಯಂತೆ ದೃಶ್ಯ, ಭಾವಕ್ಕೆ ತಕ್ಕಂತೆ ಪುನರ್ಭವ.

## ಟಿಪ್ಪಣಿ

೧. ಮಾಸ್ತಿ ವೆಂಕಟೇಶ ಅಯ್ಯಂಗಾರ್: ಶ್ರೀರಾಮಪಟ್ಟಾಭಿಷೇಕ, ಪುಟ-೧೫೧, ೧೫೨

೨. ಅದೇ : ಪುಟ-೧೫೩

೩. ಅದೇ : ಪುಟ-೧೫೪

೪. ಕುವೆಂಪು : ಶ್ರೀರಾಮಾಯಣದರ್ಶನಂ, ಶ್ರೀಸಂಪುಟ ಸಂ.೧೧, ಪುಟ-೮೫೧

೫. ಅದೇ : ಸಂ.೧೧, ಪುಟ-೮೫೨

೬. ಡಾ.ಜಿ.ಎಸ್.ಶಿವರುದ್ರಪ್ಪ : ಕುವೆಂಪು ಪುನರಾಲೋಕನ, ಪುಟ-೭೧

೭. ಎಂ.ವೀರಪ್ಪಮೊಯಿಲಿ : ಶ್ರೀರಾಮಾಯಣ ಮಹಾನ್ವೇಷಣಂ ಸೋಪಾನ-೫, ಪ್ರಸ್ಥಾನ-೨೨೦, ಪುಟ-೪೭೬

೮. ಅದೇ : ಪಂಚಮಸೋಪಾನ, ಪ್ರಸ್ಥಾನ-೨೨೦, ಪುಟ-೪೮೦

## ಸಂಶೋಧನೆಯಿಂದ ಕಂಡುಕೊಂಡ ಫಲಿತಾಂಶಗಳ ಮಂಡನೆ

## ಸಮಾರೋಪ

ಯಾವುದೇ ಒಂದು ಕಥೆಯನ್ನು ಮತ್ತೆ ಮತ್ತೆ ಹೇಳುವುದರಿಂದ ಆ ಕಥೆಯು, ವರ್ತಮಾನದ ನೆಲೆಯಲ್ಲಿ ಪುನರವತಣವನ್ನು ಪಡೆಯುತ್ತದೆ ಎನ್ನಬಹುದು. ಹೀಗೆ ಒಂದು ಕಥೆಯನ್ನು ಮತ್ತೆ ಮತ್ತೆ ಹೇಳುವಲ್ಲಿ ಅನೇಕ ಸಾಂಸ್ಕೃತಿಕ ಒತ್ತಡಗಳು ಕ್ರಿಯಾಶೀಲವಾಗಿರುತ್ತದೆ. ಈ ಸಾಂಸ್ಕೃತಿಕ ಒತ್ತಡಗಳು, ಸಮಕಾಲೀನ ಕವಿಯ ಸೃಷ್ಟಿಶೀಲತೆಯನ್ನು ಯುಗಧರ್ಮಕ್ಕೆ ತಕ್ಕಂತೆ ಕ್ರಿಯಾಶೀಲತೆಗೆ ಪ್ರಚೋದಿಸುತ್ತದೆ. ಒಂದೇ ಕಾಲದಲ್ಲಿ ಜೀವಿಸಿರುವ ಬೇರೆ ಬೇರೆ ಕವಿಗಳು ಒಂದೇ ಮೂಲ ಕಥೆಯನ್ನು ತಮ್ಮ ಕ್ರಿಯಾಶೀಲತೆಯ ಮೂಲಸಾಮಗ್ರಿಯಾಗಿ ಇರಿಸಿಕೊಂಡು, ವರ್ತಮಾನದ ತುರ್ತಿನಲ್ಲಿ ಕಾವ್ಯನಿರ್ಮಾಣಕ್ಕೆ ತೊಡಗಿದಾಗ, ಅವು ತಮ್ಮಷ್ಟಕ್ಕೇ ತೀರ ವಿಭಿನ್ನ ಕೃತಿಗಳಾಗಿಯೇ ಮೈದಳೆಯುತ್ತವೆ. ಇದೊಂದು ಕುತೂಹಲಕಾರಿ ವಿದ್ಯಮಾನವಾಗಿದೆ.

ಕುವೆಂಪು, ಮಾಸ್ತಿವೆಂಕಟೇಶ ಅಯ್ಯಂಗಾರ್ ಮತ್ತು ವೀರಪ್ಪಮೊಯಿಲಿ ಈ ಮೂವರು ಕವಿಗಳು ಒಂದೇ ಕಾಲಮಾನದಲ್ಲಿ ಜೀವಿಸಿದ ಕವಿಗಳಾಗಿದ್ದಾರೆ. ಅವರು ತಮ್ಮ ಮಹಾಕಾವ್ಯಗಳ ರಚನೆಗೆ ಆರಿಸಿಕೊಂಡಿರುವ ಮೂಲ ಸಾಮಗ್ರಿಯೂ ಒಂದೇ ಆಗಿದೆ. ಹಾಗಿದ್ದೂ ಅವರು ರಚಿಸಿದ ಮೂರು ಆಧುನಿಕ ರಾಮಾಯಣ ಕೃತಿಗಳು ವಿಶಿಷ್ಟವೂ, ವಿಭಿನ್ನವೂ ಆಗಿರುವ ಸ್ವರೂಪವನ್ನು ಏಕೆ ಪಡೆದವು ಎಂಬುದು ಸಾಹಿತ್ಯಾಸಕ್ತರು ವಿವೇಚಿಸಬೇಕಾದ ಪ್ರಯತ್ನವನ್ನು ಕೈಗೊಳ್ಳಲಾಗಿದೆ.

ಪ್ರಾಚೀನ ರಾಮಕಥಾ ಪರಂಪರೆಯು, ವಿವಿಧ ಕವಲುಗಳಾಗಿ ಪ್ರವಹಿಸಿರುವುದನ್ನು ನಾವು ಈಗಾಗಲೇ ಮನನ ಮಾಡಿಕೊಂಡಿದ್ದೇವೆ. ವೈದಿಕ ರಾಮಾಯಣ ಪರಂಪರೆ, ಜೈನ ರಾಮಾಯಣ ಪರಂಪರೆ ಮತ್ತು ಜಾನಪದ ರಾಮಾಯಣ ಪರಂಪರೆ, ರಾಮಾಯಣ ಕಥಾ ಪ್ರವಾಹದ ಮೂರು ಪ್ರಧಾನ ಕವಲುಗಳಾಗಿವೆ ಮತ್ತು ಆಯಾ ಪರಂಪರೆಗಳಲ್ಲಿ ವಿಭಿನ್ನವಾದ ಅನೇಕ ಉಪಪರಂಪರೆಗಳು ಪ್ರವಹಿಸುವುದನ್ನು ನಾವು ಗಮನಿಸಿದ್ದೇವೆ. ಈ ಮೂರು ಪ್ರಧಾನ ಧಾರೆಗಳ ಜೊತೆಗೆ ಬೌದ್ಧರಾಮಾಯಣ ಪರಂಪರೆಯ ಬಹುಪ್ರಾಚೀನವಾದ ಒಂದು ಸಮಾನಾಂತರ ಧಾರೆಯೂ ಇದೆ. ಕಾಲಕಾಲಕ್ಕೆ ಈ ಪ್ರಧಾನ ಪರಂಪರೆಗಳನ್ನು ಮೂಲ ನೆಲೆಯಾಗಿರಿಸಿಕೊಂಡು, ಸಂಸ್ಕೃತದಲ್ಲಿ ಮತ್ತು

ಸಂಸ್ಕೃತೇತರವಾದ ಬೇರೆ ಬೇರೆ ಪ್ರಾಂತೀಯ ಭಾಷೆಗಳಲ್ಲಿ ರಾಮಾಯಣದ ಪುನರ್‌ಕಥನವು ನಡೆಯುತ್ತಲೇ ಬಂದಿದೆ. ಕನ್ನಡ ಸಾಹಿತ್ಯವನ್ನೇ ಲಕ್ಷ್ಯದಲ್ಲಿರಿಸಿಕೊಂಡು ಹೇಳುವುದಾದರೆ, ನಮ್ಮಲ್ಲಿ ಮೊಟ್ಟ ಮೊದಲು ಕಾಣಿಸಿಕೊಂಡದ್ದು ಜೈನಪರಂಪರೆಯ ರಾಮಾಯಣ ಕಥಾಧಾರೆ. ಅನಂತರ ವೈದಿಕಪರಂಪರೆಯ ಅನೇಕ ರಾಮಾಯಣ ಕೃತಿಗಳು ಕಾಲ ಕಾಲಕ್ಕೆ ರಚಿತವಾಗಿದೆ. ಹಾಗೆ ರಚಿತವಾಗುವಾಗ ಒಂದಲ್ಲಾ ಒಂದು ವೈದಿಕ ಉಪಪರಂಪರೆ ಪ್ರಧಾನನೆಲೆಯಲ್ಲಿ ಕಾಣಿಸಿಕೊಂಡಿದೆ. ಜೊತೆಗೆ ಜಾನಪದ ರಾಮಾಯಣಗಳು ಜಾನಪದೀಯ ನೆಲೆಯಲ್ಲಿ ಮತ್ತೆ ಮತ್ತೆ ಹಾಡಲ್ಪಟ್ಟಿವೆ. ಕೆಲವು ಬಾರಿ ಜನಪದ ರಾಮಾಯಣದ ಕಥಾ ಪ್ರಸಂಗಗಳು ಶಿಷ್ಟರಾಮಾಯಣಕ್ಕೂ ತಮ್ಮ ಕಾಣಿಕೆಯನ್ನು ಸಲ್ಲಿಸಿವೆ. ನಾಗಚಂದ್ರನ 'ರಾಮಚಂದ್ರಚರಿತ ಪುರಾಣ'ವು ವಿಮಲಸೂರಿಯ 'ಜೈನರಾಮಾಯಣ' ಪರಂಪರೆಯನ್ನು ನೇರವಾಗಿ ಅನುಸರಿಸಿರುವುದನ್ನು ನಾವು ಈಗಾಗಲೇ ಗುರುತಿಸಿದ್ದೇವೆ. ವೈದಿಕ ರಾಮಾಯಣ ಪರಂಪರೆಯಲ್ಲಿ ತೊರವೆರಾಮಾಯಣ ವಾಲ್ಮೀಕಿಯ ಪರಂಪರೆಯಿಂದ ಪ್ರಭಾವಿತವಾಗಿದ್ದರೆ, ಮುದ್ದಣ್ಣನ ಅದ್ಭುತರಾಮಾಯಣವು ಶಾಕ್ತೇಯ ಪರಂಪರೆಗೆ ಋಣಿಯಾಗಿದೆ. ಅಂದರೆ ವಿಭಿನ್ನ ವೈದಿಕ ಪರಂಪರೆಗಳು ಕಾಲಕಾಲಕ್ಕೆ ಕನ್ನಡದಲ್ಲಿ ಕಾಣಿಸಿಕೊಂಡಿದೆ. ಹಾಗೆ ಕಾಣಿಸಿಕೊಳ್ಳುವಾಗ ಸಮಕಾಲೀನ ಧಾರ್ಮಿಕ, ಚಾರಿತ್ರಿಕ, ಸಾಮಾಜಿಕ ಸಂದರ್ಭಗಳು ಅವುಗಳ ಹೊಸ ಪಾಕಕ್ಕೆ ತಮ್ಮ ಕಾಣಿಕೆಯನ್ನು ನೀಡಿದೆ. ಉದಾ:ತೊರವೆರಾಮಾಯಣವು, ಮುದ್ದಣ್ಣನ ರಾಮಾಶ್ವಮೇಧವು, ಸ್ತ್ರೀಪರವಾದ ನಿಲುವು, ಆಧುನಿಕ ವಿಮರ್ಶಾ ಎಚ್ಚರ ಇವುಗಳ ಕಾರಣದಿಂದ ವಿಶಿಷ್ಟವಾದ ಕಥಾಹಂದರವೊಂದನ್ನು ಸಾಧಿಸುತ್ತದೆ. ಮಹಾಭಾರತದ ನಿರ್ಮಾಣಕ್ಕೆ ಸಂಬಂಧಿಸಿಯೂ ಇದು ನಿಜ. ಪಂಪನ ವಿಕ್ರಮಾರ್ಜುನ ವಿಜಯ ಮತ್ತು ಕುಮಾರವ್ಯಾಸನ ಗದುಗಿನ ಭಾರತವು ವ್ಯಾಸಭಾರತದ ಕಥಾಹಂದರವನ್ನೇ ಆಶ್ರಯಿಸಿದ್ದರೂ ವ್ಯಕ್ತಿ ಪ್ರತಿಭೆಯ ವಿಭಿನ್ನತೆ ಮತ್ತು ಆಯಾ ಯುಗಧರ್ಮದ ಒತ್ತಡಗಳ ಕಾರಣವಾಗಿ ಎರಡು ವಿಭಿನ್ನ ಮಹಾಭಾರತ ಕೃತಿಗಳೇ ಕನ್ನಡದಲ್ಲಿ ಮೈದಾಳುತ್ತವೆ. ಪಂಪಭಾರತವು ವೀರಯುಗದ ಉತ್ಪನ್ನವಾಗಿರುವಂತೇ ಪುರಾಣದಲ್ಲಿ ಇತಿಹಾಸವನ್ನು ಅನ್ವಯಿಸಿ ಹೇಳುವ ಹೊಸತಂತ್ರದ ಆವಿಷ್ಕಾರದ ಫಲವೂ ಆಗಿದೆ. ಕುಮಾರವ್ಯಾಸ ಭಾರತವು ಭಕ್ತಿಯುಗದ ಕಥೆಯಾಗಿ ತನ್ನನ್ನು ರೂಪಿಸಿಕೊಳ್ಳುತ್ತದೆ. ವಿಜಯನಗರದ ಹಿನ್ನೆಲೆ ಅಲ್ಲಿ ವರ್ಣಕ ಸಾಮಗ್ರಿಯಾಗಿ ಮಾತ್ರ ಒದಗುತ್ತದೆ. ಕುಮಾರವ್ಯಾಸನಿಗೆ ಮುಖ್ಯವಾಗಿರುವುದು, ಕೃಷ್ಣನ ಕಥೆಯನ್ನು ವಿವರಿಸುವುದು; ಭಕ್ತಿಯ ಮಹಿಮೆಯನ್ನು ಕೊಂಡಾಡುವುದು.

ಆಧುನಿಕ ಸಂದರ್ಭದಲ್ಲಿ ರಚಿತವಾಗಿರುವ ಕನ್ನಡ ಮಹಾಕಾವ್ಯಗಳಲ್ಲಿ ಮೂರು ಪ್ರಧಾನ ಕೃತಿಗಳು ರಾಮಾಯಣದ ವಸ್ತುವನ್ನೇ ಆಧರಿಸಿ ನಿರ್ಮಾಣಗೊಂಡಿರುವುದು ವಿಶೇಷವಾದ ಸಂಗತಿಯಾಗಿದೆ. ಆ ಮೂರು ಮಹಾಕಾವ್ಯಗಳು ಕುವೆಂಪು ಅವರ ಶ್ರೀರಾಮಾಯಣದರ್ಶನಂ; ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಶ್ರೀರಾಮಪಟ್ಟಾಭಿಷೇಕ; ಮತ್ತು ವೀರಪ್ಪಮೊಯಿಲಿಯವರ ಶ್ರೀರಾಮಾಯಣ ಮಹಾನ್ವೇಷಣಂ. ಈ ಮೂರು ರಾಮಾಯಣ ಕೃತಿಗಳನ್ನು ಬಿಟ್ಟರೆ ಪು.ತಿ.ನ ಅವರ ಶ್ರೀಹರಿಚರಿತೆ, ಭಾಗವತದ ಕೃಷ್ಣನ ಬಾಲ್ಯವನ್ನು ವಸ್ತುವಾಗಿ ಹೊಂದಿರುವ ಕಾವ್ಯವಾದರೆ, ಗೋಕಾಕ್‌ರ 'ಭಾರತ ಸಿಂಧೂ ರಶ್ಮಿ'ಯು ವೇದಕಾಲೀನ ಸಂಸ್ಕೃತಿಯ ಕಥನಾತ್ಮಕ ಶೋಧಕ್ಕೆ ತನ್ನನ್ನು ತೊಡಗಿಸಿ ಕೊಳ್ಳುತ್ತದೆ. ಭೂಸನೂರು ಮಠದ 'ಭವ್ಯಮಾನವ' ಶರಣ ಸಂಸ್ಕೃತಿಯ ಕಥಾಹಂದರವನ್ನು ಆಶ್ರಯಿಸಿದ್ದರೆ ಸುಜನಾ ಅವರ 'ಯುಗಾಂತ'ವು ಯುದ್ಧೋತ್ತರ ಮಹಾಭಾರತದ ಕಥನಕ್ಕೆ ತೊಡಗಿಕೊಳ್ಳುತ್ತದೆ. ನಮ್ಮ ಚರ್ಚೆಗೆ ಒಳಪಟ್ಟಿರುವ ರಾಮಾಯಣದ ಕಥಾಹಂದರ ಉಳ್ಳ ಮೂರು ಮಹಾಕಾವ್ಯಗಳು ವೈದಿಕ ರಾಮಾಯಣ–ಪ್ರಧಾನವಾಗಿ ವಾಲ್ಮೀಕಿ ಪ್ರಣೀತ ರಾಮಾಯಣ ಕಾವ್ಯದ ಕಥಾ ವಸ್ತುವನ್ನೇ ಆಧರಿಸಿ ಸೃಷ್ಟಿಯಾಗಿವೆ ಎನ್ನುವುದು ಗಮನಿಸಬೇಕಾದ ಅಂಶವಾಗಿದೆ. ಜೈನ ಮತ್ತು ಜಾನಪದ ರಾಮಾಯಣ ಸಂಪ್ರದಾಯಗಳು ಈ ಕೃತಿಗಳ ರಚನೆಯಲ್ಲಿ ಪ್ರಭಾವ ಬೀರಿವೆಯಾದರೂ ಪ್ರಧಾನ ಕಥಾಭಿತ್ತಿ ವೈದಿಕ ಪರಂಪರೆಯನ್ನೇ ಆಧರಿಸಿರುವುದು ಗಮನಿಸಬೇಕಾದ ಅಂಶ.

ಕುವೆಂಪು ಅವರ 'ರಾಮಾಯಣ ದರ್ಶನಂ' ವಾಲ್ಮೀಕಿ ರಾಮಾಯಣವನ್ನು ಮೂಲಭಿತ್ತಿಯಾಗಿ ಇರಿಸಿಕೊಂಡಿದ್ದೂ ವಿಶ್ವವಿಸ್ತೃತವಾದ ವಿಶಾಲ ಪರಿಪ್ರೇಕ್ಷ್ಯದಲ್ಲಿ ಅದರ ಆಕಾರ ಮೈಪಡೆದುಕೊಳ್ಳುತ್ತದೆ. ಜೈನ ಮತ್ತು ಜಾನಪದ ರಾಮಾಯಣ ಕಥಾಪರಂಪರೆಗಳಿಂದ ಕುವೆಂಪು ಅವರು ಅನೇಕ ಪ್ರೇರಣೆಗಳನ್ನು ಪಡೆದಿದ್ದಾರೆ. ಅವುಗಳಲ್ಲಿ ಮುಖ್ಯವಾದದ್ದು ರಾವಣ, ಕುಂಭಕರ್ಣ, ವಾಲಿ, ಮಂಥರೆ ಮೊದಲಾದ ನೇತ್ಯಾತ್ಮಕ ಪಾತ್ರಗಳ ನಿರ್ಮಾಣದಲ್ಲಿ ಕಾಣುವ ವೈದಿಕೇತರ ನಿಲುವು. ಈ ಎಲ್ಲ ಪಾತ್ರಗಳು ಹೆಚ್ಚು ಮಾನವೀಯವಾಗಿ, ವಿಕಾಸದ ಹಂತದ ಬೇರೆ ಬೇರೆ ನೆಲೆಯಲ್ಲಿರುವ ಊರ್ಧ್ವಗಾಮಿಗಳಾಗಿ ಚಿತ್ರಿತವಾಗುತ್ತಾರೆ. ಜಾನಪದ ರಾಮಾಯಣ ಪ್ರಸಂಗಗಳ ಪ್ರಭಾವ ಪಾತ್ರಗಳನ್ನು ಆಪ್ತನೆಲೆಗೆ ತರುವಲ್ಲಿ ಕೆಲಸಮಾಡುತ್ತದೆ. ವನವಾಸದಲ್ಲಿ ಸೀತಾರಾಮರ ದಾಂಪತ್ಯದ ದೈನಿಕ ಚಿತ್ರಗಳು ಅದಕ್ಕೆ ಒಳ್ಳೆಯ ಉದಾಹರಣೆಗಳಾಗಬಲ್ಲವು. ಜೊತೆಗೆ ರಾಮಾಯಣ ಕಥೆಯ ಮೂಲಕ ಅತ್ಯಾಧುನಿಕವೂ ವಿಶಿಷ್ಟವೂ ಆದ ದರ್ಶನಾಂಶವನ್ನು ಶೋಧಿಸುವಲ್ಲಿ ಕುವೆಂಪು ಅವರ ಪ್ರತಿಭೆ

ಕಾವ್ಯದುದ್ದಕ್ಕೂ ತೊಡಗಿಕೊಳ್ಳುತ್ತದೆ. ಪೂರ್ಣದೃಷ್ಟಿ, ಸರ್ವೋದ್ಧಾರ ಮತ್ತು ವೈಚಾರಿಕತೆಯ ಸಮಕಾಲೀನ ಆಶಯಗಳು ಕಾವ್ಯದಲ್ಲಿ ಮೈ ಪಡೆಯುವ ಅಂಶ ರೋಚಕವಾಗಿದೆ. ಯುಗಚೈತನ್ಯದ ಸಮಷ್ಟಿಪ್ರಜ್ಞೆಯ ಸೃಷ್ಟಿಯಾಗಿ ರಾಮಾಯಣವು ಅವತರಿಸಬೇಕೆಂಬುದು ಕುವೆಂಪು ಅವರ ಸಂಕಲ್ಪ. ಗಾಂಧಿ, ವಿನೋಭ, ಅರವಿಂದ ಮತ್ತು ರಾಮಕೃಷ್ಣಪರಮಹಂಸರ ಚಿಂತನೆಗಳು, ರಾಮಾಯಣದ ಪುನರ್‌ಕಥನದಲ್ಲಿ ದಾರ್ಶನಿಕತೆಯ ಬೆಳಕು ನೀಡುತ್ತಾ ಹೋಗುತ್ತವೆ. ಸಮನ್ವಯ, ಸರ್ವೋದಯ ಮತ್ತು ಪೂರ್ಣದೃಷ್ಟಿ ಇವೇ ಶ್ರೀರಾಮಾಯಣದರ್ಶನದ ಮೂರು ಕಣ್ಣುಗಳು ಎನ್ನುವುದು ಒಪ್ಪಲೇಬೇಕಾದ ಮಾತು. ಜೊತೆಗೆ ಆಧುನಿಕ ವಿಜ್ಞಾನವು ಅದು ನೀಡಿದ ಹೊಸ ಕಾಣ್ಕೆಗಳು ಕುವೆಂಪು ಅವರಿಗೆ ಮಾನ್ಯವೆನ್ನಿಸಿವೆ. ಡಾರ್ವಿನ್ನನ ವಿಕಾಸವಾದ ಮತ್ತು ಆಧ್ಯಾತ್ಮಿಕ ನೆಲೆಯ ಸರ್ವೋದಯ ಪರಸ್ಪರ ಪೂರಕ ದರ್ಶನಾಂಶಗಳಾಗಿ ಹೆಣೆದುಕೊಳ್ಳುತ್ತದೆ.

ರಾಮಾಯಣದರ್ಶನಂ ಕಾವ್ಯದಲ್ಲಿ, ದರ್ಶನವೇ ಅದರ ಜೀವ ಜೀವಾಳ. ಸೃಷ್ಟಿಯ ಮಹಾನ್‌ವ್ಯೂಹ ರಚನೆಯಲ್ಲಿ ಎಂಥ ಪಾಪಿಗೂ ಉದ್ಧಾರ ಉಂಟು ಎನ್ನುವುದು ಕುವೆಂಪು ದರ್ಶನದ ಒಂದು ಪ್ರಧಾನ ನೆಲೆ. ಹೀಗಾಗಿಯೇ ಅವರ ರಾಮಾಯಣದಲ್ಲಿ ಬರುವ ರಾವಣ, ಕುಂಭಕರ್ಣ, ವಾಲಿ, ಮಂಥರೆ ಮೊದಲಾದ ಪಾತ್ರಗಳು ಉದ್ಧಾರದ ಕಡೆ ಯಾತ್ರೆ ಹೊರಟ ಜೀವಶಕ್ತಿಗಳಾಗಿ ಕಾಣಿಸಿಕೊಳ್ಳುತ್ತವೆ. ಈ ಹಿನ್ನೆಲೆಯಲ್ಲಿ ರಾಮ ಸೀತೆಯರನ್ನೂ ಒಳಗೊಂಡು ಕುವೆಂಪು ಅವರ ರಾಮಾಯಣದ ಪ್ರತಿಯೊಂದು ಪಾತ್ರವೂ ಸಾಧನೆಯ ಮಹಾಪಥದಲ್ಲಿ ಪಟ್ಟುಹಿಡಿದು ನಡೆಯುತ್ತಿರುವ ಸಾಧನಶೀಲ ಪಥಿಕರು. ಕುವೆಂಪು ಕಾವ್ಯದ ದರ್ಶನದ ಇನ್ನೊಂದು ಮಹತ್ವದ ನೆಲೆಯೆಂದರೆ ಪೂರ್ಣದೃಷ್ಟಿಯ ಕಲ್ಪನೆ. ಪೂರ್ಣದೃಷ್ಟಿ ಎನ್ನುವುದು ಕುವೆಂಪು ಅವರಿಗೆ ಎಷ್ಟು ಪ್ರಿಯವಾದ ಸಂಗತಿಯಾಗಿದೆಯೆಂದರೆ, 'ದರ್ಶನ' ಎನ್ನುವುದಕ್ಕೆ 'ಪೂರ್ಣದೃಷ್ಟಿ' ಎನ್ನುವುದೇ ಪರ್ಯಾಯ ಕಲ್ಪನೆ ಎನ್ನುತ್ತಾರೆ ಅವರು. ಪೂರ್ಣದೃಷ್ಟಿ ಎಂದರೆ ಏನು? ಕುವೆಂಪು ಅವರ ಪ್ರಕಾರ ಒಂದು ಘಟನೆಯ ನೋಡುವ ಎರಡು ರೀತಿಯ ಕ್ರಮಗಳಿವೆ, ಒಂದು ಖಂಡದೃಷ್ಟಿ. ಎರಡನೆಯದು ಪೂರ್ಣದೃಷ್ಟಿ. ನಮ್ಮ ಹೆಚ್ಚಿನ ಕಾವ್ಯಗಳಲ್ಲಿ ಕಂಡುಬರುತ್ತಿದ್ದುದು ಖಂಡದೃಷ್ಟಿ ಒಂದು ಘಟನೆಗೆ ಸಂಬಂಧಿಸಿ ಒಂದು ಪಾತ್ರದ ವ್ಯವಹಾರವು ಆ ಘಟನೆಗೆ ಎಷ್ಟು ಪೂರಕವಾಗಬಲ್ಲದು ಎನ್ನುವ ನೆಲೆಯಲ್ಲಿ ಆ ಒಂದು ಘಟನೆಯನ್ನು ಕಟ್ಟಿಕೊಡುವ ಕ್ರಮ. ಒಟ್ಟು ಕಾವ್ಯದ ದೃಷ್ಟಿಯಿಂದ, ಈ ಬಿಡಿ ಭಾಗವು ಕಾವ್ಯದ ಅಖಂಡದರ್ಶನಕ್ಕೆ ಎಷ್ಟರಮಟ್ಟಿಗೆ ಪೂರಕವಾಗಬಲ್ಲದು ಎನ್ನುವ ಚಿಂತನೆ ನಮ್ಮಲ್ಲಿ ಕಡಿಮೆ. ಕುವೆಂಪು ಅವರ ಕಾವ್ಯದ

ವೈಶಿಷ್ಟ್ಯವೆಂದರೆ ಅದು ಪ್ರತಿಯೊಂದು ಬಿಡಿ ಘಟನೆಯನ್ನು ಕಾವ್ಯದ ಒಟ್ಟಾರೆ ಹಂದರದ ಹಿನ್ನೆಲೆಯಲ್ಲಿ ಗಮನಿಸುತ್ತದೆ. ಮಂಥರೆ ಇವತ್ತು ಏಕೆ ಹೀಗೆ ನಡೆದಳು ಎನ್ನುವುದಕ್ಕೆ ಕಾರಣ ಒಟ್ಟು ಕಥೆಯ ಭೂತಕಾಲ ಮತ್ತು ಭವಿಷ್ಯತ್ ಕಾಲದಲ್ಲಿ ಅಡಕವಾಗಿರುತ್ತದೆ.

ಪ್ರಾಯಶಃ ಇದನ್ನೇ ಸಾವಯವ ಶಿಲ್ಪದ ಸಮಗ್ರೀಕರಣದ ನೆಲೆ ಎಂದು ಹೇಳಬಹುದು. ಇದು ಕಥಾಹಂದರಕ್ಕೆ ಸಂಬಂಧಿಸಿದ ಸಂಗತಿ. ಇದೇ ರೀತಿ ಪೂರ್ಣದೃಷ್ಟಿಯ ಕಲ್ಪನೆಯನ್ನು ಪಾತ್ರದ ನಡವಳಿಕೆಗೆ ಸಂಬಂಧಿಸಿಯೂ ಹೇಳಬಹುದು. ಉದಾಹರಣೆಗೆ ಖಂಡದೃಷ್ಟಿಗೆ ಮಂಥರೆಯು ರಾಮನ ವನವಾಸಕ್ಕೆ ಕಾರಣಳಾದದ್ದು ಅಮಂಗಳಕಾರಿ. ಆದರೆ ಪೂರ್ಣದೃಷ್ಟಿಗೆ ಮಂಥರೆಯು ರಾಮನನ್ನು ವನವಾಸಕ್ಕೆ ದೂಡಿದ್ದರಿಂದಲೇ ಮುಂದೆ ಅನೇಕ ಲೋಕ ಮಂಗಳಕಾರಿಯಾದ ಘಟನೆಗಳು ಸಂಭವಿಸಿದವು. ಆದ್ದರಿಂದ ಪೂರ್ಣದೃಷ್ಟಿಗೆ ಮಂಥರೆಯ ಕೃತ್ಯವು ಮಂಗಳಕಾರಿ ಎನ್ನಿಸಬಹುದು. ಈ ದರ್ಶನದ ಪರಾಕಾಷ್ಠೆ ಎಂದರೆ ವಿಧಿಯ ಎಲ್ಲ ವಿನ್ಯಾಸವೂ ಕೊನೆಗೆ ಶಿವಾಭಿಮುಖವಾದದ್ದೇ ಎನ್ನುವುದು.

ಕುವೆಂಪು ಅವರನ್ನು ರಾಮಾಯಣ ಕಥಾಹಂದರದ ನಿರ್ಮಾಣದಲ್ಲಿ ಪ್ರೇರೇಪಿಸಿರುವ ಇನ್ನೊಂದು ಅಂಶವೆಂದರೆ, ಈ ಮೊದಲು ಕಾವ್ಯದ ಅನಾದರಕ್ಕೆ ಪಾತ್ರರಾದ ವ್ಯಕ್ತಿಗಳನ್ನು ಮುನ್ನೆಲೆಗೆ ತರುವುದು. ಉದಾಹರಣೆಗೆ ಊರ್ಮಿಳೆಯ ಪಾತ್ರ. ತನ್ಮೂಲಕ ಕುವೆಂಪು ಕಾವ್ಯಾತ್ಮಕ ನ್ಯಾಯವೊಂದನ್ನು (Poetic justice) ಆ ಪಾತ್ರಕ್ಕೆ ಒದಗಿಸಲು ಯತ್ನಿಸಿದ್ದಾರೆ. ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣುಮಕ್ಕಳ ನೋವಿನ ನೆಲೆಗಳನ್ನೂ, ಆ ನೋವಿನ ನೆಲೆಗಳಿಂದ ಅವರು ಕಂಡುಕೊಂಡ ಬಿಡುಗಡೆಯ ದಾರಿಗಳನ್ನೂ ಚಿಂತಿಸುವುದಕ್ಕೆ ಇಂತಹ ಪ್ರಯತ್ನಗಳು ಸಾಧಕವಾಗುತ್ತದೆ. ಎಲ್ಲ ಪಾತ್ರಗಳ, ಅದರಲ್ಲೂ ವಿಶೇಷವಾಗಿ ಸ್ತ್ರೀಪಾತ್ರಗಳ, ನಿರ್ಮಾಣದ ಹಿನ್ನೆಲೆಯಲ್ಲಿ ಅತ್ಯಂತ ಮಾನವೀಯವಾದ ಅನುಕಂಪೆಯ ನೆಲೆಯೊಂದು ಕ್ರಿಯಾಪ್ರವೃತ್ತವಾಗುವುದನ್ನು ನಾವು ಉದ್ದಕ್ಕೂ ನೋಡುತ್ತೇವೆ. ಊರ್ಮಿಳೆ, ಮಂಡೋದರಿ, ಅನಲೆ, ಕೊನೆಗೆ ಚಂದ್ರನಖಿ ಕೂಡ. ಈ ಯಾವ ಪಾತ್ರವು ಮಡುಗಟ್ಟಿದ ಪಾತ್ರವಲ್ಲ. ನಿತ್ಯ ಪರಿವರ್ತನಶೀಲವಾದ ಪಾತ್ರ. ಈ ನಿರಂತರ ಹರಿಯುವಿಕೆಯೇ ಶುದ್ಧೀಕರಣದ ಪ್ರಕ್ರಿಯೆ ಎಂದು ಕುವೆಂಪು ತಮ್ಮ ದರ್ಶನಕಾವ್ಯದಲ್ಲಿ ಸೂಚಿಸುತ್ತಾ ಇದ್ದಾರೆ. ಕುವೆಂಪು ಅವರ ಕಾವ್ಯದಲ್ಲಿ ಅನೇಕ ಕಥಾಂತರಗಳು ಕಾಣುವುದನ್ನು ನಾವು ಈಗಾಗಲೇ ಗುರುತಿಸಿದ್ದೇವೆ.

ಕಥಾಂತರವೆಂದರೆ ಇರುವ ಕಥೆಯನ್ನು ಬೇರೊಂದು ನೆಲೆಗೆ ಎತ್ತುವುದು. ಪ್ರತಿಭಾ ಸಮ್ಮತವೆನಿಸುವಂತೆ ಬದಲಾಯಿಸುವುದು. ಪಾತ್ರ, ಘಟನೆ ಇವುಗಳ ನಿರ್ವಹಣೆಯಲ್ಲಿ ಕುವೆಂಪು ಅವರ ಕಾವ್ಯ ಅನೇಕ ಕಥಾಂತರಗಳನ್ನು ಸಾಧಿಸಿದೆ. ಜೊತೆಗೆ ಹೊಸ ಕಥಾ ಪ್ರಸಂಗಗಳನ್ನು ಸೃಷ್ಟಿಸಿದೆ. ಒಟ್ಟು ಕಥಾಹಂದರರದ ಚಹರೆಯನ್ನು ಬದಲಿಸುವಲ್ಲಿ ಈ ಹೊಸ ಕಥಾಪ್ರಸಂಗಗಳ ನಿರ್ಮಿತಿಕೂಡ ಕಥಾಂತರದಷ್ಟೇ ಮುಖ್ಯವಾದದ್ದು. ಸಾಮಾನ್ಯ ಯೋಧರ ಕಥಾಪ್ರಸಂಗಗಳು, ವಿಭೀಷಣನ ಮಗಳಾದ ಪಾತ್ರವನ್ನು ಬೆಳೆಸುವ ಕ್ರಮ, ಮಂಥರೆಯ ಮೂಲ ವೃತ್ತಾಂತವನ್ನು ಕಥಿಸುವ ಕ್ರಮ, ಶಬರಿಯ ಅಂತ್ಯವನ್ನು ರಾಮನ ನವೋದಯದೊಂದಿಗೆ ಬೆರೆಸಿ ಹೇಳುವ ಕ್ರಮ, ರಾವಣನ ಕನಸಿನಲ್ಲಿ ಬರುವ ಅಪೂರ್ವವಾದ ಭವಿಷ್ಯತ್ ದರ್ಶನ–ಈ ಒಂದೊಂದು ಅಂಶವೂ ರಾಮಾಯಣದರ್ಶನ ಕಾವ್ಯವನ್ನು ನವೋನವಗೊಳಿಸಿದೆ. ಕಾವ್ಯದ ಕಥಾಹಂದರದಲ್ಲಿ ಅಹಿಂಸೆಗೆ ಬೀಳುವ ಒತ್ತು, ಯುದ್ಧವಿರೋಧಿ ನಿಲುವು, ಪ್ರಕೃತಿಯಲ್ಲೇ ಪರಮನನ್ನು ಕಾಣಬೇಕೆಂಬ ನವೋದಯದ ಒಲವು, ಪ್ರತಿಯೊಂದು ಪಾತ್ರಕ್ಕೂ ಉದ್ಧಾರ ಉಂಟೆಂಬ ಸಮ್ಯಗ್ದರ್ಶನ–ಇವುಗಳು ರಾಮಾಯಣದರ್ಶನ ಕಾವ್ಯವನ್ನು ಎತ್ತರದ ಕೃತಿಯಾಗಿಸಿದೆ. ಸಮಕಾಲೀನ ಇತಿಹಾಸ ಮತ್ತು ಸಾಹಿತ್ಯಕ ಚಿಂತನೆಗಳು ಕೂಡ ಕಥಾಂತರಕ್ಕೆ ಕಾರಣವಾಗುತ್ತವೆ ಎಂಬುದನ್ನು ನಾವು ಇಲ್ಲಿ ಲಕ್ಷಿಸಿಸಬಹುದು.

ಈ ಎಲ್ಲ ಅಂಶಗಳ ಜೊತೆಯಲ್ಲೇ ರಾಮಾಯಣದರ್ಶನಂ ಕಾವ್ಯವು ಒಂದು ಸಾಹಿತ್ಯಕ ದಿಗ್ವಿಜಯ ಎಂಬುದನ್ನೂ ನಾವು ನೆನಪಿನಲ್ಲಿಡಬೇಕು. ಮಿಲ್ಟನ್ ಕವಿಯ ರೀತಿಯಲ್ಲಿ ಬ್ಲಾಂಕ್‌ವರ್ಸ್ ಎಪಿಕ್ ಬರೆಯಬೇಕೆನ್ನುವ ಆಸೆ ತಮಗೆ ಮೊದಲಿನಿಂದಲೂ ಇತ್ತು ಎಂಬುದಾಗಿ ಕುವೆಂಪು ಅವರು ತಮ್ಮ ಆತ್ಮಕಥೆಯಲ್ಲಿ ಹೇಳಿಕೊಂಡಿದ್ದಾರೆ. ಜೊತೆಗೆ ಹೋಮರ್‌ನ ಕಲೆಯೂ ಅವರನ್ನು ಪ್ರಭಾವಿಸಿದೆ. ಅಂದರೆ ಕೇವಲ ಭಾರತೀಯ ಕಾವ್ಯಪರಂಪರೆಗಳು ಮಾತ್ರವಲ್ಲ ಜಾಗತಿಕ ಮಹಾಕಾವ್ಯ ಪರಂಪರೆಯು ಕುವೆಂಪು ಅವರ ಪ್ರಜ್ಞೆಯನ್ನು ರೂಪಿಸಿದೆ. ತಮ್ಮ ಕಾವ್ಯಕ್ಕೆ ಬೇಕಾದ ಭಾಷೆಗಾಗಿ, ಬೇಕಾದ ಛಂದಸ್ಸಿಗಾಗಿ, ಬೇಕಾದ ಅಲಂಕಾರ ಸಾಮಗ್ರಿಗಳಿಗಾಗಿ ಕುವೆಂಪು ದೊಡ್ಡ ಹೋರಾಟವನ್ನೇ ನಡೆಸಿದ್ದಾರೆ. ಅದರ ಫಲವೇ ಅವರ ಮಹಾಛಂದಸ್ಸು. ಹಳಗನ್ನಡ, ನಡುಗನ್ನಡ, ಹೊಸಗನ್ನಡ ಭಾಷೆ ಮತ್ತು ನುಡಿಗಟ್ಟುಗಳ ಹದವಾದ ಮಿಶ್ರಣವೆನಿಸುವ ಕಾವ್ಯಭಾಷೆಯೊಂದರ ನಿರ್ಮಾಣ. ಹೋಮರ್‌ನಿಂದ ಅವರು ಪಡೆದ ಮಹೋಪಮೆಗಳ ಅನುಸಂಧಾನ. ಇಂಥ ಸಾಹಿತ್ಯಿಕ ತಪಸ್ಸಿನ ಫಲವಾಗಿ ವಿಶಿಷ್ಟವಾದ ಕಾವ್ಯಶೈಲಿಯೊಂದನ್ನು ಕುವೆಂಪು ತಮ್ಮ ಅನೇಕ ಪ್ರಯೋಗಗಳ ಫಲವಾಗಿ ನಿರ್ಮಿಸಿಕೊಂಡಿದ್ದಾರೆ.

ರಾಮಾಯಣದರ್ಶನಂ ಕಾವ್ಯದ ನಿರ್ಮಾಣದ ಹಿಂದೆ ಕರಿಸಿದ್ಧನಂತಹ ಕಥನ ಕವನಗಳಿವೆ. ಚಿತ್ರಾಂಗದ, ಸಾಗರೋಲ್ಲಂಘನದಂಥ ಖಂಡಕಾವ್ಯಗಳಿವೆ. ಸರಳ ರಗಳೆಯಲ್ಲಿ ಅವರು ಬರೆದ ಬೆರಳ್ಗೆಕೊರಳ್, ಸ್ಮಶಾನಕುರುಕ್ಷೇತ್ರದಂತಹ ನಾಟಕಗಳಿವೆ. ಈ ಎಲ್ಲ ಪ್ರಯೋಗಗಳ ಮೂಲಕ ಅವರು ಸಾಧಿಸಿದ, ಕಾವ್ಯಶೈಲಿಯ ಪರಿಪಾಕ ರಾಮಾಯಣ ದರ್ಶನಂ ಕಾವ್ಯದಲ್ಲಿ ಕಂಡುಬರುತ್ತದೆ. ಹಿಂದೆಲ್ಲಾ ವೃತ್ತಕಂದಗಳಲ್ಲಿ (ನಾಗಚಂದ್ರ), ಷಟ್ಪದಿಯಲ್ಲಿ (ತೊರವೆನರಹರಿ), ಗದ್ಯದಲ್ಲಿ(ಮುದ್ದಣ್ಣ) ಮೈಪಡೆದಿದ್ದ ರಾಮಕಥೆಯು, ಹೊಸಯುಗದಲ್ಲಿ ಮಹಾಛಂದಸ್ಸಿನಲ್ಲಿ ಆಕಾರ ಪಡೆದಿದೆ.

ಈ ಒಡಲ ಪರಿವರ್ತನೆಯೂ ಕೂಡ ಕಥಾಂತರದ ಒಂದು ಪರಿಕ್ರಮವೇ ಆಗಿದೆ. ಹೀಗೆ ಕುವೆಂಪು, ಕಾವ್ಯದ ಅಂತರಂಗ ಮತ್ತು ಬಹಿರಂಗಗಳಲ್ಲಿ ಕಥಾಂತರವನ್ನು ಸಾಧಿಸಿದ ಕವಿಯಾಗಿದ್ದಾರೆ. ಹಾಗೆ ನೋಡಿದರೆ ಈ ಅಂತರಂಗ ಬಹಿರಂಗಗಳು ಬೇರ್ಪಡಿಸಲಿಕ್ಕಾಗದ ಅಖಂಡ ಶರೀರದ ಅಂಶಗಳಾಗಿವೆ.

ಕಥಾಂತರದ ನೆಲೆಯಲ್ಲಿ ಕುವೆಂಪು ಅವರನ್ನು ಅನುಸರಿಸಿದ ಕವಿಯೆಂದರೆ ಶ್ರೀ.ವೀರಪ್ಪಮೊಯಿಲಿಯವರು. ಈ ಅನುಸರಣೆಯು ಭಾಷೆ, ಛಂದಸ್ಸು ಮತ್ತು ಶೈಲಿಯು ದೃಷ್ಟಿಯಿಂದಲೂ ಕೂಡ ಆಗಿರುವಂತಹದ್ದು ಕುವೆಂಪು ಅವರದ್ದು 'ಶ್ರೀರಾಮಾಯಣದರ್ಶನಂ' ಕಾವ್ಯವಾದರೆ ವೀರಪ್ಪಮೊಯಲಿಯವರದು 'ಶ್ರೀರಾಮಾಯಣ ಮಹಾನ್ವೇಷಣಂ' ಕಾವ್ಯ. ಅನ್ವೇಷಣೆ ಮತ್ತು ದರ್ಶನಗಳು ತೀರ ಭಿನ್ನಾಂಶಗಳೇನಲ್ಲ. ಎರಡೂ ಕೂಡ ಕಥೆಯ ಶರೀರದ ಮೂಲಕ ಇನ್ನೇನನೊ ನೋಡುವುದಕ್ಕೆ ಮಾಡಲಾಗುವ ಯತ್ನಗಳು. ಈ ಹೋಲಿಕೆ ಇಲ್ಲಿಗೆ ಮುಗಿಯುತ್ತದೆ. ಮೊಯಿಲಿಯವರ ಮಹಾನ್ವೇಷಣ ಕಾವ್ಯ ಸಹ ವಾಲ್ಮೀಕಿ ರಾಮಾಯಣವನ್ನೇ ಮೂಲ ಸಾಮಾಗ್ರಿಯಾಗಿ ಇರಿಸಿಕೊಂಡಿದೆ. ರಾಮಾಯಣ ಕಥೆಯನ್ನು ಮೊಯಿಲಿಯವರಂತೆ ರಾಜಕೀಯ ಓದಿಗೆ (Political Reading) ಒಳಪಡಿಸಿದ ಕವಿ ಇನ್ನೊಬ್ಬ ಇಲ್ಲ. ಅದಕ್ಕೆ ಕಾರಣ ಮೊಯಿಲಿಯವರ ವ್ಯಕ್ತಿತ್ವದಲ್ಲೇ ಇದೆ. ಅವರು ಒಬ್ಬ ಕ್ರಿಯಾಶೀಲ ರಾಜಕಾರಣಿಯಾಗಿ ತೊಡಗಿಸಿಕೊಂಡವರು. ಜೊತೆಗೆ ನ್ಯಾಯವಾದಿಯಾಗಿ ಹೆಸರು ಮಾಡಿದ್ದವರು. ಮುಖ್ಯಮಂತ್ರಿಯಾಗಿ ಅಧಿಕಾರದ ಚುಕ್ಕಾಣಿ ಹಿಡಿದು, ಸರ್ಕಾರವನ್ನು ನಡೆಸಿದ ಅನುಭವವುಳ್ಳವರು. ರಾಜಕೀಯ ಏಳು-ಬೀಳುಗಳು, ಸ್ವಾರ್ಥಗಳು, ಒಳಸುಳಿಗಳು ಇವುಗಳ ತಲಸ್ಪರ್ಶಿ ಅನುಭವವುಳ್ಳವರು. ಕಳೆದ ದಶಕಗಳಲ್ಲಿ ಭಾರತದಲ್ಲಿ ಸಾಮಾಜಿಕವಾಗಿ, ರಾಜಕೀಯವಾಗಿ,

ಸಾಂಸ್ಕೃತಿಕವಾಗಿ ನಡೆದ ಪಲ್ಲಟಗಳನ್ನು ನೇರವಾಗಿ ಕಂಡುಂಡು ಅನುಭವಿಸಿದವರು. ಅಸಮಾನತೆ, ಶೋಷಣೆ, ಸ್ವಾತಂತ್ರ್ಯಾ ನಂತರದ ದಿಗಿಲು ಹುಟ್ಟಿಸುವ ಭ್ರಷ್ಟಾಚಾರ, ಅಧಿಕಾರ ಮತ್ತು ಧನವ್ಯಾಮೋಹ, ಭಯೋತ್ಪಾದನೆಗಳ ಹಿಂಸಾಕಾಂಡ, ದಿನನಿತ್ಯ ನಾವು ನೋಡುತ್ತಿರುವ ಕೆಳವರ್ಗದ ನಿರಂತರ ಶೋಷಣೆ, ಬುಡಕಟ್ಟು ಜನಾಂಗದ ಒಕ್ಕಲೆಬ್ಬಿಸುವಿಕೆ, ಪಾಶ್ಚಾತ್ಯ ಸಂಸ್ಕೃತಿಯ ಆಕ್ರಮಣ, ದೇಸೀ ಸಂಸ್ಕೃತಿಗೆ ಒದಗುತ್ತಿರುವ ಆಘಾತ ಈ ಎಲ್ಲ ಉತ್ಪಾತಗಳು ಮೊಯಿಲಿಯವರ ಪ್ರಜ್ಞೆಯನ್ನು ರೂಪಿಸಿವೆ. ಇವುಗಳ ಪರಿಹಾರಕ್ಕೆ ಅವರ ಪ್ರಜ್ಞೆ ಹಾರೈಸಿದೆ. ಈ ಎಲ್ಲ ಸಂಘರ್ಷಗಳ ಪ್ರಜ್ಞೆ ರಾಮಾಯಣವನ್ನು ಹೊಸ ನೆಲೆಯಲ್ಲಿ ಕಾಣುವಂತೆ ಮಾಡಿದೆ. ಅದರ ಫಲವೇ ಅವರು ರಚಿಸಿರುವ ಶ್ರೀರಾಮಾಯಣ ಮಹಾನ್ವೇಷಣಂ.

ಸ್ವತಃ ಮೊಯಿಲಿಯವರೇ ಹೇಳುವಂತೆ ಶ್ರೀರಾಮಾಯಣದ ಲೋಕಧ್ವನಿಯನ್ನು ತಮ್ಮ ಒಳಧ್ವನಿಯಾಗಿ ಹೊರಹೊಮ್ಮಿಸುವುದು ಅವರ ಉದ್ದೇಶವಾಗಿದೆ. ಮೂಲ ಕಾವ್ಯದ ನಾಯಕ ರಾಮನಾಗಿದ್ದರೆ, ಮೊಯಿಲಿಯವರ ಕಥಾನಾಯಕ ಲಕ್ಷ್ಮಣ. ಅವರ ಪಾಲಿಗೆ ಲಕ್ಷ್ಮಣ ನವಮನ್ವಂತರದ ಹೊಸ ವೈಚಾರಿಕತೆಯ ಧ್ವನಿ, ಶ್ರೀರಾಮನ ಮರ್ಯಾದ ಪುರುಷೋತ್ತಮತ್ವಕ್ಕಿಂತ ಲಕ್ಷ್ಮಣನ ತೀವ್ರವಾದ ಕ್ರಿಯಾಶೀಲವಾದ ವ್ಯಕ್ತಿತ್ವ ಮೊಯಿಲಿಯವರಿಗೆ ಪ್ರಿಯವಾಗುವುದು ಸಹಜವೇ ಆಗಿದೆ. ನಿಜವಾಗಿಯೂ ಲಕ್ಷ್ಮಣನು ಮೊಯಿಲಿಯವರ ಪ್ರಜ್ಞಾವಲಯದ ಮಾನಸಪುತ್ರ. ಕಾಲದ ಅನಂತ ಪ್ರವಾಹದ ಉಬ್ಬರದಲ್ಲಿ ಮುಚ್ಚಿಹೋಗಿರುವ ಹಳ್ಳಕೊಳ್ಳಗಳನ್ನು ಮತ್ತೆ ಬಯಲಿಗೆ ತರುವುದೇ ಮೊಯಿಲಿಯವರ ಕಾವ್ಯದ ಗುರಿಯಾಗಿದೆ. ಅದಕ್ಕಾಗಿಯೇ ಅವರು ರಾಮಾಯಣದ ಕಥಾವಾಹಿನಿಯ ಉದ್ದಕ್ಕೂ ಮುಳುಗಿಹೋಗಿರುವ ಬಂಡಾಯದ ಧ್ವನಿಗಳನ್ನು ಮತ್ತೆ ಮೇಲೆತ್ತಲು ಯತ್ನಿಸುತ್ತಾರೆ. ಶೋಷಿತ ಪರವಾದ ನಿಲುವು, ಸ್ತ್ರೀಪರವಾದ ನಿಲುವು, ಯುದ್ಧವಿರೋಧಿ ನಿಲುವು, ಭಯೋತ್ಪಾದನೆಯ ವಿರುದ್ಧ ನಿಲುವು, ಜಾತಿ ವರ್ಗ ಲಿಂಗಭೇದಗಳ ವಿರುದ್ಧ ಸಾತ್ವಿಕ ಆಕ್ರೋಶ, ಮೇಲ್ವರ್ಗದ ಸಂಸ್ಕೃತಿಯು ತಳ ಸಂಸ್ಕೃತಿಗಳನ್ನು ದಮನಗೊಳಿಸುವ ಬಗ್ಗೆ ಆಕ್ರೋಶ ಅನ್ವೇಷಣ ಕಾವ್ಯದಲ್ಲಿ ಮತ್ತೆ ಮತ್ತೆ ಕಾಣುತ್ತದೆ.

ಆಧುನಿಕ ಜಾಗತಿಕ ಸಮಾಜವು ಈಗಾಗಲೇ ಮಾರಕವಾದ ಎರಡು ಮಹಾಯುದ್ಧಗಳನ್ನು ಕಂಡಿದೆ. ಶಕ್ತರಾಷ್ಟ್ರಗಳು ಜಗತ್ತನ್ನೇ ನಿರ್ಮೂಲ ಮಾಡಬಲ್ಲ ಅಣ್ವಾಸ್ತ್ರಗಳನ್ನು ಸಿದ್ಧಮಾಡಿಕೊಂಡು ಕುಳಿತಿದೆ. ಇಂತಹ ಸಂದರ್ಭದಲ್ಲಿ ಭಾರತದಂತಹ ಅಭಿವೃದ್ಧಿಪರವಾದ ತೃತೀಯ ರಾಷ್ಟ್ರ

ವಿಶ್ವಶಾಂತಿಗಾಗಿ ಹೋರಾಟ ನಡೆಸುತ್ತಾ ಇದೆ. ವಿಶ್ವಶಾಂತಿಯು ಭಾರತದಿಂದ ಸಾಧ್ಯ ಎಂದು ಮಾಸ್ತಿಯವರಂತೆ ಮೊಯಿಲಿಯವರೂ ಖಚಿತವಾಗಿ ನಂಬಿದ್ದಾರೆ. ಸೀತಾ ಸ್ವಯಂವರ ಸಂದರ್ಭದಲ್ಲಿ ಪಣವಾಗಿ ಒಡ್ಡಿರುವ ಶಿವಧನಸ್ಸು ಆಧುನಿಕ ಅಣ್ವಾಸ್ತ್ರದ ಪ್ರತೀಕವೆಂದು ಮೊಯಿಲಿ ಭಾವಿಸುತ್ತಾರೆ. ಇಂತಹ ಅಣ್ವಾಸ್ತ್ರಗಳನ್ನು ವಿಸರ್ಜಿಸುವುದು ತುರ್ತಾದ ಅಗತ್ಯವಾಗಿದೆ. ಆದ ಕಾರಣವೇ ವಿಶ್ವಾಮಿತ್ರ ಶಿವಧನಸ್ಸನ್ನು ನಿಷ್ಕ್ರೀಯಗೊಳಿಸಲು ರಾಮನಿಗೆ ಬೋಧಿಸುತ್ತಾನೆ. ಅದೇನಾದರೂ ರಾವಣನಂತಹ ಸರ್ವಾಧಿಕಾರಿ ಶಕ್ತಿಗೆ ದೊರಕಿದ್ದೇ ಆದರೆ ಜಗತ್ತಿನ ನಾಶ ಖಚಿತ ಎಂದು ವಿಶ್ವಾಮಿತ್ರ ಋಷಿ ಭಾವಿಸುತ್ತಾನೆ. ಪರಶುರಾಮನ ಧನಸ್ಸನ್ನು ರಾಮನು ಭಂಗಿಸುವುದರಲ್ಲೂ ಇದೇ ವೈಚಾರಿಕ ಪ್ರಣಾಳಿ ಕಂಡುಬರುತ್ತದೆ. ತನ್ನ ಕ್ರಾಂತದೃಷ್ಟಿ ಹಳೆಯದಾಯಿತು, ಹೊಸಯುಗದ ಅಗತ್ಯ ಹೊಸಕ್ರಾಂತದೃಷ್ಟಿ ಎಂಬುದಾಗಿ ಪರಶುರಾಮನು ರಾಮನನ್ನು ಹೊಸಯುಗದ ಕ್ರಾಂತಿಪುರಷನೆಂದು ಒಪ್ಪಿಕೊಳ್ಳುತ್ತಾನೆ. ಕ್ರಾಂತದೃಷ್ಟಿಯು ಕಾಲಕಾಲಕ್ಕೆ ಬದಲಾಗಬೇಕಾದ ಸಂಗತಿ ಎಂಬುದು ಮೊಯಿಲಿಯವರ ವಿಚಾರವಾಗಿದೆ.

ಅಹಲ್ಯೆ ಮತ್ತು ಇಂದ್ರರ ಪ್ರಸಂಗದಲ್ಲಿ ಮೊಯಿಲಿಯವರು ಸ್ತ್ರೀಪರ ದೃಷ್ಟಿಕೋನ ವ್ಯಕ್ತವಾಗುತ್ತದೆ. ಇಲ್ಲಿ ಅಹಲ್ಯೆಯನ್ನು ಗೌತಮನು ಶಪಿಸುವುದಿಲ್ಲ. ಇಂದ್ರನಿಗೆ ಯಾವ ಶಿಕ್ಷೆಯಾಗಬೇಕೆಂಬ ಬಗ್ಗೆ ಋಷಿಮುನಿಗಳು ಸಭೆ ಸೇರಿ ನಿರ್ಣಯಿಸಬೇಕಾಗುತ್ತದೆ. ಆ ಸಭೆಯಲ್ಲಿ ಉಪಸ್ಥಿತರಿದ್ದ ವಿಶ್ವಾಮಿತ್ರ, ಇಂದ್ರನ ವಿರುದ್ಧ ನೇರವಾಗಿ ಮಾತನಾಡಲು ಹಿಂಜರಿಯುತ್ತಾನೆ. ಹಾಗೆ ಮಾತಾಡಿದಲ್ಲಿ ತನ್ನ ಬ್ರಹ್ಮರ್ಷಿ ಪದವಿಗೆ ಎಲ್ಲಿ ತಡೆಯುಂಟಾಗುತ್ತದೋ ಎಂಬ ಆತಂಕ. ರಾಮನೆದುರು ಈ ಪ್ರಸಂಗವನ್ನು ವಿವರಿಸುವಾಗ ವಿಶ್ವಾಮಿತ್ರ ಆ ಬಗ್ಗೆ ಪಶ್ಚಾತ್ತಾಪ ಪಡುತ್ತಾನೆ. ಸಹಬಾಳ್ವೆ, ಸಮಾನತೆ, ಪ್ರಜಾಪ್ರಭುತ್ವದ ಆಶಯಗಳು ಮೊಯಿಲಿಯವರ ಕಾವ್ಯದಲ್ಲಿ ಮತ್ತೆ ಮತ್ತೆ ಅಭಿವ್ಯಕ್ತಿ ಪಡೆಯುತ್ತದೆ. ಕಾಡಿನಲ್ಲಿ ಬೇರೆ ಬೇರೆ ಜಾತಿಯ ವೃಕ್ಷಗಳು, ಪಕ್ಷಿ, ಪ್ರಾಣಿಗಳು ಸಹಬಾಳ್ವೆ ನಡೆಸುತ್ತಿವೆ. ಇದು ನಮಗೆ ಆದರ್ಶವಾಗಬೇಕೆಂದು ಮೊಯಿಲಿಯವರ ಸೀತೆ ಅಭಿಪ್ರಾಯಪಡುತ್ತಾಳೆ. ಅದೇ ರೀತಿ ಪರಿಸರನಾಶ, ಗಣಿಗಾರಿಕೆ ಇವುಗಳ ಬಗ್ಗೆಯೂ ಮೊಯಿಲಿಯ ಕಾವ್ಯ ಚಿಂತಿಸುತ್ತದೆ. ಜನಪದ ಆಚರಣೆಗಳನ್ನು ಮೊಯಿಲಿಯವರು ತಮ್ಮ ಕಾವ್ಯ ಚಿಂತಿಸುತ್ತದೆ. ಜಾನಪದ ಆಚರಣೆಗಳನ್ನು ಮೊಯಿಲಿಯವರು ತಮ್ಮ ಕಾವ್ಯದಲ್ಲಿ ಮತ್ತೆ ಮತ್ತೆ ಬಳಸಿಕೊಳ್ಳುತ್ತಾರೆ. ಎಲ್ಲಕ್ಕಿಂತ ಮುಖ್ಯವಾಗಿ ಮುಖ್ಯವಾಗಿ ಪ್ರಜೆಗಳ ಹಿತಕ್ಕಾಗಿ ರಾಜಸತ್ತೆಯಲ್ಲಿ ನ್ಯಾಯಾಂಗವೂ ಬಲಿಷ್ಠವಾಗಬೇಕೆಂದು ಕವಿ ಪ್ರತಿಪಾದಿಸಿರುವ ಕ್ರಮ. ಮೊಯಿಲಿಯವರ

ಅನ್ವೇಷಣ ಕಾವ್ಯವು ರಾಮಾಯಣದ ಬೇರೆ ಬೇರೆ ಪರಂಪರೆಗಳಿಂದ ಪಡೆದ ಪ್ರೇರಣೆಗಳು ಕಡಿಮೆಯೇ. ಅವರ ಕಾವ್ಯದ ಪ್ರಧಾನ ಮೂಲ ಸಾಮಗ್ರಿ ವೈದಿಕ ಪರಂಪರೆಯ ವಾಲ್ಮೀಕಿ ರಾಮಾಯಣ. ಸಮಕಾಲೀನ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಬಿಕ್ಕಟ್ಟುಗಳನ್ನು ಈ ಕೃತಿಯ ಕಥಾಹಂದರದ ಮೂಲಕ ಅನ್ವೇಷಣೆ ಮಾಡಲು ಮೊಯಿಲಿ ಯತ್ನಿಸಿದ್ದಾರೆ. ಈ ಮಹಾನ್ವೇಷಣೆಯ ಮುಂಚೂಣಿಯ ಕೇಂದ್ರ ಲಕ್ಷ್ಮಣನಾಗಿದ್ದಾನೆ.

ಮಾಸ್ತಿಯವರ ಶ್ರೀರಾಮ ಪಟ್ಟಾಭಿಷೇಕವು ಈ ಎರಡು ಕಾವ್ಯಗಳಿಗಿಂತ ತೀರ ಬೇರೆಯದೇ ಆದ ನೆಲೆಯಲ್ಲಿ ನಿಲ್ಲುವ ಕಾವ್ಯ. ಮಾಸ್ತಿಯವರ ದೃಷ್ಟಿಯಲ್ಲಿ ವಾಲ್ಮೀಕಿಯ ರಾಮಾಯಣವೇ ಅನೇಕ ಪ್ರಕ್ಷೇಪಗಳಿಂದ ವಿರೂಪಗೊಂಡಿದೆ. ಅದಕ್ಕೆ ಕಾರಣ ರಾಮಾಯಣದ ಕಥಾಹಂದರವನ್ನು ಕಾಲಕಾಲಕ್ಕೆ ಮಾರ್ಪಡಿಸಿದ ಕವಿಗಳ ಧಾರ್ಮಿಕ ನಂಬಿಕೆಗಳು, ಶ್ರದ್ಧಾಚಾರಗಳು, ಬಾಲಿಶವೆನಿಸುವ ಅದ್ಭುತರಮ್ಯ ಸಂಗತಿಗಳಲ್ಲಿ ಮುಳುಗುವ ಮನೋಧರ್ಮ. ಆದುದರಿಂದ ಮೂಲ ರಾಮಾಯಣವನ್ನು ಹೊಸಕಾಲಕ್ಕೆ ಸಮ್ಮತವಾಗುವಂತೆ ಶೋಧಿಸಿ ಮೂಲರೂಪವನ್ನು ಕಂಡುಕೊಳ್ಳುವುದು ಅತ್ಯಗತ್ಯ. ರಾಮಾಯಣದ ಕಥೆಯು ಆಧುನಿಕರ ವೈಚಾರಿಕತೆ ಮತ್ತು ವೈಜ್ಞಾನಿಕ ದೃಷ್ಟಿಕೋನಗಳಿಗೆ ಸಹಜವೆನಿಸುವಂತಿರಬೇಕು; ಸ್ವಾಭಾವಿಕವೆನಿಸುವಂತಿರಬೇಕು; ಹೌದು, ಇದು ನಡೆದಿದ್ದರೆ ಹೀಗೆ ನಡೆದಿರಬೇಕು ಎನ್ನಿಸುವಂತಿರಬೇಕು. ಇದು ಪಟ್ಟಾಭಿಷೇಕ ಕಾವ್ಯವನ್ನು ರಚಿಸುವಾಗ ಇರುವ ಮಾಸ್ತಿಯವರ ನಿಲುವು. ಅವರೇ ಹೇಳುವಂತೆ, ವಾಲ್ಮೀಕಿ ರಾಮಾಯಣದ ಅನೇಕ ಭಾಗ 'ವಾಲ್ಮೀಕಿಕೃತ' ಅಲ್ಲ. ಅದ್ಭುತಗಳನ್ನು, ಪವಾಡಗಳನ್ನು ನಂಬದೇ ಇರುವುದು, ಮಾನವ ವ್ಯವಹಾರದಲ್ಲಿ ದೇವತೆಗಳು ಪ್ರತ್ಯಕ್ಷ ಪ್ರವೇಶಿಸಿದರು ಎಂಬುದನ್ನು ಒಪ್ಪದೇ ಇರುವುದು, ಇದರ ಫಲವಾಗಿ ನಾನು ಕಥೆಯಲ್ಲಿ ಮಾಡಿರುವ ಮಾರ್ಪಾಟುಗಳನ್ನು ಅವನ್ನು ಏಕೆ ಮಾಡಿದೆ ಎಂಬ ವಿಷಯವನ್ನು ಕಾವ್ಯದ ಕೊನೆಯ ಟಿಪ್ಪಣಿಗಳಲ್ಲಿ ಸೂಚಿಸಿರುವುದಾಗಿ ಅವರು ಹೇಳಿದ್ದಾರೆ. ಅಂದರೆ ಮಾಸ್ತಿಯವರ ಕಥಾಂತರವನ್ನು ಪ್ರಚೋದಿಸುವುದು, ಕುವೆಂಪು ಮೊಯಿಲಿಯವರಿಗಿಂತ ಭಿನ್ನವಾದ ಒಂದು ನಿಲುವು. ಆ ಭಿನ್ನತೆಯೆಲ್ಲಿದೆ ಎಂದರೆ ಕುವೆಂಪು ಮತ್ತು ಮೊಯಿಲಿಯ ಹೊಸ ಕಥೆಯೊಂದನ್ನು ಕಟ್ಟಲಿಕ್ಕೆ ಹೊರಟರೆ ಮಾಸ್ತಿಯವರು ಹಳೆಯ ಕಥೆಯನ್ನೇ ನಿರ್ದಿಷ್ಟ ಗೊಳಿಸಲಿಕ್ಕೆ ಹೊರಟಿದ್ದಾರೆ. ಒಂದು ಕನ್ಸರ್ವೇಟಿವ್ ಆದ ನಿಲುವು. ಇಷ್ಟೊಂದು ಕ್ರಾಂತಿದರ್ಶಕವಾದ ನಿಲುವು-ಮಾಸ್ತಿಯವರದ್ದು ಮೌಲ್ಯ ನಿಷ್ಠೆ, ಕುವೆಂಪು ಅವರದ್ದು ಮೌಲ್ಯಶೋಧನೆ. ಆಶ್ಚರ್ಯವೆಂದರೆ ಒಂದು ಉತ್ತಮ ಕಾವ್ಯವು ಮೌಲ್ಯನಿಷ್ಠೆಯಿಂದಲೂ ಹುಟ್ಟಬಹುದು;

ಮೌಲ್ಯಶೋಧನೆಯಿಂದಲೂ ಹುಟ್ಟಬಹುದು. ಶ್ರೀರಾಮಾಯಣದರ್ಶನಂ, ಶ್ರೀರಾಮಪಟ್ಟಾಭಿಷೇಕ ಅಂತಹ ಎರಡು ಕಾವ್ಯಗಳಾಗಿವೆ. ಕಾಲ ಪರೀಕ್ಷಿತವಾಗ, ಆರ್ಷೇಯವಾದ ಮೌಲ್ಯಗಳು ಸದ್ಯ ಕಾಲೀನ ಬದುಕಿನ ಚೆಲುವಿಗೂ ಸಮ್ಮತ ಎನ್ನುವುದು ಮಾಸ್ತಿಯವರ ನಿಲುವು. ಹೊಸ ಕಾಲಕ್ಕೆ ಹೊಸ ಮೌಲ್ಯಗಳ ಶೋಧನೆಯಾಗಬೇಕೆನ್ನುವುದು ಕುವೆಂಪು ಅವರ ನಿಲುವು.

ಮಾಸ್ತಿಯವರ ಶ್ರೀರಾಮಪಟ್ಟಾಭಿಷೇಕ ಕಾವ್ಯವು ಅವರ ವಾಸ್ತವತಾವಾದದ ಪರಿಣಾಮವಾದ ಕಾವ್ಯವಾಗಿದೆ. ಜೊತೆಗೆ ಮಾಸ್ತಿಯವರು ರಾಮಾಯಣವನ್ನು ಮಾನವಶಾಸ್ತ್ರದ ನೆಲೆಯಲ್ಲಿಯೂ ಪರಿಗ್ರಹಿಸುತ್ತಿದ್ದಾರೆ. ಅಯೋಧ್ಯೆಯ ಆರ್ಯಸಮಾಜ, ಕಿಷ್ಕಿಂಧೆಯ ವಾನರ ಸಮಾಜ ಮತ್ತು ಲಂಕೆಯ ರಾಕ್ಷಸ ಸಮಾಜವು ಭಿನ್ನ ಭಿನ್ನವಾದ ನಂಬಿಕೆ, ಆಚರಣೆ, ಬಾಳುವ ಕ್ರಮಗಳಿಂದ ಕಟ್ಟಿಕೊಂಡ ನಾಗರಿಕತೆಗಳಾಗಿವೆ. ವಾನರರು ಕೋತಿಗಳಲ್ಲ, ರಾವಣಾದಿಗಳು ರಾಕ್ಷಸರೂ ಅಲ್ಲ. ಎಲ್ಲರು ಮನುಷ್ಯರೇ. ಸಂಪ್ರದಾಯಗಳ ಭಿನ್ನತೆಯಿಂದಾಗಿ ಒಬ್ಬರಿಗೊಬ್ಬರು ಅಕರಾಳ–ವಿಕರಾಳವಾಗಿ ಕಾಣುತ್ತಿದ್ದಾರೆ, ಅಷ್ಟೇ. ವಾನರ ಸಂಸ್ಕೃತಿಯಲ್ಲಿ, ಗಂಡ ತೀರಿದ ಮೇಲೆ ಹೆಂಡತಿಯಾದವಳು ಗಂಡನ ತಮ್ಮನೊಂದಿಗೆ ಕೂಡಿ ಬದುಕಬೇಕಾಗುತ್ತದೆ. ಅದು ಆ ಸಮಾಜದ ಪದ್ಧತಿ. ಅದನ್ನು ತಪ್ಪೆಂದು ಭಾವಿಸಬಾರದು ಎಂದು ವಾಲಿಯ ಹೆಂಡತಿ ತಾರೆ ಹೇಳುತ್ತಾಳೆ.

ಮಾಸ್ತಿಯವರ ಕಾವ್ಯ ಸಹಜ, ಸ್ವಾಭಾವಿಕ, ಯುದ್ಧಗಳೂ ಇಲ್ಲಿ ಕಾವುಗೊಳ್ಳುವುದಿಲ್ಲ. ಎಲ್ಲವೂ ಮೆಲುನಡೆಯಲ್ಲಿ ತಣ್ಣನೆಯ ಮನಸ್ಸಲ್ಲಿ ಸಂಭವಿಸುತ್ತಾ ಹೋಗುತ್ತವೆ. ಕಾವ್ಯವನ್ನು ನಡೆಸುತ್ತಿರುವುದು ಒಂದು ಮಾಗಿದ ಮನಸ್ಸು. ಅಲ್ಲಿ ಉದ್ರೇಕಕ್ಕೆ ಸ್ಥಳವಿಲ್ಲ. ಪ್ರಸನ್ನಚಿತ್ತದಿಂದ ಮಾಸ್ತಿ ಜೀವನದ ಒಳಹರಿವನ್ನು ಚಿತ್ರಿಸುತ್ತಾ ಹೋಗುತ್ತಾರೆ. ಪಟ್ಟಾಭಿಷೇಕ ಕಾವ್ಯದಲ್ಲಿ ಆಂಜನೇಯ ಸಮುದ್ರವನ್ನು ಹಾರುವುದಿಲ್ಲ, ಈಜುತ್ತಾನೆ. ರಾಮನು ಇಂದ್ರನ ವಿಮಾನದಲ್ಲಿ ಕುಳಿತು ಯುದ್ಧ ಮಾಡುವುದಿಲ್ಲ. ಪದಾತಿಯಾಗಿಯೇ ರಾವಣನೊಂದಿಗೆ ಹೋರಾಟ ಮಾಡುತ್ತಾನೆ. ಸೀತೆ ಅಗ್ನಿಪ್ರವೇಶ ಮಾಡುವುದಿಲ್ಲ; ಕೊಂಡ ಹಾಯುತ್ತಾಳೆ. ಎಲ್ಲಕ್ಕಿಂತ ಮುಖ್ಯವಾಗಿ ರಾಮನು ದೇವರಲ್ಲ; ತನ್ನ ನಡವಳಿಕೆಯಿಂದ ಪುರುಷೋತ್ತಮನಾಗಿ ದೈವತ್ವದ ಹಂತಕ್ಕೇರಿದವನು. ಹೀಗೆ ಮಾಸ್ತಿಯವರ ಕಾವ್ಯ ಮನುಷ್ಯತ್ವ ಸಾಧ್ಯತೆಯನ್ನು ಕೀರ್ತಿಸುವುದರಿಂದ ತನ್ನಷ್ಟಕ್ಕೇ ಒಂದು ಮೌಲಿಕತೆಯನ್ನು ಪಡೆಯುವ ಕೃತಿಯಾಗುತ್ತದೆ.

## ಪ್ರಧಾನ ಅಧ್ಯಯನ ಸಾಮಗ್ರಿ

೧. ಶ್ರೀ ರಾಮಾಯಣ ದರ್ಶನಂ : ಕುವೆಂಪು, ೧೯೭೮(ಎ.ಮು), ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ

೨. ಶ್ರೀರಾಮಪಟ್ಟಾಭಿಷೇಕ : ಮಾಸ್ತಿ ವೆಂಕಟೇಶ ಅಯ್ಯಂಗಾರ್, ೧೯೯೨(ಎ.ಮು),ಮಾಸ್ತಿವೇಂಕಟೇಶಅಯ್ಯಂಗಾರ್ ಜೀವನ ಕಾರ್ಯಾಲಯ(ಟ್ರಸ್ಟ್), ಬೆಂಗಳೂರು-೧೩

೩. ಶ್ರೀರಾಮಾಯಣ ಮಹಾನ್ವೇಷಣಂ : ವೀರಪ್ಪ ಮೊಯಿಲಿ,೨೦೦೧-೨೦೦೫ ಮಾಹೇಶ್ವರಿ ಪ್ರಕಾಶನ, ನಂ-೧, ಆರ್.ಟಿ.ನಗರ ಬೆಂಗಳೂರು-೩೨

## ಪೂರಕ ಅಧ್ಯಯನ ಸಾಮಗ್ರಿ

೧. ಡಾ.ಸಿ.ಎನ್.ಶ್ರೀನಿವಾಸ ಅಯ್ಯಂಗಾರ್ : ಕನ್ನಡ ವಾಲ್ಮೀಕಿ ರಾಮಾಯಣ (ಸಂ-೧ಮತ್ತು೨) ೧೯೭೧, ಡಿ.ವಿ.ಕೆ.ಮೂರ್ತಿ ಪ್ರಕಾಶಕರು, ಮೈಸೂರು-೪

೨. ವಿದ್ವಾನ್ ಎನ್.ರಂಗನಾಥಶರ್ಮಾ : ಶ್ರೀರಾಮಕಥಾಮಂಜರಿ (ಸಂಪೂರ್ಣ ರಾಮಾಯಣ) ೨೦೦೦, ರಾಮಾಯಣ ಪ್ರಕಾಶನ ಸಮಿತಿ, ನರಸಿಂಹರಾಜಕಾಲೋನಿ, ಬೆಂಗಳೂರು-೧೮

೩. ವಿ.ಸೀತಾರಾಮಯ್ಯ : ವಾಲ್ಮೀಕಿ ರಾಮಾಯಣ, ೧೯೭೬, ಸಾಹಿತ್ಯ ಅಕಾಡೆಮಿ, ನವದೆಹಲಿ

೪. ಡಾ.ಆರ್.ಸಿ.ಹಿರೇಮಠ (ಸಂ): ನಾಗಚಂದ್ರ ವಿರಚಿತ ರಾಮಚಂದ್ರಚರಿತ ಪುರಾಣಂ ೧೯೭೫, ಭಾರತೀಯ ಜ್ಞಾನಪೀಠ ಪ್ರಕಾಶನ, ಕನಾಟ್ ಪ್ಲೇಸ್, ನವದೆಹಲಿ-೧

೫. ಮಿರ್ಜಿ ಅಣ್ಣಾರಾಯ : ರವಿಷೇಣ ರಾಮಾಯಣ, ೧೯೬೮, ಶಾಂತಿಸೇವಾಸದನ, ಸೇಡಬಾಳ

೬. ಡಾ. ಆರ್.ಸಿ.ಹಿರೇಮಠ (ಸಂ): ನಾಗಚಂದ್ರ ವಿರಚಿತ ರಾಮಚಂದ್ರಚರಿತ ಪುರಾಣಂ ೧೯೭೫, ಭಾರತೀಯ ಜ್ಞಾನಪೀಠ ಪ್ರಕಾಶನ, ಕನಾಟ್ ಪ್ಲೇಸ್, ನವದೆಹಲಿ-೧

೭. ಪ್ರೊ.ಟಿ.ಕೇಶವಭಟ್ಟ (ಸಂ) : ದೇವಪ್ಪ ವಿರಚಿತ ರಾಮವಿಜಯಕಾವ್ಯ, ೧೯೬೯, ಭಾರತೀಯ ಜ್ಞಾನಪೀಠ ಪ್ರಕಾಶನ, ಅಲಿಪೊರ್ ಪಾರ್ಕ್ ಪ್ಲೇಸ್, ಕಲಕತ್ತ-೨೭

೮. ಡಾ. ಎಲ್.ಬಸವರಾಜು : ಭಾಸ ರಾಮಾಯಣ ನಾಟಕ ತ್ರಿವೇಣಿ, ೧೯೫೮, ಗೀತಾ ಬುಕ್ ಹೌಸ್, ಮೈಸೂರು.

೯. ಎಸ್.ವಿ.ಪರಮೇಶ್ವರಭಟ್ಟ : ಕನ್ನಡ ಕಾಳಿದಾಸ ಸಂಪುಟ-೧೯೯೪, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೧೦. ಶ್ರೀ.ಲಕ್ಷ್ಮಣದಾಸ ವೇಲಣಕರ್ (ಅನು) : ಮಹಾಕವಿ ಶ್ರೀತುಲಸೀದಾಸ ವಿರಚಿತ ಶ್ರೀರಾಮಚರಿತ ಮಾನಸ, ೨೦೦೮, ಗೀತ ಪ್ರೆಸ್, ಗೋರಕ್‌ಪುರ್

೧೧. ಎ.ಆರ್.ಕೃಷ್ಣಶಾಸ್ತ್ರೀ : ಭಾಸ ಕವಿ, ೧೯೫೦, ಕನ್ನಡ ಕವಿ ಕಾವ್ಯ ಮಾಲೆ, ಕೃಷ್ಣಮೂರ್ತಿಪುರಂ ಮೈಸೂರು.

# ಪರಾಮರ್ಶನ ಗ್ರಂಥಗಳು


| | |
|---|---|
| ೧. ಅನ್ವೇಷಣೆ | ಸಂ.ಡಾ.ಎಚ್.ಟಿ.ಪೋತೆ, ೨೦೦೩<br>ತಿಪ್ಪಣ್ಣಂಬು ಪ್ರಕಾಶನ,<br>ಗುಲಬರ್ಗಾ ವಿಶ್ವವಿದ್ಯಾಲಯ<br>ಸ್ನಾತಕೋತ್ತರ ಕೇಂದ್ರ, ರಾಯಚೂರು |
| ೨. ಆದಿಕವಿ ವಾಲ್ಮೀ | ಮಾಸ್ತಿವೆಂಕಟೇಶ್ ಅಯ್ಯಂಗಾರ್, ೧೯೫೫<br>ಜೀವನ ಕಾರ್ಯಾಲಯ(ಟ್ರಸ್ಟ್), ಬೆಂಗಳೂರು-೧೯ |
| ೩. ಆಧುನಿಕ ಕನ್ನಡ ಮಹಾಕಾವ್ಯಗಳು | (ಸಂ) ಡಾ.ಬಸವರಾಜ ಸಾದರ, ೧೯೯೨<br>ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು |
| ೪. ಆಧುನಿಕ ಕನ್ನಡ ಮಹಾಕಾವ್ಯಗಳು | ಡಾ.ಶ್ರೀಧರಹೆಗಡೆ ಭದ್ರನ್ ೨೦೦೭<br>ಅಭಿನವ, ಮಾರೇನಹಳ್ಳಿ, ವಿಜಯನಗರ<br>ಬೆಂಗಳೂರು-೪೦ |
| ೫. ಉತ್ತರಕಾಂಡ ವಿಚಾರ | ಡಾ.ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ೧೯೮೧<br>ಜೀವನ ಕಾರ್ಯಾಲಯ(ಟ್ರಸ್ಟ್) ಬೆಂಗಳೂರು-೧೯ |
| ೬. ಕನ್ನಡ ಮಹಾಕಾವ್ಯಗಳಲ್ಲಿ ಸೀತೆಯ ಪಾತ್ರ | ಡಾ.ಮಂದಾಕಿನಿ ತವಗ, ೧೯೯೫, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು |
| ೭ ಕನ್ನಡ ಜಾನಪದದಲ್ಲಿ ರಾಮಾಯಣ ಮಹಾಭಾರತ | ಡಾ.ಪುಟ್ಟಸ್ವಾಮಿ, ೨೦೦೩, ಎಸ್.ಪಿ.ಮೋಹಿತ್ ಪ್ರಕಾಶನ, ಸಾದೊಳಲು, ಮಂಡ್ಯ-೫೭೧೪೨೮ |
| ೮. ಕನ್ನಡ ರಾಮಾಯಣ ಗ್ರಂಥಸೂಚಿ | ಡಾ.ಟಿ.ವಿ.ವೆಂಕಟಾಚಲ ಶಾಸ್ತ್ರೀ, ೧೯೯೮<br>ಪ್ರೇಮಸಾಯಿ ಪ್ರಕಾಶನ, ವಿಜಯನಗರ<br>ಬೆಂಗಳೂರು-೪೦ |
| ೯. ಕನ್ನಡ ಸಾಹಿತ್ಯದಲ್ಲಿ ಪುರಾಣಪ್ರಜ್ಞೆ | ಡಾ.ಕೆ.ಎಲ್.ಗೋಪಾಲಕೃಷ್ಣಯ್ಯ, ೧೯೮೨<br>ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು |

೧೦. ಕರ್ನಾಟಕ ಜನಪದ ಮಹಾಕಾವ್ಯಗಳು (ಸಂ) ತೀ.ನಂ.ಶಂಕರನಾರಾಯಣ, ೧೯೯೮ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು

೧೧. ಕಾವ್ಯಾರ್ಥಚಿಂತನ ಡಾ.ಜಿ.ಎಸ್.ಶಿವರುದ್ರಪ್ಪ, ೧೯೮೮ ಶಾರದ ಪ್ರಕಾಶನ, ಬೆಂಗಳೂರು

೧೨. ಕಾವ್ಯಾರ್ಥ ಪದಕೋಶ (ಸಂ) ಡಾ.ಜಿ.ಎಸ್.ಶಿವರುದ್ರಪ್ಪ ಮತ್ತು ಕೆ.ವಿ.ನಾರಾಯಣ, ೧೯೮೦, ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೫೬

೧೩. ಕರ್ನಾಟಕ ಭಾರತಕಥಾಮಂಜರಿ (ಸಂ) ಕುವೆಂಪು ಮತ್ತು ಮಾಸ್ತಿವೆಂಕಟೇಶ ಅಯ್ಯಂಗಾರ್, ೧೯೫೮, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು-೬

೧೩. ಕನ್ನಡ ಉತ್ತರರಾಮಚರಿತೆ ಡಾ.ಕೆ.ಕೃಷ್ಣಮೂರ್ತಿ,೧೯೫೬ ಶಾರದ ಮಂದಿರ ರಾಮಯ್ಯರಸ್ತೆ, ಮೈಸೂರು

೧೪. ಕನ್ನಡ ಕಾಳಿದಾಸ ಮಹಾಸಂಪುಟ ಎಸ್.ವಿ.ಪರಮೇಶ್ವರಭಟ್ಟ, ೧೯೯೪ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು

೧೫. ಕುವೆಂಪು ಸಮಗ್ರ ಗದ್ಯ ಸಂಪುಟ-೧ (ಸಂ) ಡಾ.ಕೆ.ಸಿ.ಶಿವಾರೆಡ್ಡಿ, ೨೦೦೩ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೬. ಕುವೆಂಪು ಸಮಗ್ರ ಗದ್ಯ ಸಂಪುಟ-೨ (ಸಂ) ಡಾ.ಕೆ.ಸಿ.ಶಿವಾರೆಡ್ಡಿ, ೨೦೦೩ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೭. ಕುವೆಂಪು ಸಾಹಿತ್ಯ ಲೋಕ-೪ (ಸಂ) ಹ.ಕ.ರಾಜೇಗೌಡ, ೧೯೮೯ ಸಹ್ಯಾದ್ರಿ ಪ್ರಕಾಶನ, ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು-೧೨

೧೮. ಕುವೆಂಪು — ಪ್ರಧಾನ ಗುರುದತ್ತ, ೨೦೦೬, ನವಕರ್ನಾಟಕ ಪ್ರಕಾಶನ, ಬೆಂಗಳೂರು

೧೯. ಕನ್ನಡ ವಾಲ್ಮೀಕಿ ರಾಮಾಯಣ (ಎರಡು ಸಂಪುಟಗಳು) — ಡಾ.ಸಿ.ಎನ್.ಶ್ರೀನಿವಾಸ ಅಯ್ಯಂಗಾರ್, ೧೯೭೧ ಡಿ.ವಿ.ಕೆ.ಮೂರ್ತಿ ಪ್ರಕಾಶಕರು, ಮೈಸೂರು-೪

೨೦. ಕುವೆಂಪು ಕಾವ್ಯ ಸಂಸ್ಕೃತಿ ಚರಿತ್ರೆಯ ರೂಪಕ — ನರಹಳ್ಳಿ ಬಾಲಸುಬ್ರಹ್ಮಣ್ಯ, ೨೦೦೪, ಅಂಕಿತ ಪುಸ್ತಕ, ಗಾಂಧಿಬಜಾರ್ ಮುಖ್ಯರಸ್ತೆ, ಬಸವನಗುಡಿ ಬೆಂಗಳೂರು-೪

೨೧. ಕುವೆಂಪು ಪುನರಾಲೋಕನ — ಜಿ.ಎಸ್.ಶಿವರುದ್ರಪ್ಪ, ೨೦೦೫, ಅಂಕಿತಪುಸ್ತಕ

೨೨. ಕುಮಾರವ್ಯಾಸ — ಕೀರ್ತಿನಾಥ ಕುರ್ತುಕೋಟಿ, ೧೯೮೯, ಸಾಹಿತ್ಯ ಅಕಾಡೆಮಿ, ನವದೆಹಲಿ

೨೩. ಕುವೆಂಪು ಸಾಹಿತ್ಯ ಕೆಲವು ಅಧ್ಯಯನಗಳು-೧ — ಡಾ.ದೇ.ಜವರೇಗೌಡ, ಸಹ್ಯಾದ್ರಿಪ್ರಕಾಶನ, ಮೈಸೂರು

೨೪. ಜನಪದ ಮಹಾಕಾವ್ಯ — ಡಾ.ತೀ.ನಂ.ಶಂಕರನಾರಾಯಣ, ೧೯೮೬ ಕರ್ನಾಟಕ ಸಂಘ, ಪುತ್ತೂರು

೨೫. ಜನಪದ ರಾಮಾಯಣ — (ಸಂ)ಡಾ.ಪಿ.ಕೆ.ರಾಜಶೇಖರ, ೧೯೭೩ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು

೨೬. ಕನ್ನಡ ಜನಪದ ಸಾಹಿತ್ಯ ಭಂಡಾರ 'ಗೀತೆಗಳು' ಸಂಪುಟ-೧ — (ಸಂ) ಕೃಷ್ಣಮೂರ್ತಿ ಮತಿಘಟ್ಟ, ೧೯೭೨ ಗುರುಮೂರ್ತಿ ಪ್ರಕಾಶನ, ಬೆಂಗಳೂರು

೨೭. ಜನಪದ ರಾಮಾಯಣ — (ಸಂ) ರಾಗೌ, ರಾಜಶೇಖರ.ಪಿ.ಕೆ, ಬಸವಯ್ಯ.ಎಸ್. ೧೯೭೩, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೨೮. ಭಾಸ ರಾಮಾಯಣ ನಾಟಕ ತ್ರಿವೇಣಿ — ಡಾ.ಎಲ್.ಬಸವರಾಜು, ೧೯೫೮ ಗೀತಾಬುಕ್ ಹೌಸ್ ಮೈಸೂರು

೨೯. ಭಾಷಾಂತರ ಕಲೆ — ಡಾ.ಪ್ರಧಾನ ಗುರುದತ್ತ, ೧೯೮೯ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರು-೧೯

| | |
|---|---|
| ೩೦. ಭಾಸ ಕಥಾಮಂಜರಿ | ಎಸ್.ಕೆ.ರಾಮಚಂದ್ರರಾವ್, ೧೯೭೬<br>ಸುಭಾಷ್ ಸ್ಟೋರ್ಸ್, ಅವೆನ್ಯೂ ರೋಡ್,<br>ಬೆಂಗಳೂರು-೨ |
| ೩೧. ಭಾಸ ಕವಿ | ಎ.ಆರ್.ಕೃಷ್ಣಶಾಸ್ತ್ರೀ, ೧೯೫೦<br>ಕನ್ನಡ ಕವಿ ಕಾವ್ಯಮಾಲೆ, ಕೃಷ್ಣಮೂರ್ತಿಪುರಂ<br>ಮೈಸೂರು |
| ೩೨. ಪೂರ್ವಸೂರಿಗಳೊಡನೆ | ಎ.ಎನ್.ಮೂರ್ತಿರಾವ್, ೧೯೮೧<br>ಡಿ.ವಿ.ಕೆ.ಮೂರ್ತಿ ಪ್ರಕಾಶಕರು, ಮೈಸೂರು-೪ |
| ೩೩. ಭವಭೂತಿ ಮಹಾಕವಿ | ಸಿ.ಕೆ.ವೆಂಕಟರಾಮಯ್ಯ, ೧೯೭೭<br>ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು |
| ೩೪. ಪಂಪ ರಾಮಾಯಣ ಸಂಗ್ರಹ | ಡಾ.ಡಿ.ಎಲ್.ನರಸಿಂಹಾಚಾರ್, ೧೯೮೧<br>ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ,<br>ಮೈಸೂರು |
| ೩೫. ಭಾಷೆ- ಕನ್ನಡ ವಿಶ್ವವಿದ್ಯಾಲಯ<br>ವಿಶ್ವಕೋಶ-೧ | (ಸಂ) ಕೆ.ವಿ.ನಾರಾಯಣ, ೨೦೦೫<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೩೬. ಭಾರತೀಯ ಸಾಹಿತ್ಯ ಸಮೀಕ್ಷೆ-೧ | (ಸಂ) ಎಲ್.ಎಸ್.ಶೇಷಗಿರಿರಾವ್, ೧೯೯೦<br>ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು |
| ೩೭. ಭಾರತೀಯ ಮತ್ತು ಪಾಶ್ಚಾತ್ಯ<br>ಮಹಾಕಾವ್ಯ ಪರಂಪರೆಗಳ<br>ಮನೋಧರ್ಮ | ಪ್ರೊ.ಎಲ್.ಎಸ್.ಶೇಷಗಿರಿರಾವ್, ೧೯೯೧<br>ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ,<br>ಬೆಂಗಳೂರು |
| ೩೮. ಮಹಾಕಾವ್ಯದ ಸ್ವರೂಪ | ಡಾ.ಜಿ.ಎಸ್.ಶಿವರುದ್ರಪ್ಪ, ೧೯೯೭<br>ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ,<br>ಧಾರವಾಡ |
| ೩೯. ಮಹಾಕಾವ್ಯ ಲಕ್ಷಣ | ಡಾ.ಟಿ.ವಿ.ವೆಂಕಟಾಚಲ ಶಾಸ್ತ್ರೀ, ೧೯೬೯<br>ತ.ವೆಂ.ಸ್ಮಾರಕ ಗ್ರಂಥಮಾಲೆ, ಮೈಸೂರು |

೪೦. ಮಾಸ್ತಿಯವರ ಕಾವ್ಯಗಳು — ಡಾ.ಸಾ.ಶಿ.ಮರುಳಯ್ಯ, ೧೯೯೧
ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು

೪೧. ಮಾಸ್ತಿಯವರ ಕಾವ್ಯ – ಒಂದು ಅಧ್ಯಯನ — ಡಾ.ಸಿ.ಪಿ.ಸಿದ್ಧಾಶ್ರಮ, ೧೯೯೨
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ
ಮೈಸೂರು–೬

೪೨. ಮಾಸ್ತಿ–ಜೀವನ ಮತ್ತು ಸಾಹಿತ್ಯ — ಎಲ್.ಎಸ್.ಶೇಷಗಿರಿರಾವ್, ೧೯೯೨
ಡಾ.ಮಾಸ್ತಿ ಶತಮಾನೋತ್ಸವ ಸಮಿತಿ,
ಬೆಂಗಳೂರು–೫೬೦೦೦೩

೪೩. ತಿಮ್ಮಪ್ಪಗೊಂಡ ಹಾಡಿದ ಗೊಂಡರ ರಾಮಾಯಣ — (ಸಂ) ಪ್ರೊ.ಹಿ.ಚಿ.ಬೋರಲಿಂಗಯ್ಯ, ೧೯೯೯
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೪. ನೋವನುಂಗಿ ನಕ್ಕವರು — ಹೆಚ್.ಎಸ್.ಪಾರ್ವತಿ, ೧೯೯೯, ಶ್ರೀಪ್ರೇಮಸಾಯಿ
ಪ್ರಕಾಶನ, ವಿಜಯನಗರ, ಬೆಂಗಳೂರು–೪೦

೪೫. ದೇಶೀಯ ಚಿಂತನ — ಡಾ. ಚಂದ್ರಶೇಖರ ಕಂಬಾರ, ೨೦೦೪
ಅಂಕಿತ ಪುಸ್ತಕ, ಬಸವನಗುಡಿ, ಬೆಂಗಳೂರು–೧೯

೪೬. ಯುಗಧರ್ಮ ಹಾಗೂ ಸಾಹಿತ್ಯ ದರ್ಶನ — ಕೀರ್ತಿನಾಥ ಕುರ್ತುಕೋಟಿ, ೧೯೬೨
ಮನೋಹರ ಗ್ರಂಥಮಾಲೆ, ಧಾರವಾಡ

೪೭. ಯುಗಯಾತ್ರೀ ಭಾರತೀಯ ಸಂಸ್ಕೃತಿ ಎರಡನೆಯ ಸಂಪುಟ — (ಸಂ) ಡಾ.ಕೆ.ವಿ.ಪುಟ್ಟಪ್ಪ, ೧೯೭೧
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ,
ಮೈಸೂರು

೪೮. ರವಿಷೇಣ ರಾಮಾಯಣ — ಮಿರ್ಜಿ ಅಣ್ಣಾರಾಯ, ೧೯೬೮
ಶಾಂತಿಸೇವಾಸದನ, ಸೇಡಬಾಳ

೪೯. ರಕ್ತಿ–ರೂಪಣೆ — ಡಾ.ಸಿ.ಎನ್.ರಾಮಚಂದ್ರನ್, ೨೦೦೭
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ

೫೦. ರಾಮಾಯಣ ರಸಾಯನ — ಶ್ರೀ.ಸುಗುಣೇಂದ್ರ ತೀರ್ಥಸ್ವಾಮಿಜಿ. ೨೦೦೫
ಪುತ್ತಿಗೆ ಮಠ, ಉಡುಪಿ. ಸಾಹಿತ್ಯ ಪ್ರಕಾಶನ,
ಕೊಪ್ಪಿಕರ್ ಬೀದಿ, ಹುಬ್ಬಳ್ಳಿ-೫೮೦೦೨೦

೫೧. ರಾಮಚಂದ್ರಚರಿತ ಪುರಾಣ — (ಸಂ) ಡಾ.ಆರ್.ಸಿ.ಹಿರೇಮಠ, ೧೯೭೫
ಭಾರತೀಯ ಜ್ಞಾನಪೀಠ ಪ್ರಕಾಶನ, ದೆಹಲಿ

೫೨. ರಾಮಚರಿತ ಮಾನಸ ಒಂದು ರಸಯಾತ್ರೆ — ಡಾ.ಮ.ಸು.ಕೃಷ್ಣಮೂರ್ತಿ, ೧೯೯೪
ಗೀತಾಬುಕ್ ಹೌಸ್, ಮೈಸೂರು

೫೩. ರಾಮಾಯಣ ಕಥಾಮಾಲಾ — ಕಾ.ಶ್ರೀ.ನಾಗರಾಜ, ೧೯೯೯
ಸಾಹಿತ್ಯ ಸಿಂಧು ಪ್ರಕಾಶನ, ನೃಪತುಂಗ ರಸ್ತೆ,
ಬೆಂಗಳೂರು-೧

೫೪.ರಾಮಾಯಣ ಪರಂಪರೆಯಲ್ಲಿ ಕನ್ನಡ ರಾಮಾಯಣಗಳು — ಡಾ.ಎಸ್.ವಿ.ಪ್ರಭಾವತಿ, ೨೦೦೫
ಸುಮುಖ ಪ್ರಕಾಶನ, ವಿದ್ಯಾರಣ್ಯನಗರ, ಮಾಗಡಿರಸ್ತೆ,
ಬೆಂಗಳೂರು-೨೩

೫೫. ರಾಮವಿಜಯ ಕಾವ್ಯ (ದೇವಪ್ಪ ವಿರಚಿತ) — (ಸಂ) ಪ್ರೊ.ಟಿ.ಕೇಶವಭಟ್ಟ, ೧೯೭೬
ಭಾರತೀಯ ಜ್ಞಾನಪೀಠ ಪ್ರಕಾಶನ, ಅಲಿಪುರ
ಪಾರ್ಕ್ ಪ್ಲೇಸ್, ಕಲ್ಕತ್ತಾ-೨೭

೫೬. ವಾಲ್ಮೀಕಿ ಕಂಡ ರಾಮಾಯಣ — ಬನ್ನಂಜೆ ಗೋವಿಂದಾಚಾರ್ಯ, ೧೯೯೩
ಯುಗಪುರುಷ ಪ್ರಕಟನಾಲಯ, ಕಿನ್ನಿಗೋಳಿ

೫೭. ವಾಲ್ಮೀಕಿ ರಾಮಾಯಣ — ವಿ.ಸೀತಾರಾಮಯ್ಯ, ೧೯೭೬
ಸಾಹಿತ್ಯ ಅಕಾಡೆಮಿ, ಹೊಸದೆಹಲಿ

೫೮. ವಾಲ್ಮೀಕಿ ಪ್ರತಿಭೆ — ಸಾ.ಕೃ.ರಾಮಚಂದ್ರರಾವ್, ೨೦೦೮
ಅಭಿಜ್ಞಾನ, ಬೆಂಗಳೂರು-೧೯

೫೯. ವಾಸ್ತವ ರಾಮಾಯಣ ಮೂ.ಮರಾಠಿ-ಡಾ.ಪದ್ಮಾಕರ.ವಿ.ವರ್ತಕ — (ಅನು) ಹೇಮಂತರಾಜ, ೨೦೦೨
ಸುಮಂತಪ್ರಕಾಶನ, ಬೆಂಗಳೂರು-೩೨

೬೦. ವಿಶ್ವರಾಮಕಥಾವಾಹಿನಿ — ಡಾ.ಪಿ.ಶಾಂತಾರಾಮಪ್ರಭು, ೨೦೦೮
ಪುಸ್ತಕನಿಧಿ, ಹಳ್ಳಾಡಿ–ಹರ್ಕಾಡಿ,
ಅಂಚೆ, ಕುಂದಾಪುರ–೫೭೬೨೧೦

೬೧. ಶ್ರೀಕುವೆಂಪು — (ಸಂ) ಡಾ.ಜಿ.ಎಸ್.ಶಿವರುದ್ರಪ್ಪ, ೧೯೮೦
ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು

೬೨. ಶ್ರೀನಿವಾಸ (ಮಾಸ್ತಿವೆಂಕಟೇಶ ಅಯ್ಯಂಗಾರ್) — ಪ್ರೊ.ಜಿ.ಎಸ್.ಸಿದ್ಧಲಿಂಗಯ್ಯ, ೨೦೦೨
ನವಕರ್ನಾಟಕ ಪ್ರಕಾಶನ, ಬೆಂಗಳೂರು

೬೩. ಶ್ರೀನಿವಾಸ ಸಾಹಿತ್ಯ (ಮಾಸ್ತಿ ಸಾಹಿತ್ಯ ಸಮೀಕ್ಷೆ) — (ಸಂ) ಡಾ.ಹಾ.ಮಾ.ನಾಯಕ. ೧೯೭೪
ಮಾಸ್ತಿ ಸನ್ಮಾನ ಸಮಿತಿ ಪರವಾಗಿ
ಡಿ.ವಿ.ಕೆ.ಮೂರ್ತಿ ಪ್ರಕಾಶಕರು, ಮೈಸೂರು–೪

೬೪. ಶ್ರೀನಿವಾಸ (ಮಾಸ್ತಿ ಸಂಭಾವನಾ ಗ್ರಂಥ) — (ಸಂ) ಮಾವಿನಕೆರೆ ರಂಗನಾಥನ್, ೧೯೭೨
ಡಾ.ಮಾಸ್ತಿ ಶತಮಾನೋತ್ಸವ ಸಮಿತಿ,
ಬೆಂಗಳೂರು–೩

೬೫. ಶ್ರೀರಾಮಾಯಣದರ್ಶನಂ ವಚನ ಚಂದ್ರಿಕೆ — ದೇಜಗೌ, ೧೯೫೪, ಡಿ.ವಿ.ಕೆ.ಮೂರ್ತಿ ಪ್ರಕಾಶಕರು
ಮೈಸೂರು–೪

೬೬. ಶ್ರೀರಾಮಾಯಣ ಪಟ್ಟಾಭಿಷೇಕ: ಒಂದು ಸಮಾಲೋಕನ — ವಿ.ಎಂ.ಇನಾಂದಾರ್, ೧೯೮೧
ಉಷಾ ಸಾಹಿತ್ಯ ಮಾಲೆ, ಮೈಸೂರು

೬೭. ಶ್ರೀರಾಮಾಯಣ ದರ್ಶನಂ ಮಹಾಕಾವ್ಯ ಸಮೀಕ್ಷೆ — ಕೊ.ಚೆನ್ನಬಸಪ್ಪ, ೧೯೯೯
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೬೮. ಶ್ರೀರಾಮಾಯಣ ದರ್ಶನಂ: ಒಂದು ವಿಮರ್ಶಾತ್ಮಕ ಅಧ್ಯಯನ — ಡಾ.ಎಚ್.ಜೆ.ಲಕ್ಕಪ್ಪಗೌಡ, ೧೯೯೨
ಸಹ್ಯಾದ್ರಿ ಪ್ರಕಾಶನ, ಮೈಸೂರು

೬೯. ಶ್ರೀರಾಮಾಯಣ ದರ್ಶನಂ ಸಮೀಕ್ಷೆ — ಡಾ.ಸಿ.ಪಿ.ಕೃಷ್ಣಕುಮಾರ್, ೧೯೮೯
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ,
ಮೈಸೂರು

೭೦. ಶ್ರೀ ರಾಮಚರಿತ ಮಾನಸ (ಮಹಾಕವಿ ಶ್ರೀತುಳಸಿದಾಸವಿರಚಿತ) — (ಅನು) ಕೀರ್ತನಾಚಾರ್ಯ ಶ್ರೀ ಲಕ್ಷ್ಮಣದಾಸ್ ವೇಲಣಕರ್, ೨೦೦೮ ಗೀತಾಬುಕ್ ಹೌಸ್, ಗೋರಕ್‌ಪುರ್, ಕೊಲ್ಕೊತ್ತಾ

೭೧. ಶ್ರೀ ರಾಮಾಯಣ ಪಾತ್ರ ಪ್ರಪಂಚ — ಪ್ರೊ.ಕೆ.ಎಸ್.ನಾರಾಯಣಾಚಾರ್ಯ, ೧೯೯೯ ರಾಜಲಕ್ಷ್ಮಿ ಪ್ರಕಾಶನ, ಬೆಂಗಳೂರು

೭೨. ಶ್ರೀ ರಾಮಕಥಾಮಂಜರಿ (ಸಂಪೂರ್ಣ ರಾಮಾಯಣ) — ವಿದ್ವಾನ್ ಎನ್.ರಂಗನಾಥಶರ್ಮ, ೨೦೦೦ ರಾಮಾಯಣ ಪ್ರಕಾಶನ ಸಮಿತಿ, ನ.ರಾ.ಕಾಲೋನಿ ಬೆಂಗಳೂರು-೧೯

೭೩. ಸಂವಾದ-ಮಾಸ್ತಿ ವಿಶೇಷ ಸಂಚಿಕೆ (೨೩-೨೪) — (ಸಂ)ಡಿ.ಎಸ್.ನಾಗಭೂಷಣ, ರಾಘವೇಂದ್ರಪಾಟೀಲ ಸ.ಉಷಾ, ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ ಚಿತ್ರದುರ್ಗ ಜಿಲ್ಲೆ

೭೪. ಸಮಗ್ರಗದ್ಯ-೨ — ಡಾ.ಜಿ.ಎಸ್.ಶಿವರುದ್ರಪ್ಪ, ೧೯೯೪ ಸ್ನೇಹ ಪ್ರಕಾಶನ, ಬೆಂಗಳೂರು

೭೫. ಸಮಗ್ರಗದ್ಯ-೩ — ಡಾ.ಜಿ.ಎಸ್.ಶಿವರುದ್ರಪ್ಪ, ೧೯೯೬ ಕಾಮಧೇನು ಪ್ರಕಾಶನ, ಬೆಂಗಳೂರು

೭೬. ಸಾಕೇತ (ಮೈಥಿಲಿಶರಣಗುಪ್ತ) — (ಅನು) ಕೆ.ಜಗನ್ನಾಥಶಾಸ್ತ್ರೀ, ೧೯೭೯ ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು

೮೦. ಶಾಸ್ತ್ರೀಯ ಸಂ-೨ — ಡಾ.ಟಿ.ವಿ.ವೆಂಕಟಾಚಲ ಶಾಸ್ತ್ರೀ, ೧೯೯೯ ಸ್ವಪ್ನ ಬುಕ್ ಹೌಸ್, ಬೆಂಗಳೂರು

೮೧. ಶಾಸ್ತ್ರೀಯ ಸಂ-೪ — ಡಾ.ಟಿ.ವಿ.ವೆಂಕಟಾಚಲ ಶಾಸ್ತ್ರೀ, ೧೯೯೯ ಸ್ವಪ್ನ ಬುಕ್ ಹೌಸ್, ಬೆಂಗಳೂರು

೮೨. ನಾಗಚಂದ್ರ: ಒಂದು ಅಧ್ಯಯನ — (ಸಂ) ಡಾ.ವಿಜಯಾದಬ್ಬೆ, ೧೯೮೩ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮

| | |
|---|---|
| ೮೩. ತುಲಸೀದಾಸ | ಡಾ.ಹಿರಣ್ಮಯ, ೧೯೮೧, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು. |
| ೮೪. ಮಹಾಕಾವ್ಯ ಒಂದು ಅವಲೋಕನ | (ಸಂ) ಜಿ.ಎಸ್.ಭಟ್ಟ, ಚೇತನ ಬುಕ್ ಹೌಸ್, ಚಾಮರಾಜ ಜೋಡಿರಸ್ತೆ, ಮೈಸೂರು. |
| ೮೫. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೩, ೪, ೫ | (ಪ್ರ.ಸಂ) ಡಾ.ಜಿ.ಎಸ್.ಶಿವರುದ್ರಪ್ಪ, ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. |

